|| ಶ್ರೀ ||



# ಹೊನ್ನಿನ ಹಂಬಲ

(ಕಾಲ್ಪನಿಕ ಕಾದಂಬರಿ)



ಲೇಖಕರು :

ಬಿ. ಎಸ್. ರಾಮಸ್ವಾಮಿ ಅಯ್ಯಂಗಾರ್, ಬಿ. ಎ.,

ಪ್ರಕಾಶಕರು :

ಎಂ. ಎಸ್. ಅಂಡ್ ಸನ್ಸ್

ಗಾಂಧಿ ಬಜಾರ್, ಬಸವನಗುಡಿ,

ಬೆಂಗಳೂರು - ೪.

# ಪ್ರಸ್ತಾವನೆ

ಇದೊಂದು ಕಾದಂಬರಿ. ಆದ್ಯಂತವಾಗಿ ಇದು ಕಾಲ್ಪನಿಕವಾದುದು. ಹೊನ್ನಿನ ಹಂಬಲದ ಹಲವಾರು ಸ್ವರೂಪ ಸಮಸ್ಯೆಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಪರಿಹಾರ ಪರಿಣಾಮಗಳನ್ನು ನಿರ್ಧರಿಸುವುದೇ ಈ ಕಾದಂಬರಿಯ ಹೆಬ್ಬಯಕೆ. ಆ ಬಯಕೆಯು ಈಡೇರಿರುವುದೋ ಇಲ್ಲವೋ ಈ ಗ್ರಂಥ ದೊಳಗಿನ ಪ್ರಕರಣಗಳನ್ನು ಕಣ್ಣಿಟ್ಟು ನೋಡಿದವರೇ ಹೇಳಬೇಕು.

ಹೊನ್ನನ್ನು ಅರಸಕೂಡದು, ಗಳಿಸಕೂಡದು, ಉಳಿಸಕೂಡದು ಎಂದು ಮುಂತಾಗೆಲ್ಲ ನಾನು ಹೇಳುವುದಿಲ್ಲ. ಬಾಳ ಮುನ್ನಡೆಗೆ, ಮಾನವನ ಪ್ರಗತಿಗೆ, ಹೊನ್ನು ಅತ್ಯಗತ್ಯ. ಹೊನ್ನಿನ ಹಂಬಲವು ಕೆಡುಕಾದುದಲ್ಲ. ಆದರೆ ಅದು ಹಿತಮಿತಗಳಿಂದ ಕೂಡಿರಬೇಕು. ಹೊನ್ನನ್ನು ಗಳಿಸಿ; ಬೇಕಾದಷ್ಟು ಗಳಿಸಿ; ಉಳಿಸಿ; ಬೇಡವೆನ್ನಲಿಲ್ಲ. ಆದರೆ ಅದನ್ನು ಗಳಿಸುವುದು ಧರ್ಮ ಮಾರ್ಗವನ್ನು ಅನುಸರಿಸಿ ಇರಲಿ; ಉಳಿಸುವುದು ಎಲ್ಲರ ಉಪಯೋಗ ಕ್ಕಾಗಿ ಇರಲಿ. ಲೋಭದಿಂದ ಹೊನ್ನನ್ನು ಕೂಡಿಡುವುದು; ಬಚ್ಚಿಡುವುದು — ಬಂಧನಗೊಳಿಸುವುದು — ಇವು ಬೇಡ; ಹೊನ್ನು ಕೈಯಿಂದ ಕೈಗೆ ಹೊರಳುತ್ತಿರಲಿ; ನಾಡ ನಾನಾ ಭಾಗಗಳಲ್ಲಿ ಹೊನ್ನ ಹೊಳೆಯು ಹರಿಯಲಿ. ಜನತೆಯು ಸತತವಾಗಿ ಸಂತಸದಿಂದ ತುಂಬಿ, ಸಮೃದ್ಧಿ — ಅಭಿವೃದ್ಧಿಗಳು ಎಲ್ಲೆಲ್ಲೂ ನೆಲೆಸಿ ನಲಿಯಲಿ ಎಂಬುದೇ ಈ ಗ್ರಂಥದ ಆಶಯ. ಆ ಆಶಯ ವನ್ನು ಈಡೇರಿಸುವ ಹೊಣೆಗಾರಿಕೆಯು ಒಡೆಯರ ಒಡೆಯನಾದ ಪರ ಮೇಶ್ವರನಿಗೆ ಸೇರಿದುದು. ಅವನು ಸನ್ಮತಿಯನ್ನು ಕರುಣಿಸಲಿ; ನಮ್ಮ ಸಮಾಜವೂ ನಮ್ಮ ನಾಡೂ ಮುಂದುವರಿಯಲಿ. ಮುಂದುವರಿದು ನಾಗರಿಕ ಪ್ರಪಂಚಕ್ಕೆ ಮಾದರಿಯಾಗಿರಲಿ; ಮುಂಬೆಳಕಾಗಿರಲಿ; ಮಾನವರು ಮೆಚ್ಚಿ ಮನಸೋಲುವಂತಿರಲಿ!

ಮೊನ್ನೆ ಮೊನ್ನೆ "ಪರಿವರ್ತನ ಚಿತ್ರಗಳು" ಎಂಬ ಸಣ್ಣ ಕಥಾ ಸಂಕಲನವನ್ನು ಪ್ರಕಟಿಸಿದ ಎಂ. ಎಸ್. ಅಂಡ್ ಸನ್ಸ್ ನವರು ಪ್ರಕೃತ

ಪುಸ್ತಕದ ಪ್ರಕಾಶಕರು. ಪುಸ್ತಕ ಪ್ರಕಟಣದ ಕಾರ್ಯದಲ್ಲಿ ಇತ್ತೀಚೆಗೆ ಹೊಸದಾಗಿ ಕಾಲಿಟ್ಟ ಇವರು — ನಾಲ್ಕು ನಾಲ್ಕು ಹೆಜ್ಜೆಗಳನ್ನು ಒಂದೊಂದೇ ಸಲಕ್ಕೆ ಎತ್ತಿಟ್ಟರೂ, ಮುಗ್ಗರಿಸದೆ ಮುನ್ನುಗ್ಗಿ ಮುಂದುವರಿದಾರು— ಎಂಬ ಅಂಶವನ್ನು ಕೊಂಡಾಡದಿರಲಾರೆ. ಅವರು ಪ್ರಕಟಣ ಕೆಲಸದಲ್ಲಿ ತೋರಿದ ಶ್ರದ್ಧೆಗೂ, ವಹಿಸಿದ ಶ್ರಮಕ್ಕೂ ನಾನವರಿಗೆ ಚಿ ರ ಋ ಣಿ. ಪರಮಾತ್ಮನು ಅವರಿಗೆ ಆಯುರಾರೋಗ್ಯೈಶ್ವರ್ಯಾದಿ ಸಕಲ ಸನ್ಮಂಗಳಗಳನ್ನು ಅಕ್ಷಯವಾಗಿ ನೀಡಿ ಕಾಪಾಡಲೆಂದು ಹಾರೈಸುತ್ತೇನೆ.

ಬಿ. ಎಸ್. ರಾಮಸ್ವಾಮಿ ಅಯ್ಯಂಗಾರ್
೪೨, ೨ನೇ ಕ್ರಾಸ್ ರಸ್ತೆ,
ಬಸವನಗುಡಿ.

ಬೆಂಗಳೂರು
೨೮-೫-೧೯೫೩.

## ಪ್ರಕಾಶಕರ ಬಿನ್ನಹ

ಕರ್ಣಾಟಕದಲ್ಲಿ ಚಿರಪರಿಚಿತ ಲೇಖಕರಾದ ಶ್ರೀಯುತ. ಬಿ. ಎಸ್. ರಾಮಸ್ವಾಮಿ ಅಯ್ಯಂಗಾರ್ಯರವರು ಹರಸಿಕೊಟ್ಟ '**ಹೊನ್ನಿನ ಹಂಬಲ**'ದ ಹಸ್ತಪ್ರತಿಯನ್ನು ಓದಿ ಆನಂದಿಸಿದೆವು; ನಮ್ಮ ಹತ್ತಾರು ಮಿತ್ರರೂ ಇದರ ಹಸ್ತಪ್ರತಿಯನ್ನು ಓದಿ ಆನಂದಗೊಂಡು ಮುದ್ರಣಮಾಡಿ ಮುಗಿಸಿಯೇ ಬಿಡಬೇಕೆಂದು ನನ್ನನ್ನು ಒತ್ತಾಯಪಡಿಸಿದರು. ಆ ಒತ್ತಾಯದ ಫಲಿತಾಂಶವಾಗಿಯೇ ಈಗ '**ಹೊನ್ನಿನ ಹಂಬಲ**'ದ ಮುದ್ರಿತ ಪ್ರತಿಯು ನಿಮ್ಮ ಕೈಯಲ್ಲಿದೆ.

ಪ್ರಪಂಚದಾದ್ಯಂತ ಆಧುನಿಕ ಸಮಾಜವನ್ನು ದುರುಗುಟ್ಟಿಕೊಂಡು ನೋಡುತ್ತಿರುವ ಅತ್ಯಂತ ಪ್ರಮುಖವಾದ ಸಮಸ್ಯೆಗಳಲ್ಲಿ ಸ್ವರ್ಣಶೇಖರಣದ ಸಮಸ್ಯೆಯು ಕಲಶಪ್ರಾಯವಾದುದು. ಧನ! .... ಧನ! ...... ಧನ! ದಿನ ಬೆಳಗಾದರೆ ಕೋಟಿಗಟ್ಟಲೆ ಕಂಠಗಳು ಈ ಧನಕ್ಕಾಗಿ ಬಾಯಿಬಿಡುತ್ತವೆ. ಕೋಟ್ಯನುಕೋಟಿ ಜನರು ಧನಸಂಪಾದನೆಗಾಗಿ ಎಲ್ಲ ದೇಶಗಳಲ್ಲಿಯೂ, ಎಲ್ಲ ಕಾಲಗಳಲ್ಲಿಯೂ, ಎಲ್ಲ ಬಗೆಯಲ್ಲಿಯೂ ದುಡಿಯುತ್ತಲೇ ಇರುತ್ತಾರೆ; ದುಡಿದು ದುಡಿದು ದಣಿದರೂ ಮತ್ತೆ ಮತ್ತೆ ಧನಕ್ಕಾಗಿ ಹೊಸ ವಿಧಾನದಲ್ಲಿ ದುಡಿಯತೊಡಗುತ್ತಾರೆ. ಹಾಗಾದಲ್ಲಿ ಧನದ ಪ್ರಾಧಾನ್ಯತೆಯು ಅತ್ಯಂತ ಹೆಚ್ಚಾದುದೆಂದು ಒಪ್ಪಿಕೊಂಡಂತಾಯಿತಲ್ಲವೆ?

ಧನವು ಬೇಕು; ಎಲ್ಲರಿಗೂ, ಎಲ್ಲೆಡೆಯಲ್ಲಿಯೂ, ಎಲ್ಲ ಕಾಲದಲ್ಲೂ ಅದು ಬೇಕಾದುದೇ ಅಲ್ಲವೆ? ಈ '**ಹೊನ್ನಿನ ಹಂಬಲ**'ದಲ್ಲಿ ಏನನ್ನು ಕುರಿತು ಪ್ರಸ್ತಾಪಿಸಲಾಗಿದೆ? ಹಣವನ್ನು ಗಳಿಸಬಹುದು; ಉಳಿಸಬಹುದು; ಸಾಕೆನ್ನುವಷ್ಟು ಬಳಗಿಸಬಹುದು; ಅಲ್ಪಸ್ವಲ್ಪ ಕೂಡಿಡಲೂಬಹುದು; ಆದರೆ ಹಣವನ್ನು ಬಚ್ಚಿಡಲು ಮಾತ್ರ ಕೂಡಲೇ ಕೂಡದು. ಬಚ್ಚಿಟ್ಟ ಭಾಗ್ಯದಿಂದ ಸಮಾಜವು ವಂಚಿತವಾಗುತ್ತದೆ; ದೇಶದ ಮುನ್ನಡೆಗೆ ತಡೆಬರುತ್ತದೆ; ಜನಸಾಮಾನ್ಯದ ಕಷ್ಟನಷ್ಟಗಳು ಹೆಚ್ಚುತ್ತವೆ; ಬಚ್ಚಿಟ್ಟವರ

ಬಾಳೀ ಬಹಳ ಕಷ್ಟ ನಷ್ಟಗಳಿಗೆ ಗುರಿಯಾದೀತು; ಆದುದರಿಂದ ಬಚ್ಚಿಡ ಬಾರದು. ಬದಲಾಗಿ, ಭಾಗ್ಯವು ಬಿಚ್ಚಿಟ್ಟಂತೆ ಇರಬೇಕು. ನಾಡಲ್ಲಿ ಎಡೆತಡೆಗಳಿಲ್ಲದೆ ಹೊನ್ನಿನ ಹೊಳೆಯು ಎಲ್ಲೆಲ್ಲೂ ಹರಿಯುತ್ತಿರಬೇಕು. ಅಭಿವೃದ್ಧಿಯು ಸಾರೋದ್ಧಾರವಾಗಿ ಮುಂದುವರಿಯುತ್ತಿರಬೇಕು. ಶ್ರೀಮಂತರ ಮತ್ತು ಶ್ರಮಜೀವಿಗಳ ನಡುಮಧ್ಯೆ ಇರುವ ಪ್ರಶ್ನೆ ಎಂದರೆ ಧನದ ಸದುಪಯೋಗ ಅಥವಾ ದುರುಪಯೋಗ. ಸದುಪಯೋಗದಿಂದ ಸಂತಸವು ನೆಲೆಸೀತು; ದುರುಪಯೋಗದಿಂದ ದೇಶವು ಬಡವಾದೀತು ಎಂಬ ಸಮಸ್ಯೆಗಳ ಪರಿಹಾರವನ್ನು ಶ್ರೀಯುತರ ವೀರವಾಣಿಯು ಎತ್ತಿ ನಿರೂಪಿಸುತ್ತಿದೆ.

ಈ ಗ್ರಂಥವಾಚನದಿಂದ ಸಮಾಜದಲ್ಲಿ ಶ್ರೀಮಂತರು ನಮ್ರರೂ, ಉದಾರಿಗಳೂ, ಉಜ್ವಲ ತ್ಯಾಗಿಗಳೂ ಆಗಲೆಂದೂ, ಸ್ಯಾಮ್ಯುಯಲ್ಲನಂತಹ ಸತ್ಯವಂತರು, ಡೇನಿಯಲ್ಲನಂತಹ ಸತ್ಸೇವಕರು, ಫ್ರೆಡರಿಕನಂತಹ ಸೊಡರಿಗೆ ಎಣ್ಣೆಯಂತಿರುವ ಸ್ನೇಹಿತರೂ, ಪಾದ್ರಿಗಳಂತಹ ಜನಸೇವಕರೂ, ಲ್ಯೂಸಿ, ಆರ್ಥರ್ ಮುಂತಾದ ಆದರ್ಶ ಶ್ರಮಜೀವಿಗಳೂ, ಸ್ಯಾಮ್‌ಸನ್‌ರಂತಹ ನೆರೆಯುವರೂ ಪೀಟರನಂತೆ — ಅಂತ್ಯದಲ್ಲಾದರೂ—ಪಶ್ಚಾತ್ತಾಪಿಗಳಾಗುವವರೂ ಹೆಚ್ಚಲೆಂದು ಬಯಸುವುದೇ ನಮ್ಮ ಪ್ರಕೃತ ಪ್ರಕಟಣೆಯ ಪ್ರಥಮೋದ್ದೇಶ.

ಇಂತಹ ಹಿರಿಯ ಉದ್ದೇಶವನ್ನು ಸಾಧಿಸುವ ಅವಕಾಶವನ್ನು ನಮ್ಮ ಪ್ರಕಾಶನ ಪ್ರಯತ್ನದ ತಾರುಣ್ಯದಲ್ಲಿ "**ಹೊನ್ನಿನ ಹಂಬಲ**"ದ ಮೂಲಕ ನಮಗೆ ಒದಗಿಸಿಕೊಟ್ಟ ಗ್ರಂಥಕರ್ತರಿಗೆ ನಾವು ಚಿರಋಣಿಗಳು. ಅವರಿಗೂ ಮತ್ತು ವಾಚಕವೃಂದಕ್ಕೂ ಅನಂತಕಲ್ಯಾಣಗಳು ದೊರಕಲಿ ಎಂದು ಹಾರೈಸುತ್ತೇವೆ.

ಬೆಂಗಳೂರು ೪. } **ಎಂ. ಎಸ್. ಅಂಡ್ ಸನ್ಸ್.**
೨೮–೫–೧೯೫೩

# ಪ ರಿ ವಿ ಡಿ

# ಹೊನ್ನಿನ ಹಂಬಲ

## ಪ್ರಕರಣ ೧.

ವ್ಯಕ್ತಿಪರಿಚಯ

ಮಹಾಕ್ರಾಂತಿಯ ಕಾಲವದು. ಫ್ರಾನ್ಸ್ ದೇಶದಲ್ಲಿ ಅರಸರ ಆಳ್ವಿಕೆಯು ಕೊನೆಗೊಂಡು ಪ್ರಜಾಪ್ರಭುತ್ವವು ನೆಲೆಗೊಳ್ಳುವ ಸಮಯವದು. ಕ್ರಾಂತಿಕಾಲದಲ್ಲಿ ಅನೇಕರು ಮಡಿದುಹೋದರು. ಹಲಕೆಲವು ಕಾರ್ಯವಾದಿಗಳೂ, ಕುತಂತ್ರಿಗಳೂ, ಕೊಲೆ ಕಳವುಗಳಿಗೆ ಹೇಸದವರೂ, ಪಾಪಕ್ಕೆ ಅಂಜದವರೂ ಶ್ರೀಮಂತರಾದರು. ಹಾಗೆ ಶ್ರೀಮಂತಿಕೆಯನ್ನು ಗಳಿಸಿದವರಲ್ಲಿ ಪೀಟರನೊಬ್ಬ. ಅವನ ನಿಜವಾದ ಹೆಸರು ಪೀಟರೋ, ಫಿಲಿಫ್ಸ್ಸೋ, ಆರ್ಥರನೋ, ಮ್ಯಾಥ್ಯೂಸ್ಸೋ, ಜಾನ್ಸನ್ನೋ, ಮ್ಯಾಡಿಸನ್ನೋ, ಅಂಥೋನಿಯೋ ಸರಿಯಾಗಿ ತಿಳಿಯದು. ಅಂತೂ ನಲವತ್ತು ವರ್ಷಗಳಿಗೆ ಮುನ್ನ ಅವನು ಪ್ಯಾರಿಸ್ ನಗರಕ್ಕೆ ಬಂದು ಅಲ್ಲಿ ನೆಲೆಸಿದಾಗ ಆವನ ಹೆಸರು ಪೀಟರ್!

ಕ್ರಾಂತಿ ಯುದ್ಧಗಳು ಭರದಿಂದ ಸಾಗುತ್ತಿದ್ದ ಆ ಕಾಲದಲ್ಲಿ ಸ್ವತ್ತುಗಳು ಕೈಮಾರಿದುವು. ತನಗೆ ಕರಗತವಾದ ಭೂಸ್ಥಿತಿಯನ್ನೂ ಇತರ ಸ್ವತ್ತುಗಳನ್ನೂ ಪೀಟರನು ಮಾರಿದನು. ಅವುಗಳನ್ನು ಹೊನ್ನಿನ ನಾಣ್ಯಗಳಾಗಿ ಪರಿವರ್ತಿಸಿಕೊಂಡನು. ತನ್ನ ಆ ವಿಶೇಷವಾದ ಗುಪ್ತನಿಧಿಯನ್ನು ಅವನು ಪ್ಯಾರಿಸ್ಸಿಗೆ ತಂದನು. ಅಲ್ಲೊಂದು ಜನಸಂದಣಿ ವಿಶೇಷವಾಗಿಲ್ಲದ ಪ್ರದೇಶ; ಅಲ್ಲಿ ಹತ್ತಿಪ್ಪತ್ತು ಎಕರೆ ನೆಲದೊಡನೆ ಕೂಡಿದ ಒಂದು ಬಂಗಲೆ ಇದ್ದಿತು. ಅದೇನೂ ದೊಡ್ಡದಾಗಿರಲಿಲ್ಲ. ಆದರೆ ಅದು ಪಟ್ಟಣದ ಗಲಿಬಿಲಿಯಿಂದ ದೂರವಾಗಿದ್ದಿತು. ಪೀಟರನಿಗೆ ಬೇಕಾದುದೂ ಅದೇ. ಅವನು

ಆ ಬಂಗಲೆಯನ್ನು ಅದಕ್ಕೆ ಸೇರಿದ ನೆಲದೊಂದಿಗೆ ಕೊಂಡುಕೊಂಡು ಅಲ್ಲಿ ವಾಸಮಾಡತೊಡಗಿದನು.

ಪೀಟರನ ಪೂರ್ವವೃತ್ತಾಂತವನ್ನು ಅರಿತವರು ಒಬ್ಬಿಬ್ಬರಿದ್ದರು. ಆದರೆ ಅವನು ಪ್ಯಾರಿಸ್ಸಿಗೆ ಬರುವ ಮುನ್ನವೇ ಅವರು ಸತ್ತುಹೋಗಿದ್ದರು. ಅವರು ಸತ್ತುದು ತಮ್ಮ ಹಾಸಿಗೆಯಲ್ಲೋ, ಕತ್ತಲ ಕೋಣೆಯಲ್ಲೋ, ಯುದ್ಧಭೂಮಿಯಲ್ಲೋ ತಿಳಿಯದು. ಅವರು ಎಲ್ಲಿ ಸತ್ತರು? ಹೇಗೆ ಸತ್ತರು? ಏತಕ್ಕೆ ಸತ್ತರು? ಎನ್ನುವುದನ್ನು ಪೀಟರನು ತಿಳಿದಿರಬಹುದು. ಆದರೆ ತನಗೆ ತಿಳಿದ ವಿಚಾರವನ್ನು ಇತರರಿಗೆ ಬಹಿರಂಗಪಡಿಸಲು ಅವನು ಸಮ್ಮತಿಸಲಿಲ್ಲ. ಸ್ವಾಭಾವಿಕವಾಗಿಯೇ ಅವನು ರಹಸ್ಯದ ಮನುಷ್ಯ. ಇನ್ನು ಇಂತಹ ವಿಚಾರಗಳಲ್ಲಿ ಅವನು ಬಾಯಿ ಬಿಟ್ಟಾನೇ? ಹೇಗೋ ಯಾವುದೊಂದು ಗೊಂದಲಕ್ಕೂ ಸಿಕ್ಕಿಬೀಳದೆ, ಅನುಚಿತ ಗದ್ದಲವನ್ನೆಬ್ಬಿಸದೆ, ಅವನು ನಲವತ್ತುವರ್ಷ ಕಾಲವನ್ನು ನಯವಾಗಿ ನೂಕಿ ನೆಮ್ಮದಿಯಿಂದಿದ್ದನು. ಈಗ ಪೀಟರನು ತನ್ನ ಎಪ್ಪತ್ತನೆಯ ವಯಸ್ಸನ್ನು ಸಮೀಪಿಸಿದ್ದಾನೆ.

ಮುವ್ವತ್ತು ವಯಸ್ಸಿನ ಪೀಟರನಿಗೆ ಮೇರಿ ಎಂಬ ಒಬ್ಬ ತರುಣ ಪತ್ನಿ ಇದ್ದಳಂತೆ. ಅವಳು ಅತುಳ ಶ್ರೀಮಂತನಾದ ಲೂಯಿಫಿಲಿಪ್ಸನ ಒಬ್ಬಳೇ ಮಗಳು. ಫಿಲಿಪ್ಸನು ಒಂದು ದಿನ ನೆರೆಯೂರಿಗೆ ಹೋಗುವಾಗ ಬೇಡ ವೆಂದರೂ ಕೇಳದೆ ಪೀಟರನೂ ಅವನನ್ನು ಹಿಂಬಾಲಿಸಿದನಂತೆ. ಹತ್ತೆಂಟು ದಿನಗಳ ತರುವಾಯ ಹಿಂತಿರುಗಿ ಬರುವಾಗ ಪೀಟರನು ಏಕಾಂಗಿಯಾಗಿ ಬಂದನಂತೆ. "ತಂದೆ ಎಲ್ಲಿ ?" ಎಂದು ತನ್ನ ಪತ್ನಿ ತನ್ನನ್ನು ಕೇಳಿದಾಗ "ಆತನು ಹೃದಯಸ್ತಂಭನದಿಂದ ಸತ್ತುಹೋದ" ಎಂದನಂತೆ. ಇದನ್ನು ಮೇರಿ ನಂಬಲೇ ಇಲ್ಲವಂತೆ. ಅವಳು ಕೊರಗಿ, ಕೊರಗಿ, ಕೃಶವಾಗಿ, ಆರುತಿಂಗಳಲ್ಲಿ ಕಾಲವಶಕ್ಕೆ ತುತ್ತಾದಳಂತೆ. ಹೇಗೂ ಫಿಲಿಪ್ಸನ ಅಪಾರ ಆಸ್ತಿಗೆ ಪೀಟರನೇ ಒಡೆಯನಾದ. ಮೇರಿ ಮೃತಳಾದುದರಿಂದ ಅವಳ ವಂಶವೂ ಅವಳೊಂದಿಗೇ ತೊಡೆದುಹೋಯಿತು. ಇದು ಗಾಳಿಯಲ್ಲಿ ಇತ್ತೀಚೆಗೆ ತೂರಿ ಬಂದ ಸಮಾಚಾರ.

ಅಂತೂ ಪೀಟರನಿಗೆ ಈಗ ಹೆಂಡತಿ, ಮಕ್ಕಳು, ಯಾರೂ ಇಲ್ಲ. ಬಂಧುಗಳಂತೂ ಮೊದಲೇ ಇಲ್ಲ. ಪ್ಯಾರಿಸ್ಸಿಗೆ ಬಂದನಂತರ ಈ ನಲವತ್ತು ವರ್ಷಗಳೂ ಅವನು ಏಕಾಂಗಿ. ಯಾರೊಂದಿಗೂ ಅವನು ವಿಶೇಷವಾಗಿ ಪಳಗಿಕೊಳ್ಳಲಿಲ್ಲ. ತನ್ನ ನೆರೆಹೊರೆಯವರು ಕೆಲವರಲ್ಲಿ ಮಾತ್ರ ಅವನು 'ಎಷ್ಟೋ ಅಷ್ಟು' ಎನ್ನುವಂತೆ ಪ್ರಕೃತವಿದ್ದಷ್ಟು ಪಳಗಿಕೊಂಡಿದ್ದನು.

ಅವನಿಗೆ ಧನವೇ ದೇವತೆ. 'ಧನವಿಲ್ಲದವನು ದೆವ್ವಕ್ಕೆ ಸಮಾನ' ಎಂಬುದು ಅವನ ಭಾವನೆ. 'ಪುಕಾರಿಗೆ ಓಟ ಹೆಚ್ಚು; ನೋಟ ಕಡಿಮೆ' ಎಂದು ಎಷ್ಟೋ ಸಲ ತನ್ನ ಮೇಲಿನ ಟೀಕೆಗಳನ್ನು ಅವನು ಕೊನೆಗಾಣಿಸಿದ್ದನು. ಒಮ್ಮೊಮ್ಮೆ ಅವಕಾಶ ಒದಗಿದಂತೆಲ್ಲ "ಪ್ರತಿ ಮನುಷ್ಯನೂ ತನ್ನ ಪಾಪಗಳನ್ನು ಸಕಾಲದಲ್ಲಿ ಅರಿತುಕೊಳ್ಳುವುದೇ ಪರಮಾತ್ಮನ ಕರುಣೆಗೆ ಪಾತ್ರನಾಗುವುದಕ್ಕೆ ಉತ್ತಮವಾದ ದಾರಿ" ಎಂದು ಇತರರಿಗೆ ಸಮಯೋಚಿತವಾಗಿ ಅವನು ವಿವೇಕ ಹೇಳಿದುದೂ ಉಂಟು. ಧನಪ್ರಿಯನಿಲ್ಲದೆಯೇ ಇತರರ ದೃಷ್ಟಿಯಲ್ಲಿ ತಾನು ದೊಡ್ಡವನಾಗಿ ಕಾಣಿಸಿಕೊಳ್ಳಬೇಕು ಎಂಬ ಆಶೆಯೂ ಅವನಿಗೆ ಇದ್ದಿರಬಹುದು. ತನ್ನಲ್ಲಿ ಯಾರಿಗೂ ಸಂಶಯವು ಬಾರದಿರಬೇಕು ಎಂಬುದು ಅವನ ಮತ್ತೊಂದು ಭಾವನೆ ಇದ್ದಿರಬಹುದು.

ಪ್ರತಿಫಲಾಪೇಕ್ಷೆಯಿಲ್ಲದೆ ಪೀಟರನು ಯಾವಕೆಲಸವನ್ನೂ ಮಾಡುತ್ತಿರಲಿಲ್ಲ. ಅವನು ಯಾರಲ್ಲಿಯಾದರೂ ಸ್ನೇಹವನ್ನು ಬೆಳೆಸಿದ್ದುಂಟು. ಆದರೆ ಉದ್ದೇಶಿಸಿದ ಕಾರ್ಯವು ಸಫಲಗೊಂಡರೆ ಸಾಕು; ಮರುಕ್ಷಣದಲ್ಲಿಯೇ ಆ ಸ್ನೇಹವು ಮಾಯವಾಗುತ್ತಿತ್ತು. ಇಷ್ಟಾದರೂ 'ಹಿರಿಯಗುರಿಯನ್ನು ಸಾಧಿಸುವುದೇ ನನ್ನ ಮುನ್ನೋಟ;' 'ತನ್ನ ತಿಳಿಗೇಡಿತನವನ್ನು ತಿಳಿದುಕೊಳ್ಳದೆ ಇರುವುದಕ್ಕಿಂತ 'ಮನುಷ್ಯನಿಗೆ ಹೆಚ್ಚಿನ ತಿಳಿಗೇಡಿತನವಿಲ್ಲ' ಎಂದು ಮುಂತಾಗಿ ಅವನು ಇತರರಲ್ಲಿ ಸಮಯವರಿತು ಸುಭಾಷಿತವನ್ನು ಒಪ್ಪಿಸುತ್ತಿದ್ದನು.

ಆದರೆ ಒಮ್ಮೆ ಚರ್ಚಿನಲ್ಲಿ ಪಾದ್ರಿಯು ಉಪದೇಶ ಮಾಡುತ್ತಿದ್ದಾಗ "ಸೂಜಿಯ ಕಣ್ಣಿನಲ್ಲಿ ಪ್ರವೇಶಿಸುವುದು ಒಂಟೆಗೆ ಎಷ್ಟು ಸುಲಭವೋ ಅಷ್ಟೇ

ಸುಲಭ ಧನವಂತನು ಸ್ವರ್ಗದ್ವಾರವನ್ನು ಮುಟ್ಟುವುದು ” ಎಂದು ಸೂಚಿಸಿದ್ದನು. ಆಗ ಪಾದ್ರಿಯ ಎದುರಿನಲ್ಲಿ ಕುಳಿತಿದ್ದ ಪೀಟರನಿಗೆ ತಡೆಯಲಾರದೆ ಕೋಪವು ಉಕ್ಕಿ ಬಂದಿತು. ತನ್ನನ್ನು ಹಂಗಿಸುವುದಕ್ಕಾಗಿಯೇ ಯೇಸು ಕ್ರಿಸ್ತನ ಸುವಾರ್ತೆಯ ಆ ಪ್ರವಚನವನ್ನು ಪಾದ್ರಿಯು ಎತ್ತಿ ನುಡಿದಿರಬೇಕೆಂದು ಅಂದಿನಿಂದ ಅವನು ಆ ಚರ್ಚಿಗೆ ಹೋಗುವುದನ್ನು ನಿಲ್ಲಿಸಿ ಬೇರೊಂದು ಚರ್ಚಿಗೆ ಹೋಗಲನುವಾದನು. ಇದಕ್ಕೆ ಹಿನ್ನೆಲೆಯಾದರೂ ಇಷ್ಟೇ :

ಒಂದು ದಿವಸ ಮೇಲ್ಕಂಡ ಪಾದ್ರಿಯು ಪೀಟರನನ್ನು ಕಾಣಲು ಅವನ ಬಂಗಲೆಗೆ ಬಂದ. ಆಗ ಗುಡ್ಡೆ ಗುಡ್ಡೆಯಾಗಿ ಎಣಿಸಿಟ್ಟಿದ್ದ ಹೊನ್ನಿನ ನಾಣ್ಯಗಳನ್ನು ಪೀಟರನು ತನ್ನ ಹಣದ ಚೀಲಕ್ಕೆ ತುಂಬುತ್ತಿದ್ದನು. ಪಾದ್ರಿಯನ್ನು ಕಂಡ ಒಡನೆಯೇ ಪೀಟರನು ಹೊನ್ನಿನ ಚೀಲಕ್ಕೆ ತುಂಬದೆ ಉಳಿದಿದ್ದ ನಾಣ್ಯಗಳಿಗೆ ಸರಕ್ಕನೆ ತನ್ನ ಕರವಸ್ತ್ರವನ್ನು ಮುಚ್ಚಿದನು. ಬಳಿಕ ಮೇಲೆದ್ದು ಪಾದ್ರಿಯನ್ನು ಎದಿರ್ಗೊಂಡು ಪೀಟರನು ಆತನನ್ನು ಸ್ವಾಗತಿಸಿದ :

ಪೀ : “ ಏನು ಇಷ್ಟುದೂರ ಬಂದಿರಿ ? ಬನ್ನಿ ; ಕುಳಿತುಕೊಳ್ಳಿ. ”

ಪಾ : ನಿಮ್ಮಲ್ಲೇ ಬಂದೆ. ನಾನು ಬಂದುದು ನಿಮಗೆ ತೊಂದರೆ ಕೊಟ್ಟಂತೆ ಆಗಲಿಲ್ಲವಷ್ಟೆ ? ಏನೋ ಕೆಲಸದಲ್ಲಿದ್ದಿರಿ ಪಾಪ !

ಪೀ : ಏನಿಲ್ಲ ;....ತಾವು ದಯಮಾಡಿಸಿದ ಕಾರ್ಯ ?

ಪಾ : ಪಾದ್ರಿಗಳಿಗೆ ಬೇರೇನು ಕೆಲಸವಿದೆ ? ಆತ್ಮದ ಉದ್ಧಾರ—ಮಾನವನ ಮುನ್ನಡೆ—ಪಾಪಿಗಳ ಪರಿವರ್ತನ—ಪರಮಾತ್ಮನ ಕೀರ್ತಿಪ್ರಚಾರ—ಇವೇ ನಮ್ಮ ಕೆಲಸ.

ಪೀ : ಸರಿಯೇ ; ನ್ಯಾಯವಾದದ್ದೇ. ಬೇರೇನು ವಿಷಯ ?

ಪಾ : ನಮ್ಮ ಚರ್ಚಿನ ಕಟ್ಟಡ ಶಿಥಿಲವಾಗಿ ಹೋಗಿದೆ. ಅದರ ಜೀರ್ಣೋದ್ಧಾರಕ್ಕೆ ನೂರು ಹೊನ್ನುಗಳನ್ನು ಸಹಾಯಮಾಡಿ ; ದೇವರ ಕೃಪೆಗೆ ಪಾತ್ರರಾಗಿ ; ಸಹಜೀವಿಗಳಲ್ಲಿ ಪ್ರೇಮವನ್ನು ತೋರಿ.

ಪೀ : ತೋರಿಸಬಹುದಿತ್ತು. ಆದರೆ ಪಾದ್ರಿಗಳೇ! ನನ್ನಲ್ಲಿ ನೂರೇಕೆ? ಒಂದು ಬಿಡಿ ಹೊನ್ನೂ ಸಿಕ್ಕದು. ದಯವಿಟ್ಟು ಮನ್ನಿಸಿ. ನಾಳೆ ನಾನು ಐನೂರು ಹೊನ್ನು ಸಾಲ ತೀರಿಸುವುದಿದೆ. ಐವತ್ತು ಹೊನ್ನನ್ನೂ ಸಹ ಹೊಂದಿಸಲಾರದೆ ತತ್ತಳಿಸುತ್ತಿದ್ದೇನೆ.

ಪಾ : ಪರಲೋಕದ ಆಸೆಯೇ ಮನುಷ್ಯನ ನಡತೆಗೆ ಪ್ರೋತ್ಸಾಹ.

ಪೀ : ಒಳಿತಾಯಿತು; ಅದನ್ನು ಒಪ್ಪುತ್ತೇನೆ; ಆದರೆ ಇಹಲೋಕ ಮುಗಿದ ಮೇಲಲ್ಲವೆ ಪರಲೋಕದ ಮಾತು!

ಹೀಗೆಂದು ಪೀಟರನು ಪಾದ್ರಿಯನ್ನು ಅಲ್ಲಗಳೆದಿದ್ದನು. ನಾಲ್ಕು ಗೊಂಚಲು ದ್ರಾಕ್ಷಿಗಳನ್ನೂ, ಹತ್ತು ಸೇಬುಗಳನ್ನೂ ಆತನ ಚೀಲದಲ್ಲಿ ತುಂಬಿ ನಯವಾಗಿ ಪಾದ್ರಿಯನ್ನು ಹೊರದೂಡಿದ್ದನು. ಇದನ್ನು ನೆನೆಸಿ ನಿರಾಶನಾದ ಪಾದ್ರಿಯು ದುಃಖಿತನಾಗಿದ್ದನು. ತನ್ನನ್ನು ಬೀಳ್ಕೊಡುವ ಮುನ್ನ ಆತನು ಪೀಟರನಿಗೆ ಹೇಳಿದ್ದನು :

"ಯಾವಾಗಲೂ ಆಚರಿಸಬಹುದಾದ ರೀತಿನೀತಿಗಳನ್ನು ಪ್ರತಿಯೊಬ್ಬರಲ್ಲಿಯೂ ಯಾವಾಗಲೋ ಒಂದೊಂದು ಸಲ ಮಟ್ಟಿಗೆ ಕಾಣಬಹುದು. ನಡತೆ ಒರಟಾಗಿದ್ದೆಡೆ ಮಾತು ನಯವಾಗಿರಲಾರದು. ಉಪಯೋಗವೇ ಒಳ್ಳೆಯ ಪದಾರ್ಥಕ್ಕೆ ಕುರುಹು. ಬಿತ್ತದಗದ್ದೆಯಲ್ಲಿ ಗೋಧಿ ಬೆಳೆಯದು."

ಇದು ನಡೆದನಂತರ ಮರು ಭಾನುವಾರವೇ ಪಾದ್ರಿಯು ಶ್ರೀಮಂತನ ಮತ್ತು ಒಂಟೆಯ ಸಾಮ್ಯವನ್ನು ತನ್ನ ಉಪದೇಶದಲ್ಲಿ ಕೂಡಿಸಿಕೊಂಡಿದ್ದನು. ಅದು ಪೀಟರನ ಮನಸ್ಸನ್ನು ಕರಗಿಸಿ ಪರಿವರ್ತನಗೊಳಿಸುವುದಕ್ಕೆ ಬದಲಾಗಿ ಅವನಲ್ಲಿ ಪಿತ್ಥವಿಕಾರವನ್ನುಂಟುಮಾಡಿತು.

ಇದಾದ ಬಳಿಕ ಪೀಟರನು ತಾನು ಅದುವರೆಗೆ ಪ್ರತಿ ಭಾನುವಾರವೂ ಹೋಗಿ ಬರುತ್ತಿದ್ದ ಚರ್ಚನ್ನು ಬಿಟ್ಟ. ಬದಲಾಗಿ ಬೇರೊಂದು ಚರ್ಚಿಗೆ ಹೋಗತೊಡಗಿದನು. ಆದರೆ ಅಲ್ಲಿಯ ಪಾದ್ರಿಯು ವಾರವಾರಕ್ಕೂ

ಈ ಕೆಳಕಂಡ ನೀತಿವಚನಗಳನ್ನು ತನ್ನ ಉಪದೇಶದಲ್ಲಿ ಕೂಡಿಸುತ್ತ ಬಂದ :

"ನೀನು ಪಡೆದ ಉಪಕಾರವನ್ನು ಅಮೃತಶಿಲೆಯಲ್ಲಿಯೂ, ಅಪಕಾರವನ್ನು ಮರಳಿನಲ್ಲಿಯೂ ಬರೆ."

"ಕೆಡುಕು ಮಾಡಿದವರನ್ನು ಕ್ಷಮಿಸಿದಲ್ಲಿ ಕೆಡುಕನ್ನಷ್ಟು ತುಳಿದಂತಾಗುತ್ತದೆ."

"ಬಡವ ಕೆಟ್ಟದ್ದು ಬಡತನದಿಂದಲೇ."

"ಆಡಿದಂತೆ ನಡೆ; ಅರ್ಥವಾಗದ್ದನ್ನು ಆಡಬೇಡ."

"ಅತ್ಯಾಸೆಗೆ ಅಂತ್ಯವಿಲ್ಲ; ಅದು ಅಂತರಂಗವನ್ನು ಯುದ್ಧರಂಗವನ್ನಾಗಿ ಮಾಡೀತು."

"ಧನದಾಸನಿಗೆ ಮನಸ್ಸಾಕ್ಷಿ ಕಡಿಮೆ."

"ತ್ಯಾಗ! ತ್ಯಾಗ! ಎಂದು ಗಟ್ಟಿಯಾಗಿ ಅರಚುವವರು ತ್ಯಾಗಕಾಲವಲ್ಲಿ ಕಣ್ಣಿಗೆ ಕಾಣಿಸದೆ ಪಲಾಯನ ಮಾಡುತ್ತಾರೆ."

"ತೃಪ್ತಿ ಹೊಂದಿದವರ ಮನಸ್ಸಿನಲ್ಲಿ ಸದಾ ಉತ್ಸಾಹವೇ."

"ದುಷ್ಟರು ತಮ್ಮ ದುಷ್ಟತನವನ್ನು ಮುಚ್ಚುವುದಕ್ಕೆ 'ವಿಧಿಶಾಸನ'ದ ಮರೆ ಹೊಗುವರು."

"ವಿಶೇಷವಾಗಿ ಮೋಸಹೋಗದವರೇ ಮೋಸಗಾರರು."

"ಹಣದ ಹುಚ್ಚು ಹಿಡಿದವರೊಂದಿಗೆ ಹೆಚ್ಚು ಮಾತನಾಡಬಾರದು."

"ಉಸಿರಾಟಕ್ಕೆ ತಡೆಬರುವುದಕ್ಕೆ ಮುನ್ನ ಎಷ್ಟೋ ಅಪ್ರಿಯವಾದ ಮಾತುಗಳನ್ನು ನುಂಗಿಬಿಡಬಹುದು."

"ಬಡವನಿಗೆ ಬೇಕಾದದ್ದು ಕೆಲವು; ಬೆಡಗುಗಾರನಿಗೆ ಬೇಕಾದದ್ದು ಹಲವಾರು; ಅತ್ಯಾಶೆಯವನಿಗೆ ಕಣ್ಣಿನಲ್ಲಿ ಕಂಡದ್ದೆಲ್ಲ ಬೇಕು."

"ಹೆರವರ ತಪ್ಪನ್ನು ನೋಡಿ ನೀತಿವಂತರು ತಮ್ಮ ತಪ್ಪುಗಳನ್ನು ತಿದ್ದಿಕೊಳ್ಳುತ್ತಾರೆ. ಅದೇ ತಪ್ಪುಗಳನ್ನು ನೋಡಿ ಅಧಮರು ಕೆಂಡದಂತೆ ಕಿಡಿಕಿಡಿಯಾಗುತ್ತಾರೆ."

"ಸಣ್ಣ ತಪ್ಪುಗಳನ್ನು ಮನ್ನಿಸದಿದ್ದರೆ ದೊಡ್ಡ ತಪ್ಪನ್ನು ಮಾಡಿದಂತಾಗುತ್ತದೆ."

"ಹಿಂಸೆ, ಕಪಟ, ಅಸತ್ಯ, ಅತ್ಯಾಸೆ ಇವು ಜನರ ವಿನಾಶಕ್ಕೆ ಕಾರಣ."

"ನಾವು ಪಶ್ಚಾತ್ತಾಪಗೊಳ್ಳಲು ನಿಧಾನಿಸಿದಂತೆಲ್ಲ ನಮ್ಮ ಕ್ಲೇಶಗಳು ಅಧಿಕರಿಸುತ್ತವೆ."

ಎರಡನೆಯ ಪಾದ್ರಿಯು ವಾರವಾರಕ್ಕೂ ಮೇಲ್ಕಂಡ ತೆರನ ನೀತಿಗಳನ್ನು ತನ್ನ ಉಪದೇಶಗಳಲ್ಲಿ ಕೂಡಿಸುತ್ತಲೇ ಬಂದ. ಆದರೆ ಪೀಟರನಿಗೆ ಅವು ಕರ್ಕಶವಾಗತೊಡಗಿದುವು. "ಇದೇನಿದು? ಆ ಮೊದಲ ಪಾದ್ರಿಯೇನಾದರೂ ಈತನಿಗೆ ನನ್ನ ವಿಚಾರ ದುರ್ಬೋಧನೆ ಮಾಡಿರಬಹುದೇ? ನನ್ನನ್ನು ಅವಮಾನಗೊಳಿಸಲೆಂದೇ ಈ ಉಪದೇಶ ವಾಕ್ಯಗಳನ್ನು ನುಡಿಯುತ್ತಿರಬಹುದೇ?" ಈ ರೀತಿ ಪೀಟರನಿಗೆ ಶಂಕೆ ಪ್ರಬಲವಾಯಿತು. "ಚರ್ಚಿಗೆ ಹೋಗುವುದನ್ನೇ ನಿಲ್ಲಿಸಿಬಿಡಬಾರದೇತಕ್ಕೆ?" ಎಂದು ಒಂದೊಂದು ಸಲ ಅವನಿಗನ್ನಿಸದಿಲ್ಲ. ಹಾಗೂ ಒಂದೆರಡು ಸಲ ಪೀಟರನು ಚರ್ಚಿಗೆ ಹೋಗಲಿಲ್ಲ. ಆಗ ಪಾದ್ರಿಯೇ ಅವನನ್ನು ಹುಡುಕಿಕೊಂಡು ಬಂದಿದ್ದನು. ಈಗಲಂತೂ ಪೀಟರನಿಗೆ ಗಂಟಲಲ್ಲಿ ಸೀಸದ ಗಟ್ಟಿಯು ಸಿಲುಕಿಕೊಂಡಂತಾಯಿತು.

"ಕೊಂದ ಪಾಪ ತಿಂದವರಲ್ಲಿ ಹೋಯಿತು" ಎಂದು ನಂಬಿದ್ದವರ ಗುಂಪಿಗೆ ಸೇರಿದವನು ಪೀಟರ್. ಅವನನ್ನು ಕುರಿತು ಪಾದ್ರಿಯು ಕೇಳಿದನು:

"ನೀವು ಏಕಾಂಗಿಯಾಗಿರುವಿರಂತೆ!"

ಪೀ: ಅಹುದು; ಅದರಿಂದೇನು? ಹಾಗಿರಬಾರದೇನು? ಹುಟ್ಟಿದ್ದು ಏಕಾಂಗಿಯಾಗಿಯೇ. ಮಧ್ಯಕಾಲದಲ್ಲಿ ಮನುಷ್ಯರ ಸಹವಾಸ ಮಿತವಾಗಿಯೇ ಇರಬೇಕಲ್ಲವೆ?

ಪಾ: ಹಾಗೆನ್ನಬಾರದು; ಮಧ್ಯಕಾಲದ ಮಾತೇ ಅತಿ ಮುಖ್ಯವಾದ ಮಾತು. ಪ್ರೇಮ ಜೀವನದಿಂದ ಹೊರಗಿರುವುದಕ್ಕಿಂತ ಪ್ರೇಮ

ಬಂಧನದಲ್ಲಿರುವುದು ಅಷ್ಟೊಂದು ಅಪಾಯಕರವಲ್ಲ. ಮಾನವರೆಲ್ಲ ಪ್ರೇಮಜೀವಿಗಳೇ!

ಪೀ: ಆ ಮಾತು ಈಗೇತಕ್ಕೆ?

ಪಾ: ಇಲ್ಲ; ಹೇಳಿದೆ. ಅದಿರಲಿ; ನಾನೇಕೆ ಪ್ರತಿದಿನವೂ ನಿಮ್ಮಲ್ಲಿ ಬಂದು ಸ್ವಲ್ಪಕಾಲ ಬೈಬಲ್ ಪ್ರವಚನದ ಅಂತರಾರ್ಥಗಳನ್ನೂ—ಅಸಾಧಾರಣ ನೀತಿ-ತತ್ತ್ವಗಳನ್ನೂ ಎತ್ತಿ ತೋರಿಸಬಾರದು?

ಪೀ: ತೋರಿಸಬಹುದು; ಆದರೆ ಅದರಿಂದ ನಿಮಗಾಗುವ ಪ್ರಯೋಜನ?

ಪಾ: ಪರಹಿತವನ್ನು ಸಾಧಿಸುವುದೇ ಪರಮಾತ್ಮನ ಕಿಂಕರರಾದ ನಮ್ಮ ಕರ್ತವ್ಯ.

ಪೀ: ಇರಬಹುದು; ಆದರೆ ಅದನ್ನೆಲ್ಲ ಕೇಳುತ್ತ ಕುಳಿತುಕೊಳ್ಳುವಷ್ಟು ವಿರಾಮ ನನಗಿರಬೇಕಲ್ಲ?

ಪಾ: ಏಕಾಂಗಿಗಳಾದ ನಿಮಗೂ ವಿಶೇಷ ಕೆಲಸಗಳಿರಬಹುದೆ?

ಪೀ: ಇದ್ದರೆ ತಪ್ಪಾದೀತೆ?

ಪಾ: ತಪ್ಪಿಗಲ್ಲ ಮಹಾಶಯ! ಸಾರ್ವಜನಿಕ ವಿಚಾರಗಳಲ್ಲಿ ನೀವು ಕಲೆತುಕೊಂಡಿರುವಂತೆ ಕಾಣಿಸಲಿಲ್ಲ.

ಪೀ: ಆ ಮಾತು ಅಕ್ಷರಶಃ ನಿಜ; ಅದರಿಂದೇನು?

ಪಾ: ಏನಿಲ್ಲ; ಅನ್ಯಥಾ ಭಾವಿಸಬೇಡಿ. ಮೆದುಳಿನಿಂದ, ಧನದಿಂದ, ಮಾನವನು ತನ್ನ ಒಡನಾಡಿಗಳಿಗೆ ನೆರವಾಗಬೇಕು. ಯೇಸು ಸ್ವಾಮಿಯು ಇದನ್ನು ರಸಭರಿತವಾಗಿ ಸಾರಿದ್ದಾನೆ.

ಪೀ: ಹಾಗೆಂದು ನಾನೂ ತಿಳಿದುಕೊಂಡಿರುವೆನು.

ಪಾ: ಬಹಳ ಸಂತೋಷ! ಈಗ ನೋಡಿ; ನಾವು ಕುಷ್ಠರೋಗನಿವಾರಣೆ

ಗಾಗಿ ನಡುಕಟ್ಟಿ ನಿಂತಿದ್ದೇವೆ.

ಪೀ : ಹಾಗೇನು? ಬಹಳ ಸಂತೋಷ! ರೋಗನಿವಾರಣೆಗೆ ಯಾವುದಾದರೂ ಮಹತ್ವದ ಮಂತ್ರವನ್ನು ನೀವು ಕಂಡುಹಿಡಿದಿರ ಬಹುದು—ಅಲ್ಲವೆ?

ಪಾ : ಮಂತ್ರವೆಲ್ಲಿಯದು?

ಪೀ : ಯೇಸು ಸ್ವಾಮಿಯು ಮಹತ್ವದಿಂದಲ್ಲವೆ ಇಂತಹ ರೋಗಗಳನ್ನು ನಿವಾರಿಸುತ್ತಿದ್ದುದು?

ಪಾ : ಹೌದು; ಆದರೆ..................ಆತನ ಅನುಚರರಾದ ನಮಗೆ ನಿಮ್ಮ ಸಹಾಯ ಬೇಕು.

ಪೀ : ಹಾಗೇನು? ನಾನು ವೈದ್ಯನಾಗಿದ್ದಿದ್ದರೆ ಸಂತೋಷದಿಂದ ಸಹಾಯ ಮಾಡುತ್ತಿದ್ದೆ.

ಪಾ : ಅಲ್ಲದಿದ್ದರೆ ಧನಸಹಾಯಮಾಡಿದರೆ ತೀರಿತು.

ಪೀ : ಧನವೇ? .... ..... ..... ಧನವೇ?

ಪಾ : ಹೌದು! ಮಾನವಸೇವೆಗಾಗಿ ಇನ್ನೂರು ಹೊನ್ನುಗಳನ್ನು ದಾನ ಮಾಡಿ; ದಯಾಮಯನ ಕೃಪೆಗೆ ಪಾತ್ರರಾಗಿ.

ಪೀ : ಮಾಡುತ್ತಿದ್ದೆ; ಆದರೆ ನನ್ನಲ್ಲೇನೂ ಇಲ್ಲ. ಇರುವವರ ಬಳಿ ಹೋಗಿ ಕೇಳಿ.

ಪಾ : ಹಾಗಾದರೆ?

ಪೀ : ದಯಮಾಡಬಹುದು; ಉಪದೇಶಮಾಡುವುದು ಸುಲಭ; ಧನವನ್ನು ಗಳಿಸುವುದು ಅಷ್ಟೇ ಸುಲಭವಲ್ಲ.

ಪಾ : ನೀವು ಗಳಿಸಿದ್ದೀರಿ.

ಪೀ: ಗಳಿಸಿರಬಹುದು; ಆದರೆ ಉಳಿಸಲಿಲ್ಲ. ಮನ್ನಿಸಿ; ಧನಕ್ಕಾಗಿ ನನ್ನಲ್ಲಿ ಬಂದುದಕ್ಕೆ ನನಗೆ ವ್ಯಸನವಾಗುತ್ತದೆ. ದಯೆಯಿಟ್ಟು ಇನ್ನು ಮುಂದೆ ಈ ತೆರನಾದ ಶ್ರಮವಹಿಸಿ ದಣಿಯಬೇಡಿ.

ನಿರಾಶನಾದ ಪಾದ್ರಿಯು ನಿಟ್ಟುಸಿರು ಬಿಡುತ್ತ ಬಂದ ದಾರಿಯನ್ನು ಹಿಡಿದುಕೊಂಡು ಹೋದ.

ಪ್ಯಾರಿಸ್ಸಿನಲ್ಲಿ ಪೀಟರನು ನೂಕಿದ ನಲವತ್ತು ವರ್ಷಗಳಲ್ಲಿ ಕಡಿಮೆ ಯೆಂದರೆ ನಾನೂರು ಬಾರಿಯಾದರೂ ಮೇಲ್ಕಂಡ ತೆರನೆ 'ಧರ್ಮ-ಧರ್ಮ' ಎಂದು ತನ್ನ ಬಳಿಗೆ ಬಂದವರಿಗೆ ಯಾವುದಾದರೊಂದು ಉಪಾಯವನ್ನು ಹೂಡಿ ಅವರನ್ನು ಬರಿಗೈಯ್ಯಲ್ಲಿ ಹೊರದೂಡಿದ್ದನು. ಪಾದ್ರಿಯು ಹೊರಟು ಹೋದನಂತರ ಪೀಟರನು ಸಾವಧಾನವಾಗಿ ಆಲೋಚಿಸಿದ:

"ಮೊದಲನೆಯ ಪಾದ್ರಿಯು ನೂರು ಹೊನ್ನು ಕೇಳಿದ. ಎರಡನೆಯ ಪಾದ್ರಿ ಇನ್ನೂರು ಹೊನ್ನು ಕೇಳಿದ. ಇನ್ನು ಈ ಚರ್ಚನ್ನೂ ಬಿಟ್ಟು ಇನ್ನೊಂದು ಚರ್ಚಿಗೆ ಹೋದರೆ ಅಲ್ಲಿಯ ಪಾದ್ರಿಯು ಮುನ್ನೂರು ಹೊನ್ನು ಕೇಳಿಯಾನು! ಈಗೇನು ಮಾಡಲಿ?"

ಪೀಟರನು ಹತ್ತಾರು ಸಲ ಆಲೋಚಿಸಿದ. ಆದರೆ ಅವನಿಗೊಂದೂ ಬಗೆಹರಿಯಲಿಲ್ಲ. ಚರ್ಚನ್ನು ಮತ್ತೆ ಬದಲಾಯಿಸಿದರೆ ತೊಂದರೆ ಹೆಚ್ಚೆಂದು ಕೊನೆಗವನಿಗೆ ಮಂದಟ್ಟಾಯಿತು. ಇನ್ನೂರು ಕೇಳಿದ ಪಾದ್ರಿಗೆ ಮರು ಭಾನುವಾರ ತಾನಾಗಿ ಎರಡು ಹೊನ್ನುಗಳನ್ನು ಕೊಂಡು ಹೋಗಿ ಕೊಟ್ಟು ಆತನಲ್ಲಿ ಹೇಳಿದ:

"ನೋಡಿ; ಇದೇ ನನ್ನ ಶಕ್ತಿಗೆ ಮಿಂಚಿದ್ದು. ಇದನ್ನು ಬೇಕಾದರೆ ನೀವೇ ಇರಿಸಿಕೊಳ್ಳಿ; ಆದರೆ ಇನ್ನುಮುಂದೆ ನನ್ನನ್ನು ಕೇಳದಿರಿ; ಮನ್ನಿಸಿ; ನಾನು ಬಡವ. ನೋಡಿದವರು ಅದೇಕೋ ಕಾಣೆ, ನನ್ನನ್ನು ಭಾಗ್ಯವಂತ ನನ್ನಾಗಿ ತಿಳಿದುಕೊಳ್ಳುತ್ತಾರೆ."

ಪಾದ್ರಿಯು ನಿರುತ್ತರನಾದ. ಎರಡು ಹೊನ್ನುಗಳಿಗೆ ಅವನು ಕೈನೀಡಿದ.

ಆದರಿಂದ ಪೀಟರನಿಗೆ ಸಂತೋಷವೇ ಆಯಿತು. ‘ ಇಂದು ನಾನು ನೂರ ತೊಂಭತ್ತೆಂಟು ಹೊನ್ನುಗಳನ್ನು ಸಂಪಾದಿಸಿದೆ ’ ಎಂದು ಅವನೆಂದುಕೊಂಡ.

ಪೀಟರನ ಬಂಗಲೆ ಸಣ್ಣದಾದರೂ ಸುಂದರವಾಗಿದ್ದಿತು. ಅದರ ಸುತ್ತಲಿದ್ದ ಹತ್ತಿಪ್ಪತ್ತೆಕರೆ ನೆಲ ಫಲವತ್ತಾಗಿದ್ದಿತು. ಅದರಲ್ಲಿ ಬೆಳೆದು ಬಂದ ಸೇಬು, ದ್ರಾಕ್ಷಿಹಣ್ಣುಗಳು ಆ ಸುತ್ತಿನಲ್ಲೆಲ್ಲಾ ಅತ್ಯುತ್ಕೃಷ್ಟವಾದುವೆಂದು ಪ್ರತೀತಿಗೊಂಡಿದ್ದುವು. ಕೆಲ ನೆರೆಹೊರೆಯವರಲ್ಲಿ ಪೀಟರನು ಅಷ್ಟಿಷ್ಟು ಪಳಗಿಕೊಂಡಿದ್ದ. ಅವರನ್ನವನು ಬರಿಗೈಯಲ್ಲಿ ನೋಡುತ್ತಿರಲಿಲ್ಲ. ಅವರ ಊಟದ ಸಮಯಕ್ಕೆ ಸರಿಯಾಗಿ ಒಮ್ಮೆ ಸೇಬು, ಒಮ್ಮೆ ದ್ರಾಕ್ಷಿ, ಒಮ್ಮೊಮ್ಮೆ ಇವೆರಡನ್ನೂ ಕೈಯ್ಯಲ್ಲಿ ಹಿಡಿದುಕೊಂಡು ಹೋಗುವ ವಾಡಿಕೆ ಅವನದು. ನೆರೆಹೊರೆಯವರೇನೋ ಅವನನ್ನು ಆದರದಿಂದ ಬರಮಾಡಿಕೊಳ್ಳುತ್ತಿದ್ದರು. ತಾನು ಕೊಂಡುಹೋದ ಹಣ್ಣುಗಳನ್ನು ಅವರ ಮುಂದೆ ಇರಿಸಿ ಪೀಟರನು ಹೇಳುತ್ತಿದ್ದ :

" ಕೊಳ್ಳಿ ; ಊಟಮಾಡಿ ; ನಾನು ಮುದುಕ. ನನಗೇನು ಮಕ್ಕಳೆ ? ಮರಿಯೆ ? ಬೆಳೆದ ಹಣ್ಣೆಲ್ಲವನ್ನೂ ನಾನೊಬ್ಬನೇ ತಿಂದು ಮುಗಿಸಲಾದೀತೇ ? ಊಂ ! ಹೇಗೋ ಕಾಲ ತಳ್ಳಬೇಕು."

ಪೀಟರನ ಉಡುಗಿಹೋದ ಶರೀರವನ್ನು ಕಂಡು ನೆರೆಹೊರೆಯವರಿಗೆ ಹೇರಳವಾದ ಕನಿಕರವುಂಟಾಗುತ್ತಿತ್ತು. ಅವರು ನಿಸ್ಪೃಹ ಸ್ವಭಾವದವರು. ಆದುದರಿಂದ ಪೀಟರನ ಪ್ರಸ್ನತೆಯು ಸಹಜವಾದುದೆಂದೇ ಅವರು ನಂಬಿದರು. ಹಾಗೂ ಅವರು ಪೀಟರನನ್ನು ಕುರಿತು ಹೇಳುತ್ತಿದ್ದರು :

" ನಿಮಗೆ ಬಹಳ ವಂದನೆಗಳು. ನಿಮ್ಮ ವಿಶ್ವಾಸ ಹಿರಿದಾದುದು. ಆದರೆ ಇದಕ್ಕಾಗಿ ಇಷ್ಟು ದೂರ ನಡೆದು ಬಂದಿರಾ ಪಾಪ ? ಏ ; ನಮ್ಮೊಡನೆ ಊಟಮಾಡುವಿರಂತೆ."

" ಹೇಗೋ ತನಗೆ ತಿಳಿದ ನಾಲ್ಕೈದು ನೆರೆಹೊರೆಯವರ ಮನೆಯಲ್ಲಿ ಪೀಟರನು ಹಲವಾರು ವೇಳೆ ಊಟಮಾಡಿಬಿಡುತ್ತಿದ್ದನು. ಆದರೂ ತನ್ನ

ಮನೆಗೆ ಪ್ರತಿಯಾಗಿ ಅವರನ್ನು ಕರೆಯಬೇಕೆಂದು ಅವನಿಗೆನ್ನಿಸುತ್ತಿರಲಿಲ್ಲ. ಅಷ್ಟಕ್ಕೂ 'ಅವನು ಏಕಾಂಗಿ; ಅವನಿಗೆ ಹೆಂಡತಿ ಮಕ್ಕಳು ಯಾರೂ ಇಲ್ಲ' ಎಂದು ನೆರೆಹೊರೆಯವರು ಬಲ್ಲರು. ಮೇಲಾಗಿ ಅವರು ಪೀಟರನೊಂದಿಗೆ ವಿಶೇಷವಾಗಿ ಮಾತನಾಡಲು ಹೊಸ ವಿಷಯಗಳೇನೂ ಇರಲಿಲ್ಲ. ಅದರಿಂದ ತನಗೆ ಹೆಚ್ಚಿನ ಅನುಭವವಾಗಲಿ ಆನಂದವಾಗಲಿ ಲಭಿಸಬಹುದೆಂದು ಅವರು ನಿರೀಕ್ಷಿಸಲಿಲ್ಲ. ಅಲ್ಲದೆ; ತಮ್ಮಲ್ಲಿ ಬಂದ ಅತಿಥಿಯನ್ನು—ಅವನು ಎಂತಹವನೇ ಆಗಲಿ—ಅವನನ್ನು ಆದರಿಸಿ ಕಳುಹಿಸುವುದು ತಮ್ಮ ಕರ್ತವ್ಯ ಎಂದು ಮಾತ್ರ ಅವರು ಚೆನ್ನಾಗಿ ಮನಗಂಡಿದ್ದರು.

ನೆರೆಹೊರೆಯವರೊಡನೆ ಊಟಕ್ಕೆ ಕುಳಿತಾಗ ದೇಶದ ಪರಿಸ್ಥಿತಿಯನ್ನು ಕುರಿತು ಪೀಟರನು ಚರ್ಚಿಸುವ ವಾಡಿಕೆ ಇದ್ದಿತು. ಆಗಿಂದಾಗ್ಗೆ ಧನವನ್ನು ಬೆಳಸುವ ದಾರಿಯನ್ನು ಅವರಿಂದಲೂ ಅವನು ಕೇಳಿ ತಿಳಿದುಕೊಳ್ಳುತ್ತಿದ್ದನು. ತಾನೂ ತನ್ನ ಅನುಭವವನ್ನು ಅವರಲ್ಲಿ ಹೇಳಿಕೊಳ್ಳುವುದುಂಟು. ಒಮ್ಮೆ ಮಾತಿಗೆ ಮಾತು ಬಂದಾಗ ಅವನು ಹೇಳಿದನು :

"ಮಿತವಾಗಿ ವ್ಯಯಮಾಡಲರಿಯದವನು ಶಾಶ್ವತವಾದ ಗುಲಾಮಗಿರಿಯಲ್ಲಿ ಬಿದ್ದು ನರಳಿಯಾನು."

"ಭಾಗ್ಯದೇವತೆಯು ಯಾರನ್ನು ಕೈಬಿಡದೆ, ಎಡೆಬಿಡದೆ ಅನುಸರಿಸುತ್ತ ಬರುವಳೋ ಅಂತಹವನು ಅವಳು ಚಪಲಚಿತ್ತೆ ಎಂದು ಕನಸಿನಲ್ಲಿಯೂ ಕಂಡುಕೊಳ್ಳಲಾರನು."

ಪೀಟರನ ಒಂದು ವಿಶೇಷವೆಂದರೆ ಸಮಯ ದೊರೆತಾಗಲೆಲ್ಲ ತಾನು ತನ್ನ ಕಿರುವಯಸ್ಸಿನಲ್ಲಿ ಕಲಿತಿದ್ದ ಹಲಕೆಲವು ನೀತಿವಚನಗಳನ್ನು ತಿರುಗಿಸಿ ತಿರುಗಿಸಿ ಇತರರಿಗೆ ಒಪ್ಪಿಸುವುದು. ನಿಜವಾಗಿಯೂ ಅವನಾಡುತ್ತಿದ್ದಂತೆಯೇ ಮಾಡುತ್ತ ಬಂದಿದ್ದರೆ ಆ ಸುತ್ತಿನಲ್ಲೆಲ್ಲ ಅವನಿಗೆ ಸರಿಸಮಾನರೇ ಇರುತ್ತಿರಲಿಲ್ಲ.

ಒಮ್ಮೆ ನೆರೆಮನೆ ಸ್ವಾಮ್‌ಸನ್ನನು ಕ್ರಿಸ್‌ಮಸ್ ಹಬ್ಬಕ್ಕೆ ಪೀಟರನನ್ನು

ಊಟಕ್ಕೆ ಕರೆದಿದ್ದನು. ಅಂತೆಯೇ ಅವನ ಇತರ ನೆರೆಹೊರೆಯವರೂ ಆಹ್ವಾನಿತರಾಗಿದ್ದರು. ಊಟಮಾಡುತ್ತ ಆನಂದದಿಂದಿರುವಾಗ ಯಾವುದೋ ಮಾತಿಗೆ ಪೀಟರನು ಹೇಳಿದ :

" ನ್ಯಾಯಾಧೀಶನಾದರೆ ಚೆನ್ನಾಗಿ ವಿಚಾರಿಸು ! ಅರಸನಾದರೆ ಜಾಣ್ಮೆ ಯಿಂದ ಅಧಿಕಾರ ನಡೆಸು."

" ನೀವು ನೀತಿವಂತರು ; ನಿಮ್ಮಲ್ಲಿ ಇಂತಹ ವಚನಗಳು ತುಂಬಿವೆ " ಎಂದ ಸ್ಯಾಮ್ ಸನ್.

" ನೀತಿ, ನಿಷ್ಠೆ, ಸತ್ಯ, ದಯೆ ಇವು ನ್ಯಾಯಮೊತ್ತದ ಅಡಿಗಲ್ಲುಗಳು " ಎಂದ ಪೀಟರ್.

" ಕ್ರಿಸ್ ಮಸ್ ಹಬ್ಬದ ಈ ಪವಿತ್ರ ಕಾಲದಲ್ಲಿ ದುಷ್ಟ ಪದ್ಧತಿಗಳನ್ನು ಜಯಿಸುವುದಕ್ಕಿಂತ ಹೆಚ್ಚಿನ ವಿಜಯವು ಮತ್ತೊಂದಿಲ್ಲ. ಇದನ್ನು ಮಾನವರು ಗ್ರಹಿಸ ಬೇಕು."

ಹೀಗೆಂದು ಜಾಕಬ್ ಎಂಬ ಮತ್ತೊಬ್ಬ ನೆರೆಯವನು ಹೇಳಿದ.

" ಮನುಷ್ಯನಿಗೆ ದೂರದೃಷ್ಟಿ ಇರಬೇಕು ; ಅವನ ಹೃದಯ ಬೆಚ್ಚಗಿದ್ದರೂ ತಲೆಯು ತಂಪಾಗಿರಬೇಕು ; ಕಷ್ಟಪಡುವವರನ್ನು ಕಂಡು ಕನಿಕರಗೊಳ್ಳಬೇಕು ; ಸದ್ಗುಣವೇ ಬಾಳಿನ ಉತ್ತಮ ಹಾದಿ ; ಅದನ್ನು ಕಂಡು ಹಿಡಿದವರೇ ಸುಖಜೀವಿಗಳು. ತಮ್ಮ ಸಂಪತ್ತನ್ನು ಕುರಿತು ಕೊಚ್ಚಿಕೊಳ್ಳುವುದೊಂದನ್ನುಳಿದು ಬೇರೆ ಯಾವುದನ್ನೂ ತಿಳಿಯದ ಹಲ ಶ್ರೀಮಂತರು ನಿಜವಾಗಿಯೂ ಬಡವರೇ ಸರಿ."

ಎಂದು ಮುಂತಾದ ನೀತಿವಚನಗಳ ಉಚ್ಚರಣೆಯಿಂದ ಪೀಟರನು ನೆರೆಹೊರೆಯವರನ್ನು ಪ್ರೀತಿಪಡಿಸಲು ಪದೇ ಪದೇ ಪ್ರಯತ್ನಿಸುತ್ತಿದ್ದನು.

ಚಿಕ್ಕಂದಿನಲ್ಲಿ ತಾನು ಕಲಿತ ಇಂತಹ ಅನೇಕಾನೇಕ ನೀತಿವಚನ ಗಳನ್ನು ಅವನು ಉಚ್ಚರಿಸಿದಾಗಲೆಲ್ಲ ಪೀಟರನು ತನ್ನ ನಿಜವಾದ ಗುಣ ಗಳನ್ನು ಮುಚ್ಚಿಡಲು ಪಟ್ಟ ಕಷ್ಟಗಳನ್ನು ವರ್ಣಿಸುವುದೇ ಕಷ್ಟ. ತನ್ನ ವಿಚಾರಗಳನ್ನು ಅವನು ನೆರೆಹೊರೆಯವರಲ್ಲಿ ವಿಶದವಾಗಿ—ಏಕೆ ? ಸೂಕ್ಷ್ಮ

ವಾಗಿಯೂ ಹೇಳಿಕೊಳ್ಳುತ್ತಿರಲಿಲ್ಲ. ಅವರಾದರೋ ಧನಿಕರು ; ದಯಾಳುಗಳು. ಪೀಟರನಿಂದ ಅವರಿಗಾವ ತೆರನಾದ ಸಹಾಯವೂ ಬೇಕಿರಲಿಲ್ಲ.

ಇದಿಷ್ಟು ನಮ್ಮ ಕಥಾನಾಯಕನ ಸೂಕ್ಷ್ಮಪರಿಚಯ. ಮುಂದಿನ ಪ್ರಕರಣಗಳಲ್ಲಿ ಆತನ ಬಾಳುವೆಯ ಆಗುಹೋಗುಗಳನ್ನು ಬಣ್ಣಿಸಲಾಗಿದೆ. ಹುಲಿಯ ಮಾತು ಬಂದಾಗ ಅದರ ಶೌರ್ಯವನ್ನು ಕುರಿತು ಕೊಂಡಾಡಬಹುದು. ಆದರೆ ಆ ಶೌರ್ಯದೊಂದಿಗೆ ಕೂಡಿದ ಅದರ ಆ ಕುಟಿಲತೆ, ಆ ಕ್ರೌರ್ಯ ಅವುಗಳನ್ನು ಕೊಂಡಾಡಲು ಸಾಧ್ಯವೇ ? ಅಂತೆಯೇ ಸಾಹಸದೊಂದಿಗೆ ಸಾತ್ವಿಕತೆಯು ಕೂಡಿದ್ದರೆ ಅದನ್ನು ಪ್ರಶಂಸಿಸಬಹುದು ; ಆದರೆ ಆ ಸಾಹಸದೊಂದಿಗೆ ತಾಮಸ ಪ್ರೇರಿತ ಗುರಿಗಳು ಕಲೆತಿದ್ದರೆ ಅವುಗಳನ್ನು ಕೊಂಡಾಡುವ ಬದಲು ಖಂಡಿಸಲೇಬೇಕಾಗುತ್ತದೆ.

* * * *

ಪ್ರಕರಣ ೨.

# ಪೀಟರನ ಪರಿವಾರ

ಹೆಂಡತಿಮಕ್ಕಳು ಇರುವ ಮನೆಯಲ್ಲಿ ಗಲಾಟೆ-ಧನವ್ಯಯ – ಇವು ಮಾತ್ರವಲ್ಲ; ರಹಸ್ಯಗಳಿಗೆ ಕಾಲು ಹುಟ್ಟಿ ಅವು ಊರೆಲ್ಲ ಹಬ್ಬಿಬಿಡುತ್ತವೆ- ಎಂಬುದೇ ಪೀಟರನ ಹಠಗೊಂಡ ಅಭಿಪ್ರಾಯ. ಆದುದರಿಂದಲೇ ಏಕಾಂಗಿ ಯಾದ ಅವನು ಏಕಾಂತವಾದ ಜೀವನವನ್ನು ನಡೆಸಲು ಅನುಕೂಲಿಸಿತು ಎಂದು ಸಂತುಷ್ಟಿಗೊಂಡಿದ್ದನು. ಗುಣವನ್ನು ಗುಪ್ತವಾದ ಗುಹೆಗೆ ತಳ್ಳಿ, ಭಾಗ್ಯವನ್ನು ಬಚ್ಚಿಡುವುದರಲ್ಲಿ ತನಗಿದ್ದ ಕುಶಲತೆಯನ್ನು ಕಂಡು ಅವನು ಹಿರಿ ಹಿಗ್ಗಿದನು.

ಪೀಟರನ ಪರಿವಾರವೇನು ? ಅವನ ಏಕಮಾತ್ರ ಸೇವಕ ಡೇನಿಯಲ್ —ಅವನು ಮಾನವವರ್ಗಕ್ಕೆ ಸೇರಿದವನು. ಅವನ ಆಶ್ರಿತವರ್ಗಕ್ಕೆ ಸೇರಿದುದು ಹಸುವೊಂದು ಅಷ್ಟೆ—ಮೂಕ ಪ್ರಾಣಿ. ಪ್ರಾಣಿ ವರ್ಗಕ್ಕೊಂದು, ಮಾನವ ವರ್ಗಕ್ಕೊಂದು ಪ್ರತಿನಿಧಿ ! ಡೇನಿಯಲ್ ನೊಂದಿಗೆ ಪೀಟರನ ಮಾತುಕತೆಗಳೆಂದರೆ ನಿತದಲ್ಲಿಯೂ ಮಿತ—ಹಾಗಲ ಕಾಯಿಯಲ್ಲಿ ಸವಿಯನ್ನು ಹುಡುಕಿದಂತೆ. ಹುಲ್ಲಿಗಾಗಲಿ, ನೀರಿಗಾಗಲಿ ಹಸುವು ಒಡೆಯನ ದಯೆಯನ್ನು ಕೋರಬೇಕಾಗಿರಲಿಲ್ಲ. ಬಂಗಲೆ ಬಳಿ ಹುಲುಸಾಗಿ ಬೆಳೆದಿದ್ದ ಹಚ್ಚನೆಯ ಹುಲ್ಲು ಹತ್ತು ಹಸುಗಳು ಮೇದರೂ ಕರಗುವಂತಿರಲಿಲ್ಲ. ಅನತಿದೂರದಲ್ಲಿ ಸಮೃದ್ಧಿಯಾಗಿ ಹರಿಯುತ್ತಿದ್ದ ಹೊಳೆಯ ನೀರು. ಪೀಟರ್, ಡೇನಿಯಲ್ ಮತ್ತು ಹಸು ಈ ಮೂರು ಜೀವಿ ಗಳಲ್ಲಿ ಹಸುವೇ ಹೆಚ್ಚಿನ ಸ್ವಾತಂತ್ರ್ಯವನ್ನು ಪಡೆದು ಅನುಭವಿಸುತ್ತಿತ್ತು.

ಹಸುವಿಗಿಂತ ಕಡಿಮೆಯ ಸ್ವಾತಂತ್ರ್ಯ ಡೇನಿಯಲ್ಲನದು. ಅವನು ಅನ್ನ, ಬಟ್ಟೆ ನೆರಳುಗಳಿಗೆ ಪರದಾಡಬೇಕಾಗಿರಲಿಲ್ಲ. ಆದರೂ ಅವನು ಪೀಟರನ ಆಜ್ಞಾಧಾರಕ. ಪೀಟರನಂತೆ ಡೇನಿಯಲ್ಲನೂ ಏಕಾಂಗಿ; ಅವನಿಗಾಗಿ ಮರುಗುವ ಬಂಧುಗಳಾಗಲೀ, ಸ್ನೇಹಿತರಾಗಲಿ ಯಾರೂ ಇರಲಿಲ್ಲ. ಅವನೂ ಯಾರಿಗಾಗಿಯೂ ಮರುಗಬೇಕಾಗಿರಲಿಲ್ಲ.

ಆದರೆ ಪೀಟರ್! ಅವನು ಅಪಾರ ನಿಧಿಗೆ ಒಡೆಯ; ಆದರೂ ಅವನು ಸ್ವತಂತ್ರನಲ್ಲ! ಏನಿದು? ಅತುಳ ಶ್ರೀಮಂತನಾದ ಅವನು ಸ್ವತಂತ್ರನಲ್ಲವೆ? ಇಲ್ಲ; ಅವನು ತನ್ನ ಧನವನ್ನು ರಕ್ಷಿಸಬೇಕು. ಅವನ ಮನಸ್ಸಿಗೆ ನೆಮ್ಮದಿ ಎಲ್ಲಿಂದ ಬರಬೇಕು ಪಾಪ! ರಾತ್ರಿ ಡೇನಿಯಲ್ಲನು ಗೊರಕೆಹೊಡೆಯುತ್ತ ನಿರ್ವಿಚಾರನಾಗಿ ನಿದ್ರಿಸುವಾಗ, ಸವಿಸವಿಯಾದ ಸೊಬಗಿನ ಕನಸುಗಳನ್ನು ಕಾಣುತ್ತಿರುವಾಗ, ಪೀಟರನು ಎಚ್ಚೆತ್ತು ಕಾವಲು ಕಾಯಬೇಕು. ಅವನ ಹಸುವು ತಾನು ತಿಂದ ಹುಲ್ಲನ್ನು ಮೆಲುಕು ಹಾಕುತ್ತ ಹಾಕುತ್ತ ನಿರ್ವಿಚಾರವಾಗಿ ನಿದ್ರೆ ಹೋಗುತ್ತದೆ. ಅದು ತಿಂದ ಹುಲ್ಲು ಅದರ ಕೆಚ್ಚಲಿನಲ್ಲಿ ಹಾಲನ್ನು ತುಂಬುತ್ತದೆ. ಅದೇ ಸಮಯದಲ್ಲಿ .... ಆ ನಿಶಿರಾತ್ರಿಯಲ್ಲಿ ಪೀಟರನು ಮಲಗುವ ಮುನ್ನ ಕುಡಿದ ಹಸುವಿನ ಹಾಲು ಅವನ ಹೊಟ್ಟೆಯಲ್ಲಿ ಹಾಲಾಹಲವಾಗುತ್ತಿದೆ. ಏತಕ್ಕಾಗಿ? ಭಾಗ್ಯರಕ್ಷಣೆಗಾಗಿ ಅವನ ಭಯಭೀತಿಗಳು ಸಾಧಾರಣವಾದುವೇ? ಆಲೋಚನೆಯಿಂದ ಆಯಾಸ! ಆಯಾಸದಿಂದ ಅಮೃತವೂ ವಿಷವೇ!

ಡೇನಿಯಲ್ಲನಿಗೆ ಅರುವತ್ತು ವರುಷ ವಯಸ್ಸು; ಅವನು ಸ್ವಲ್ಪ ಅರುಳು ಮರುಳು; ಅವನ ಕಿವಿ ಮಧ್ಯಸ್ಥ; ಕಣ್ಣಿನ ದೃಷ್ಟಿ ಮಂದ. ಅವನು ಹಳ್ಳಿಗ; ತೋಟದ ಕೆಲಸದಲ್ಲಿ ಅನುಭವಿ; ಯಾರ ಗೋಜಿಗೂ ಹೋಗುವವನಲ್ಲ; ಚಿಕ್ಕಂದಿನಲ್ಲೆ ಬೈಬಲನ್ನು ಓದುವಷ್ಟು ಮಾತ್ರ ಭಾಷೆಯನ್ನು ಕಲಿತಿದ್ದನು. ಬಿಡುವಾದಾಗ ಆ ಸದ್ಗ್ರಂಥವನ್ನು ಅವನು ಆಸಕ್ತಿಯಿಂದ ಓದಿಕೊಳ್ಳುತ್ತಿದ್ದನು. ಅವನು ಪೀಟರನ ಬಟ್ಲರ್. ಬಂಗಲೆ ಹಿತ್ತಲಲ್ಲಿ ತರಕಾರಿ ಗಿಡಗಳ ತೋಟವೊಂದಿದ್ದಿತು. ಅದರ ವ್ಯವಸ್ಥೆಯನ್ನು ಡೇನಿಯಲ್ಲನೇ

ನೋಡಿಕೊಳ್ಳುತ್ತಿದ್ದನು. ಆಗಾಗ ಕಳೆಕಿತ್ತು, ಗಿಡಗಳಿಗೆ ಪಾತಿಮಾಡಿ ಗೊಬ್ಬರಹಾಕುವುದು, ನೀರೆರೆಯುವುದು ಅವನ ಕೆಲಸ. ದಿನಂಪ್ರತಿ ಸ್ವಲ್ಪ ಕಾಲ ಪೀಟರನೂ ಈ ಕೆಲಸಗಳನ್ನು ಗಮನಿಸುತ್ತಿದ್ದನು. ಕಾಯಿಪಲ್ಯ ಗಳೇನೋ ಸಮೃದ್ಧಿಯಾಗಿಯೇ ಬೆಳೆಯುತ್ತಿದ್ದುವು. ಅವುಗಳಲ್ಲಿ ಸ್ವಂತಕ್ಕೆ ಬೇಕಾದಷ್ಟು ಉಳಿಸಿಕೊಂಡು ಉಳಿದುವನ್ನು ಪೀಟರನು ಪೇಟೆಯಲ್ಲಿ ಮಾರಿಸಿ ಬಿಡುತ್ತಿದ್ದನು.

ಹೀಗೆ ಸರಿಯಾಗಿ ಕಣ್ಣು ಕಾಣಿಸದ, ಸ್ಪಷ್ಟವಾಗಿ ಕಿವಿ ಕೇಳಿಸದ ಡೇನಿ ಯಲ್ಲನಿಗೆ ಪೀಟರನ ಆಶ್ರಯವು ಲೇಸಾಗಿ ತೋರಿತು. ವಯಸ್ಸಾದ ಅವನಿಗೆ ಹೆಚ್ಚು ಜನರಿರುವ ಮನೆಯಲ್ಲಿ ದುಡಿಯಲು ಶಕ್ತಿ ಸಾಲದು. ಪೀಟರನ ಬಂಗಲೆಯ ಹಿಂಭಾಗದಲ್ಲಿಯೇ ಸುಮಾರು ಹತ್ತು ಗಜ ದೂರದಲ್ಲಿ ಅಡಿಗೆ ಮನೆ, ಬಚ್ಚಲುಮನೆ, ಬಟ್ಲರ್ ಕೊಠಡಿ, ದನದ ಕೊಟ್ಟಿಗೆ, ಕಟ್ಟಿಗೆಯಮನೆ, ದವಸದ ಕಣಜ ಇವುಗಳನ್ನೊಳಗೊಂಡ 'ಔಟ್ ಹೌಸ್' ಇದ್ದಿತು. ಡೇನಿಯಲ್ಲನು ವಾಸಿಸುತ್ತಿದ್ದುದು 'ಔಟ್ ಹೌಸ್' ನಲ್ಲಿಯೇ. ಡೇನಿ ಯಲ್ ಸ್ವಭಾವತಃ ಅಲ್ಪಸಂತೋಷಿ; ಎಂದಮೇಲೆ, ಅವನು ಆಸೆಗಾರ ನಲ್ಲ. ತನಗೆ ಸಾಧಾರಣವಾಗಿ ದೊರೆತ ಸುಖಸೌಖ್ಯಗಳೇ ತನ್ನ ಭಾಗ್ಯ ವೆಂದು ಅವನು ಭಾವಿಸಿದ್ದನು. ಅವನಿಗೆ ಬೇಕಾದ ಬಟ್ಟೆಬರೆಗಳನ್ನು ಪೀಟರನೇ ಕೊಂಡುಕೊಡುತ್ತಿದ್ದನು. ಮೇಲಷ್ಟು ಕೈಗೆ ಸಂಬಳ ವನ್ನೂ ಕೊಡುತ್ತಿದ್ದನು. ಕಿವಿ ನೆಟ್ಟಗೆ ಕೇಳಿಸದಿರುವುದೂ ಒಂದು ಪುಣ್ಯವೇ ಅಲ್ಲವೇ? ಏನೆಂದರೂ ಅವನಿಗೆ ಕೇಳಿಸದೆ ಇದ್ದುದರಿಂದ ಡೇನಿಯಲ್ಲನು ಕೋಪಗೊಳ್ಳುವ ಸಂದರ್ಭಗಳು ಒದಗುತ್ತಿರಲಿಲ್ಲ.

ನಗರದಲ್ಲುಳ್ಳ ಅಂಗಡಿಯವರು ರೊಟ್ಟಿ ಮೊಟ್ಟೆಗಳನ್ನು ಬುಟ್ಟಿಗಳಲ್ಲಿ ತುಂಬಿ ದಿನವಹಿ ನೆಟ್ಟಗೆ ಮನೆ ಬಾಗಿಲಲ್ಲಿ ತಂದು ಮಾರಾಟ ಮಾಡುತ್ತಿದ್ದರು. ಆದುದರಿಂದ ಆಯಾಸವಿಲ್ಲದೆ ಡೇನಿಯಲ್ಲನು ತನಗೂ ತನ್ನ ಯಜಮಾನ ನಿಗೂ ಅಂದಂದು ಬೇಕಾಗುವಷ್ಟು ರೊಟ್ಟಿ, ಮೊಟ್ಟೆಗಳನ್ನು ಕೊಂಡಿಡುತ್ತಿ ದ್ದನು. ಇದಕ್ಕೆ ಮೇಲ್ಪಟ್ಟು ನಂಜಿಕೊಳ್ಳುವುದಕ್ಕೆ ಕಾಯಿಪಲ್ಯಗಳೇ

ಮುಂತಾದುವನ್ನು ಅಡುಗೆ ಮಾಡಿ ಸಿದ್ಧಗೊಳಿಸುವುದೂ ಡೇನಿಯಲ್ಲನ ಕೆಲಸ. ಹೊತ್ತು ಹೊತ್ತಿಗೆ ಟೀ ಕಾಸುವುದು; ಮನೆಯ ಮತ್ತು ಬಂಗಲೆಯ ಕಸ ಗುಡಿಸುವುದು; ಜೇಡರ ಬಲೆಗಳನ್ನು ಹೊಡಿಯುವುದು; ಒಡೆಯನ ಊಟ ಉಪಚಾರಗಳನ್ನು ಕ್ರಮಪ್ರಕಾರ ಗಮನಿಸುವುದು; ಶೆಟ್ಟಿ ಬಟ್ಟಲುಗಳನ್ನು ತೊಳೆದಿಡುವುದು; ಹಸು ತೊಳೆಯುವುದು; ಹಾಲು ಕರೆಯುವುದು; ಹೆಪ್ಪು ಹಾಕಿ ಕೆನೆ ಕಡೆಯುವುದು; ಯಜಮಾನನು ಮನೆಯಲ್ಲಿಲ್ಲದಾಗ ಬಂದವರಿಗೆ ಬದಲು ಹೇಳುವುದು; ಬಂಗಲೆ ಕಾಯುವುದು; ಇವೇ ಮುಂತಾದ ಹಲ ವಾರು ಕೆಲಸಗಳು ಡೇನಿಯಲ್ಲನಿಗೇ ಸೇರಿದುವು. ಇವುಗಳ ನಿರ್ವಹಣೆಯಲ್ಲಿ ಅವನು ತೋರುತ್ತಿದ್ದ ಶ್ರದ್ಧೆ, ಬುದ್ಧಿಕುಶಲತೆ ಇವುಗಳನ್ನು ಕುರಿತು ಪೀಟ ರನು ಸಮಾಧಾನ ಹೊಂದಿದ ಸಂದರ್ಭಗಳು ತೀರ ವಿರಳ. ಆದರೂ ಡೇನಿ ಯಲ್ಲನ ಸರಳ ಸ್ವಭಾವಕ್ಕೂ, ಸತ್ಯಸಂಧತೆಗೂ ಪೀಟರನು ಮನ ಸೋತಿದ್ದನು.

ಪೀಟರನು ವಾಸಿಸುತ್ತಿದ್ದ ಬಂಗಲೆಗೂ ಡೇನಿಯಲ್ಲನು ವಾಸಿಸುತ್ತಿದ್ದ 'ಔಟ್ ಹೌಸ್' ಗೂ ಬೆರೆತೂ ಬೆರೆಯದ ಸಂಬಂಧವಿದ್ದಿತು. ಒಂದರಿಂದ ಒಂದು ಈ ಕಟ್ಟಡಗಳು ಪ್ರತ್ಯೇಕವಾಗಿದ್ದಂತೆಯೇ ಆ ಎರಡು ನಿವೇಶನಗಳಲ್ಲಿ ವಾಸಮಾಡುತ್ತಿದ್ದ ಎರಡು ಮಾನವ ಜೀವಿಗಳ ರೀತಿ ನೀತಿಗಳೂ ಪ್ರತ್ಯೇಕ ವಾಗಿಯೇ ಇದ್ದುವು. ಇರಲಿ; ಹೊತ್ತು ಗೊತ್ತಿಲ್ಲದೆ ಡೇನಿಯಲ್ಲನು ಬಂಗಲೆ ಯನ್ನು ಪ್ರವೇಶಿಸುವಂತಿರಲಿಲ್ಲ. ಪೀಟರನು ತನ್ನ ಧಣಿ; ಅವನಿಗೆ ಒಪ್ಪುವ ರೀತಿಯಲ್ಲಿ ತಾನು ಕೆಲಸಮಾಡಬೇಕು; ಇಂತಿಂತಹ ಕಾಲಗಳಲ್ಲಿ ಇಂತಿಂತಹ ಕೆಲಸಗಳನ್ನು ಇಂತಿಂತಹ ರೀತಿಯಲ್ಲಿ ಮಾಡಬೇಕು ಎಂಬುದನ್ನೆಲ್ಲ ಹತ್ತು ವರ್ಷಗಳಿಂದ ಡೇನಿಯಲ್ಲನು ಮಂದಟ್ಟು ಮಾಡಿಕೊಂಡಿದ್ದನು. ಆದರೂ ಅವನನ್ನೂ ಮಿಂಚಿ ಆಗೊಂದು ಈಗೊಂದು ಪ್ರಮಾದವಶಾತ್ ತಪ್ಪುಗಳಾಗಿ ಪೀಟರನ ಕ್ರೋಧಕ್ಕೆ ಡೇನಿಯಲ್ಲನು ಗುರಿಯಾಗಬೇಕಾದ ಪ್ರಸಂಗಗಳು ಒದಗುತ್ತಿದ್ದುವು. ಇವನ್ನೆಲ್ಲ ಡೇನಿಯಲ್ಲನು ನಗುನಗುತ್ತ ಸಹಿಸುತ್ತಿದ್ದನು. ಮನೆಗೆಲಸ, ತೋಟದ ಕೆಲಸ, ಕಾವಲು ಕಾಯುವಿಕೆ ಇವನ್ನುಳಿದು ಅವನು ತನ್ನ ಧಣಿಯ ಮತ್ತಾವ ಹವ್ಯಾಸಗಳಲ್ಲಿಯೂ ತಲೆಯೊಡ್ಡುತ್ತಿರಲಿಲ್ಲ. ಅಲ್ಲದೆ

ಪೀಟರನ ಪೂರ್ವೋತ್ತರಗಳು, ಆಗುಹೋಗುಗಳು, ದೈನಿಕ ವ್ಯವಹಾರಗಳು, ವಿಚಿತ್ರ ವ್ಯಾಪಾರಗಳು ಇವ್ಯೊಂದೂ ಅವನಿಗೆ ತಿಳಿಯವು; ತಿಳಿದುಕೊಳ್ಳ ಬೇಕೆಂದು ಅವನು ಕುತೂಹಲಗೊಳ್ಳಲೂ ಇಲ್ಲ. ಒಟ್ಟಿನಲ್ಲಿ ಡೇನಿಯಲ್ ಸ್ವಾಮಿನಿಷ್ಠೆಯುಳ್ಳ ಸೇವಕ.

ವಾಡಿಕೆಯಾಗಿ ಮನೆ ಬಾಗಿಲಿಗೆ ಮಾರಾಟಕ್ಕೆ ಬರುತ್ತಿದ್ದ ಪದಾರ್ಥಗಳ ನ್ನುಳಿದು ಇತರ ಯಾವ ಪದಾರ್ಥಗಳು ಬೇಕಿದ್ದರೂ ಪೀಟರನೇ ನೇರವಾಗಿ ಪೇಟೆಗೆ ಹೋಗಿ ಅವುಗಳನ್ನು ಕೊಂಡು ತರುತ್ತಿದ್ದನು. ತನ್ನಷ್ಟು ಚನ್ನಾಗಿ ವ್ಯಾಪಾರ ಮಾಡುವವನಿಲ್ಲ; ತನ್ನಷ್ಟು ಸುಲಭವಾಗಿ ಪದಾರ್ಥಗಳನ್ನು ಕೊಂಡು ತರುವವರಿಲ್ಲ ಎಂಬುದೀಗ ಪೀಟರನ ಹದಗೊಂಡ ಅಭಿಪ್ರಾಯ.

" ಕಿವಿ ಕೇಳಿಸದ ಡೇನಿಯಲ್ಲನನ್ನು ಅಂಗಡಿಗೆ ಕಳುಹಿಸಿದರೆ ಅಂಗಡಿ ಯವನು ಒಂದು ಎಂದದ್ದನ್ನು, ಇವನು 'ಮೂರು' ಎಂದೆಣಿಸಿ ಕೊಟ್ಟು ಬಂದರೆ ಆಗ ನಷ್ಟವು ನನಗೆ ತಾನೇ ? " ಎಂದು ಪೀಟರನು ಹೇಳುತ್ತಿದ್ದನು. ಆದುದರಿಂದ ಎಂತಹ ಅವಸರದ ಪ್ರಸಂಗವೇ ಒದಗಲಿ ಡೇನಿಯಲ್ಲನನ್ನು ಅವನ ಧಣಿಯು ಅಂಗಡಿಗೆ ಕಳುಹಿಸುತ್ತಲೇ ಇರಲಿಲ್ಲ.

ಇತರರಿಂದ ತನಗೇನಾದರೂ ಕೆಲಸವಾಗಬೇಕಾಗಿದ್ದಲ್ಲಿ ಪೀಟರನು ತಾನೇ ಅವರಲ್ಲಿಗೆ ಹೋಗುತ್ತಿದ್ದನೇ ಹೊರತು ಸಾಧ್ಯವಾದಷ್ಟೂ ಅವರನ್ನು ತನ್ನಲ್ಲಿಗೆ ಬರಮಾಡಿಕೊಳ್ಳುತ್ತಿರಲಿಲ್ಲ. ಹಾಗೂ ಆಗೊಮ್ಮೆ ಈಗೊಮ್ಮೆ ಯಾರಾದರೂ ಕಾರ್ಯಾರ್ಥವಾಗಿ ಅವನನ್ನು ಹುಡುಕಿಕೊಂಡು ಬಂದರೆ ನ್ನೋಣ. ಹಾಗೆ ಬಂದವರಿಂದ ತನಗೇನಾದರೂ ಕ್ಷಿಪ್ರರೀತಿಯಲ್ಲಿ ಆದಾಯ ವಾದೀತೆಂದು ಸ್ಪಷ್ಟವಾಗಿ ಕಂಡು ಬಂದರೆ ಮಾತ್ರ ಪೀಟರನು ಅವರನ್ನು 'ಬನ್ನಿ' ಕುಳಿತುಕೊಳ್ಳಿ: ಎಂದು ಆದರಿಸುತ್ತಿದ್ದನು ; ನಯವಾಗಿ ಅವರೊಂದಿಗೆ ನಾಲ್ಕು ಮಾತುಗಳನ್ನು ಆಡುತ್ತಿದ್ದನು. ಇಲ್ಲವಿದ್ದರೆ ಹಾಗಿಂದ ಹಾಗೆಯೇ ಬಂದವರನ್ನು ಕುರಿತು 'ಹೋಗಬಹುದು' ಎಂದು ಒರಟೊರಟಾಗಿ ಅಂದು ಅವರನ್ನು ಸಾಗಹಾಕಿ ಬಿಡುವುದು ಪೀಟರನ ವಾಡಿಕೆ. ಒಟ್ಟಿನಲ್ಲಿ ಅವನು

ಯಾವ ಕೆಲಸಕ್ಕೆ ಕೈಹಾಕಬೇಕಾಗಿದ್ದರೂ, ಯಾರೊಂದಿಗಾದರೊ ಆದರದಿಂದ ಮಾತನಾಡಬೇಕಿದ್ದರೂ ಪ್ರತಿಫಲ—ಅದರಲ್ಲಿಯೂ ಹೆಚ್ಚಿನ ಪ್ರಮಾಣದ ಪ್ರತಿಫಲವು—ಸ್ಪಷ್ಟವಾಗಿ ಕಂಡು **ಬಂದರೇನೆ !**

ಬೇಡುವುದಕ್ಕೆಂದು ತನ್ನ ಬಾಗಿಲಿಗೆ ಯಾರಾದರೂ ಬಂದರಂತೂ ಪೀಟರನಿಗೆ ಎಲ್ಲಿಲ್ಲದ ಕೋಪ. ಬಂದವರನ್ನು ಹಾಗಿಂದ ಹಾಗೆಯೇ ಬೈದು ಹೊರದಬ್ಬುವುದು ಆವನ ಪದ್ಧತಿ. ಮತ್ತೆ ಯಾರಾದರೂ ಅಪರಿಚಿತರು ತನ್ನನ್ನು ಕಾಣಲೆಂದು ಬಂದರೆ ಅವರು ಅನೇಕವಾಗಿ ಸುಲಿಗೆಗಾರರಾಗಿರ ಬೇಕೆಂಬುದೇ ಪೀಟರನ ನಿರ್ಧರ. ಹಾಗೂ ಅಂತಹವರು ತನ್ನ ಮುಂಬಾಗಿಲನ್ನು ತುಳಿಯುವುದಕ್ಕೆ ಅವಕಾಶವನ್ನು ಕೊಡದಿರಲು ಆದಷ್ಟು ಪ್ರಯತ್ನಿಸುತ್ತಿದ್ದನು. ಬದಲಾಗಿ ಅಂತಹವರನ್ನು ಬಾಗಿಲಬಳಿ ತಾನೇ ಎದಿರ್ಗೊಂಡು, ಯಾವುದಾದರೂ ನೆಪವನ್ನು ಹೂಡಿ, ಸಾಗಹಾಕುವವರೆಗೂ ಪೀಟರನ ಮನಸ್ಸಿಗೆ ನೆಮ್ಮದಿ ಇರುತ್ತಿರಲಿಲ್ಲ.

ಮಾನವಕಲ್ಯಾಣವನ್ನು ಸಾಧಿಸುವ ಹೆಬ್ಬಯಕೆಯನ್ನು ಧರ್ಮಸಂಸ್ಥೆ ಗಳು ಹೊಂದಿರುತ್ತಲ್ಲವೆ ? ಅವು ತಮ್ಮ ಪರಾಕ್ರಮಭರಿತ ಪ್ರತಿನಿಧಿಗಳನ್ನು ಶ್ರೀಮಂತದಾತರ ಬಳಿ ನಿಧಿಶೇಖರಣೆಗಾಗಿ ಕಳುಹಿಸುತ್ತವೆ. ಪ್ರತಿನಿಧಿಗಳು ವಾಚಾಳಿಗಳು ; ತಾವು ಕೈಕೊಂಡ ಕಾರ್ಯವನ್ನು ಕ್ರಮಬದ್ಧವಾಗಿ ನೆರ ವೇರಿಸಲು ಕಂಕಣಬದ್ಧರಾದವರು ; ಇಂತಹವರು ದೇಶದಾದ್ಯಂತ ಸಂಚರಿಸಿ, ಧನ ಸಂಗ್ರಹಣ ಮಾಡುತ್ತಾರೆ. ಈ ಪಂಗಡಕ್ಕೆ ಕಲೆತವರು ಯಾರಾದರೂ ದಾರಿ ತಪ್ಪಿ, ಪೀಟರನ ಬಂಗಲೆಯನ್ನು ಕಂಡು ಮೋಹಿಸಿ, ತಮ್ಮ ನಿಧಿಗೆ ಉದಾರ ಸಹಾಯ ನೀಡಿ ಎಂದು ಬೇಡುತ್ತ ಅವನ ಬಳಿ ಬಂದರಂತೂ ತೀರಿತು. ಅವರನ್ನೂ ಅವರ ಸಂಸ್ಥೆಗಳನ್ನೂ, ಅವುಗಳ ಸಂಸ್ಥಾಪಕರನ್ನೂ, ಪೋಷಕ ವರ್ಗದವರನ್ನೂ ಪೀಟರನು ಒಳಗೊಳಗೆ ಶಪಿಸುತ್ತಿದ್ದನು. ಆದರೆ ಹೊರಗೆ ಮಾತ್ರ ಏನಾದರೊಂದು ಕುರುಡು ಕಾರಣವನ್ನು ಕಲ್ಪಿಸಿ ' ಏನೂ ಸಾಧ್ಯವಿಲ್ಲ ; ಬರಿಗೈಯಲ್ಲಿ ನಿಮ್ಮನ್ನು ಕಳುಹಿಸಲಂತೂ ನನಗೆ ಮನಸ್ಸೇ ಒಪ್ಪದು. ಆದರೂ ಏನು ಮಾಡುವುದು ? ಬಹಳ ವ್ಯಸನವಾಗುತ್ತದೆ

ನೋಡಿ. ಧರ್ಮ ಕೊಟ್ಟೂ ಕೊಟ್ಟೂ ಈ ವೇಳೆಗೆ ನಾನೂ ಸೋತು ಸೊರಗಿ ಹೋಗಿದ್ದೇನೆ. ಕೊಟ್ಟು ಕೊಟ್ಟು ಬೇಸತ್ತವರನ್ನೇ ಮತ್ತೆ ಮತ್ತೆ ಕಾಡಿ ಕಾಡಿ ಬೇಡಿದರೆ ಏನನ್ನು ತಾನೇ ಮಾಡುವುದು ?' ಎನ್ನುವುದುಂಟು.

ಆದರೆ ಪೀಟರನ ಮಾತುಗಳನ್ನು ಪ್ರತಿನಿಧಿಗಳು ಒಪ್ಪಬೇಕಲ್ಲ! ಆ ಜಾತಿಯವರಲ್ಲಿ ಕೆಲವರು ಸ್ವಾರ್ಥಸ್ವಭಾವದವರು ; ಮತ್ತೆ ಕೆಲವರು ಪ್ರಚಂಡ ಪ್ರಭಾವದವರು ; ಇನ್ನು ಕೆಲವರು ಬಿಚ್ಚಿದ ಬಾಯಿ ಮುಚ್ಚದವರು ; ಅನೇಕರು ಸೋಲನ್ನು ಸೋಲಿಸಿದವರು. ಇಂತಹವರಿಗೆ ಅವರು—ಇವರು ; ತನ್ನ ದೇಶ—ಪರದೇಶ ; ಹೆಚ್ಚು—ಕಡಿಮೆ ; ಕೃಪಣರು—ಉದಾರಿಗಳು ಎಂಬ ವ್ಯತ್ಯಾಸ ನಿಯಮಗಳಿಲ್ಲ. ಕೃಪಣರ ಕಲ್ಲೆದೆಗಳನ್ನು ಕಣ್ಣು ಮುಚ್ಚಿ ತೆರೆಯುವುದರೊಳಗೆ ಕರಗಿಸಿ ನೀರಾಗಿ ಹರಿಸುವ ಕಣ್ಣುಕಟ್ಟು ವಿದ್ಯೆಯಲ್ಲಿ ನಿಸ್ಸೀಮರಾದವರೇ ಈ ವೃತ್ತಿಯನ್ನು ಹೆಗಲ ಮೇಲೆ ಹೊತ್ತವರು ! ಅವರಿಗೆ ಭಯವೂ ಇಲ್ಲ , ಭ್ರಾಂತಿಯೂ ಇಲ್ಲ; ಬಿಗುಮಾನವಿಲ್ಲ, ಬಿಕ್ಕಳಿಕೆ ಮೊದಲೇ ಇಲ್ಲ. ಆಡುವ ಮಾತು ಕಬ್ಬು ಕತ್ತರಿಸಿ ಕೈಯಲ್ಲಿ ಕೊಟ್ಟಂತೆ! ಇಂತಹ ಪ್ರಭಾವಶಾಲಿಗಳಲ್ಲಿ ಎಷ್ಟೋ ಜನರು ಈ ವೇಳೆಗೆ ಪೀಟರನಿಂದ ಪರಾಜಿತರಾಗಿದ್ದಾರೆ. ಪೀಟರನ ಪದ್ಧತಿಗಳು ನಲವತ್ತು ವರ್ಷಗಳಿಂದ ಪಳಗಿ ಬಂದುವು ; ಪ್ರಾಚೀನವಾದುವು ; ಪ್ರಚಂಡವಾದ ಕಟ್ಟುನಿಟ್ಟುಗಳನ್ನೊಳಗೊಂಡವು. ನಿಧಿಸಂಗ್ರಹಣಕ್ಕೆಂದು ತನ್ನಲ್ಲಿ ಬಂದ ಪ್ರತಿನಿಧಿಗಳ ಉತ್ಸಾಹವನ್ನು ಚೆಲ್ಲಾಡಿ ಮೂಕರನ್ನಾಗಿ ಮಾಡಿಬಿಡುವುದರಲ್ಲಿ ಪೀಟರನೂ ನಿಸ್ಸೀಮನೇ ! ಅವನ ವಾದಸರಣಿಯೆಂತಹುದು ?

"ಹೀಗೆ ನಿಧಿಸಂಗ್ರಹಕ್ಕೆಂದು ಅಪಾರ ಹಣವನ್ನು ವ್ಯಯಮಾಡಿ ದೇಶ ವಿದೇಶಗಳಲ್ಲಿ ಸುತ್ತಿ ಅಲೆಯುವ ನೀವು ನಿಮ್ಮ ಕಾಲವನ್ನೂ, ಶಕ್ತಿಯನ್ನೂ ವ್ಯರ್ಥಮಾಡಿಕೊಳ್ಳುವುದಾದರೂ ಏತಕ್ಕೆ ? ಇದಕ್ಕೆ ಬದಲಾಗಿ ನೀವಿದ್ದಲ್ಲಿ ನಿಂತು, ನೆಲಕ್ಕೆ ನೀರು ಹಾಯಿಸಿ, ನೇಗಿಲನ್ನು ಹಿಡಿದು, ಉತ್ತು, ಬಿತ್ತಿ, ಕಳೆ ಕಿತ್ತು ಬೇಸಾಯಮಾಡಿದರೆ ನಿಮ್ಮ ಬಂಜರು ಭೂಮಿಗಳು ಭಂಗಾರದ ಭಾಂಡಾರಗಳಾಗವೇ ? ಹಸಿದ ಸಹಸ್ರಾರು ಹೊಟ್ಟೆಗಳಿಗೆ ಊಣಿಸು ದೊರಕ

ಲಾರದೇ ? ಕಾಡಿನಲ್ಲಿ ಕಟ್ಟಿಗೆಯನ್ನು ಸೀಳಿ; ಬಂಡೆಗಳನ್ನು ಒಡೆದು ಕಲ್ಲುಗಳನ್ನು ಕೂಡಿಸಿ ಬಂಗಲೆಗಳನ್ನು ಕಟ್ಟಿ: ಭೂಮಿಯನ್ನು ಅಗೆದು ಜಲವನ್ನು ಹೊರಗೆ ಚೆಲ್ಲಿ; ನೆಲದಲ್ಲಿ ಗೊಬ್ಬರವನ್ನು ಕೂಡಿಹಾಕಿ; ನದಿಗಳನ್ನು ತಡೆಗಟ್ಟಿ ನಾಲೆಗಳಲ್ಲಿ ನೀರು ಹರಿಸಿ; ಉಚ್ಛಕಂಠದಿಂದ ಉಜ್ವಲ ಉಪದೇಶಗಳನ್ನೊಳಗೊಂಡ ಉಪನ್ಯಾಸಗಳನ್ನು ಮಾಡಿ; ಸೋಮಾರಿಗಳನ್ನು ಹೊಡೆದೆಬ್ಬಿಸಿ ಶ್ರಮಜೀವಿಗಳನ್ನಾಗಿ ಮಾಡಿ; ಶ್ರಮಪಟ್ಟವರಿಗೆ ಸ್ವತ್ತು, ಸ್ವಾತಂತ್ರ್ಯ; ಸುಖ, ಸಂತೋಷ—ಶಾಂತಿ, ವಿಶ್ರಾಂತಿ! ಅದನ್ನು ಬಿಟ್ಟು ನಿಧಿ .... ನಿಧಿ! ನಿಧಿ ಇರುವುದು ನಿಮ್ಮ ಅಂಗೈಯ್ಯಲ್ಲಿ—ನಿಮ್ಮ ಮೆದುಳಿನ ಅಂತರಾಳದಲ್ಲಿ! ಹೋಗಿ .... .... ಹೋಗಿ .... ನಿಮಗೆ ನಾಚಿಕೆಯಾಗುವುದಿಲ್ಲವೆ—ಹೀಗೆ ಕಂಡವರ ಮುಂದೆ ಗಂಟಲೊಡೆಯುವಂತೆ ಕೂಗಾಡಿ, ಕುಣಿದು, ಕುಪ್ಪಳಿಸಿ, ಹಲ್ಲುಕಿರಿದು, ಕಾಡಿ ಬೇಡುವುದಕ್ಕೆ ? "

ಹೀಗೆಲ್ಲ ತೇಜೋವಧೆ ಮಾಡುವುದು; ಹಲವರ ಉತ್ಸಾಹವನ್ನು ಸುಟ್ಟು, ಹಿಡಿ ಬೂದಿಯನ್ನು ಅವರ ಕೈಯಲ್ಲಿಟ್ಟು ಕಳುಹಿಸುವುದು; ಇನ್ನು ಕೆಲವರಿಗೆ ಇನ್ನೆಂದೆಂದಿಗೂ ತನ್ನನ್ನು ಬಂದು ಕಾಡಲೇ ಕೂಡದೆಂದೆಚ್ಚರಿಸಿ ಕಳುಹಿಸುವುದು; ಬಹಳ ಬಿಗಿಯಾದವರಿಗೆ ಅವರ ಬಂಕೆಯನ್ನು ಬಿಡಿಸುವ ತೈಲವೋ, ಎಂಬಂತೆ ಮೊದಲೇ ಅಣಿಮಾಡಿಕೊಂಡಿದ್ದಂತೆ ಬಗೆ ಬಗೆಯಾಗಿ ಬಣ್ಣಕಟ್ಟಿ ಬಡತನದ ಬಿಕ್ಕಟ್ಟಿನ ಕಥೆಗಳನ್ನು ಮೇಲಿಂದ ಮೇಲೆ ಹೇಳಿ, ಒಡಂಬಡಿಸಿ, ನಾಲ್ಕಾರು ದ್ರಾಕ್ಷಿ ಗೊಂಚಲುಗಳನ್ನು ಅವರಿಗೆ ಕೊಟ್ಟು, ನಯವಿನಯಗಳಿಂದ ನಮಸ್ಕಾರಮಾಡಿ 'ನನ್ನ ಅಸಹಾಯತೆಯನ್ನು ಕುರಿತು ಅಶಾಂತರಾಗಬೇಡಿ; ನೀವು ಹೋದೆಡೆಯಲ್ಲಿ ನಿಮ್ಮ ಸತ್ಕಾರ್ಯಕ್ಕೆ ಸಜ್ಜನರ ಸಹಾಯ ಸಹಾನುಭೂತಿಗಳು ಸಮಂಜಸ ರೀತಿಯಲ್ಲಿ ದೊರೆಯಲಿ' ಎಂದು 'ಹಾರೈಸಿ' ಬಾಗಿಲಾಚೆ ಬೀಳ್ಕೊಟ್ಟು ಒಳಗೆ ಬಂದು 'ಪೀಡೆ ತೊಲಗಿತು' ಎಂದು ಸಂತೋಷಗೊಳ್ಳುವುದು. ನಾನಾ ಬಗೆಯ ನಿಧಿ ಶೇಖರಣ ಪ್ರತಿನಿಧಿಗಳಲ್ಲಿ, ಭಿಕ್ಷುಕರಲ್ಲಿ, ಪೀಟರನು ಆಚರಿಸುತ್ತಿದ್ದ ನಾನಾ ಬಗೆಯ ವಿಧಿ ವಿಧಾನಗಳು ವಿಚಿತ್ರವಾದುವು; ಪ್ರತ್ಯೇಕ ರೀತಿಯುವು; ಪ್ರಚಂಡ ಪ್ರಭಾವವುಳ್ಳವು!

ಹೀಗೆ ಇತರರು ಆಡಿದ್ದು ಸರಿಯಾಗಿ ಕಿವಿಕೇಳಿಸದ, ತಾನೇ ಮಾಡಿದ್ದು—ನೋಡಿದ್ದು ಸರಿಯಾಗಿ ಕಣ್ಣು ಕಾಣಿಸದ, ಮಾತು ಬಲ್ಲವ ನಾದರೂ ಮೂಕಸಮಾನನಾದ - ಮನುಷ್ಯ ಜಾತಿಗೆ ಸೇರಿದ ಬಟ್ಲರ್, ತೋಟಗಾರ, ಕಾವಲುಗಾರ—ಎಲ್ಲವೂ ತಾನೇ ಆದ ಡೇನಿಯಲ್—ಇವ ನೊಬ್ಬ; ಮೂಗುಜೀವಿಯಾದ ಹಸು ಮತ್ತೊಂದು; ಈ ವಿಶಿಷ್ಟ ಪರಿವಾರ ಕ್ಕೆಲ್ಲ ಒಡೆಯ ಪೀಟರ್! ಅವನು ಧರಿಸುತ್ತಿದ್ದ ಉಡುಪು ಸರ್ವಸಾಧಾರಣ ವಾದುದು. ಮಾತಿನಲ್ಲಂತೂ ಪೀಟರನು ಮಿತವೆಂದರೆ ಅತ್ಯಂತ ಮಿತ. ಅವನು ಮನೆಯಲ್ಲಿ ಯಾವಾಗಲೂ ಒಬ್ಬನೇ! ಅವನಾಗಿ ಕರೆದವರು ಅವನ ಮನೆ ಬಾಗಿಲಿಗೆ ಬಾರರು; ಕರೆಯದೆ ಬಂದವರು ಬೈದರೂ, ಬಡಿದರೂ, ಬೆದರಿಸಿದರೂ ಬಡಪೆಟ್ಟಿಗೆ ಅವನ ಮನೆ ಬಾಗಿಲು ಬಿಟ್ಟು ಕದಲರು. ಇರಲಿ; ಅವನು ಇರುಳಿನಲ್ಲಿ ಉರಿಸುವುದು ಕಿರುಹಣತೆಯೊಂದನ್ನು ಮಾತ್ರ. ಅವನ ಮನೆಯಲ್ಲಿನ ಸಾಮಾನುಗಳೂ ಎಷ್ಟೋ ಅಷ್ಟೇ. ಹಣದ ಹುಚ್ಚೊಂದು ಹೆಚ್ಚಾಗಿ ಅವನ ಹೆಗಲನೇರದಿದ್ದರೆ ಅವನು ವಿರಕ್ತನೇ ಸರಿ. ಆದರೆ ಪೀಟ ರನ ರೀತಿನೀತಿಗಳು ಮಾತ್ರ ಅಸಾಧಾರಣವಾದುವು. ಅಪರಿಮಿತ ಪ್ರಮಾಣ ದಲ್ಲಿ ಧನವನ್ನು ಶೇಖರಿಸಿದ್ದ ಅವನು ತೋರಿಕೆಗೆ ಸರಳನಂತೆ ಕಂಡರೂ, ಅವನ ಆ ಸರಳತೆಯು ಸ್ವಾರ್ಥತೆಗೆ ಹೊದಿಸಿದ ಕವಚವಲ್ಲದೆ ಮತ್ತೆ ಬೇರೆ ಯಲ್ಲ. ಹೆರವರ ದೃಷ್ಟಿಯಲ್ಲಿ ಶ್ರೀಮಂತನೆಂದು ತೋರಿಸಿಕೊಳ್ಳುವುದು ತನ್ನ ಹಿರಿತನಕ್ಕೆ ತಕ್ಕುದಲ್ಲವೆಂದು ಅವನು ಬಹುವಾಗಿ ಮನಗಂಡಿದ್ದನು.

ಪೀಟರನು ಪೇಟೆಗೆ ಹೋಗಿ ಬರುತ್ತಿದ್ದುದೆಲ್ಲ ಹೆಚ್ಚಾಗಿ ಹಗಲಲ್ಲೇ. ಕತ್ತಲಾದ ಬಳಿಕ ಅವನು ಮನೆ ಬಿಟ್ಟು ಕದಲುತ್ತಿರಲಿಲ್ಲ. ಅಸ್ತಮಾನವಾದ ಮೇಲೆ ನಡುಮನೆಯಲ್ಲಿ ಕಿರುಹಣತೆಯನ್ನು ಹೊತ್ತಿಸಿ ಒಂದು ಮೂಲೆಯಲ್ಲಿರಿ ಸುವುದು; ಬಾಗಿಲನ್ನು ಭದ್ರಮಾಡಿ ಮನೆಯೊಳಗೆ ಅಲ್ಲಿಂದಿಲ್ಲಿಗೆ ಅಡ್ಡಾಡು ವುದು; ತಲೆ ಕೆರೆದುಕೊಳ್ಳುತ್ತ ಅಂದಿನ ದಿನದ ಆದಾಯ ನಷ್ಟಗಳನ್ನು ಲೆಕ್ಕಹಾಕುವುದು; ಮರುದಿನ ಹಿತ್ತಿಲ ಕೈತೋಟದಲ್ಲಿ ಬೆಳಸನ್ನು ಯಾರಿಗೆ ಮಾರುವುದು—ಹೇಗೆ ಮಾರುವುದು—ಎಷ್ಟಕ್ಕೆ ಮಾರುವುದು? ಇವೇ ಮುಂತಾದ ಯೋಚನೆಗಳಲ್ಲಿ ರಾತ್ರಿಯನ್ನು ಕಳೆಯುವುದು; ಇದ್ದಕ್ಕಿದ್ದಂತೆ

ಮರುದಿನದ, ಮುಂದಿನ ತಿಂಗಳ, ಮುಂದಿನ ವರ್ಷದ ಆರ್ಥಿಕಯೋಜನೆ ಗಳನ್ನು ನಿರ್ಧರಿಸುವುದು. ಬಳಿಕ ಬಾಳಲ್ಲಿ ಬೆಳಕನ್ನು ಕಾಣದೆ. ಬೇಸರ ಗೊಂಡು ಬಳಿಯಲ್ಲೇ ಇದ್ದ ಹಾಸಿಗೆಯಲ್ಲಿ ಹೋಗಿ ಬಿದ್ದುಕೊಳ್ಳುವುದು; ನಿದ್ರೆ ಬಾರದೆ ಹೊರಳಾಡುತ್ತಿರುವುದು; ಹಳೆಯಕಾಲದ ಚಿತ್ರಗಳು ಥಟ್ಟನೆ ಕಣ್ಣಿಗೆ ಕಾಣಿಸಿಕೊಂಡಾಗ ಬೆಚ್ಚಿ ಬೀಳುವುದು; ಬೆವರಿ ಬಡವಾಗುವುದು; ಆ ಮುದಿಜೀವಕ್ಕೆ ಮನಸ್ಸು ಒಂದು ನೆಲೆಯಲ್ಲಿ ನಿಂತರಲ್ಲವೇ? ಅವನದು ಗುಪ್ತ ಜೀವನ; ಅವನು ಶೇಖರಿಸಿದ್ದು ಗುಪ್ತನಿಧಿ! ಅವನ ಮನಸ್ಸೊಂದು ಗುಹೆ ಇದ್ದಂತೆ.

ಹೊತ್ತು ಮುಳುಗುವುದಕ್ಕೆ ಮುನ್ನ ಅನುದಿನವೂ ಡೇನಿಯಲ್ಲನು ತನ್ನ ಧಣಿಯ ಊಟ ಉಪಚಾರಗಳನ್ನು ಮುಗಿಸಿಬಿಡಬೇಕಾಗಿ ಅವನಿಗೆ ಕಟ್ಟ ಪ್ಪಣೆ. ಈ ರೀತಿ ದಿನವಹಿ ಕತ್ತಲಾಗುವುದಕ್ಕೆ ಮುನ್ನ ಊಟಮಾಡಿ ಪೀಟ ರನು ತನ್ನ ಬಂಗಲೆಯಲ್ಲಿ ಏಕಾಂಗಿಯಾಗಿ ಉಳಿಯುತ್ತಿದ್ದನು. ಹೀಗೆ ಒಬ್ಬೊಂಟಿಗನಾಗಿ ಕಾಲ ಕಳೆಯುವುದೆಂದರೆ ಸಾಧಾರಣ ಜನರಿಗೆ ಸಾಧ್ಯವೆ ನಿಸದ ಮಾತು. ಆದರೆ ಪೀಟರನಿಗೆ ನುಟ್ಟಿಗೆ ಅದು ವರ್ಷಾಂತರಗಳಿಂದ ಅವನೊಡನೆ ಪಳಗಿ ಬಂದ—ಮಾರ್ಪಡಿಸಲಾಗದ ಪದ್ಧತಿಯಾಗಿದ್ದಿತು.

ಸಂಸಾರವಿಲ್ಲದೆ, ಸ್ನೇಹಿತರಿಲ್ಲದೆ, ಸುತ್ತು ಪರಿವಾರದವರಿಲ್ಲದೆ, ಸಂತೋಷದ ವೃತ್ತಿ ವ್ಯವಹಾರಗಳಿಲ್ಲದೆ, ಪೀಟರನಂತೆ ತನಗೆ ತಾನೇ ಜೀವಿ ಸುವುದು ; ಅಂತಹ ಜೀವನದಲ್ಲಿ ಒಂದು ರಸ, ಒಂದು ಔಚಿತ್ಯ, ಒಂದು ಅರ್ಥ, ಒಂದು ಆನಂದ ಇವುಗಳನ್ನು ಕಾಣುವುದು ; ಇದು ಅವನನ್ನುಳಿದು ಸಾವಿರಕ್ಕೊಬ್ಬರಿಗೆ--ಇಲ್ಲ—ಹತ್ತುಸಾವಿರಕ್ಕೊಬ್ಬರಿಗೆ—ಏಕೆ? ಲಕ್ಷಕ್ಕೊಬ್ಬ ರಿಗೆ—ಸಾಧ್ಯವೆನಿಸದು. ಅವನು ಸಮೂಹಪ್ರಿಯನಲ್ಲ; ಸಮೂಹದಲ್ಲಿ ಕಲೆತು ಸಂತೋಷಿಸುವ ಆಸೆ ಅವನಿಗಿಲ್ಲ. ಪೀಟರನು ಬಡವನಾಗಿದ್ದಿದ್ದರೆ ಆ ಮಾತು ಬೇರೆ. ಕಡುಬಡವನಾದುದರಿಂದ, ಯಾರೂ ತನ್ನೊಡನೆ ಬೆರೆಯಲೊಪ್ಪದುದರಿಂದ, ಬಾಳ ಬೇಸರದಿಂದ ಅವನು ಯಾರೊಂದಿಗೂ ಬೆರೆಯುತ್ತಿರಲಿಲ್ಲನೆನ್ನಬಹುದು. ಆದರೆ ಪೀಟರನು ಅತ್ಯಂತ ಶ್ರೀಮಂತ.

ತನ್ನ ಶ್ರೀಮಂತಿಕೆಯನ್ನು ಮುಚ್ಚಿಡುವುದರಲ್ಲಿ ಅವನು ಆಚರಿಸುತ್ತ ಬಂದ ರೀತಿನೀತಿಗಳು ಅತಿ ಚತುರತೆಯಿಂದ ಕೂಡಿದ್ದುವು. ತನ್ನ ಅಪಾರ ಧನದ ಲ್ಲಿಯು ಅಲ್ಪಭಾಗವನ್ನಾದರೂ ಅವನು ವೆಚ್ಚಿಸುತ್ತ ಬಂದಿದ್ದರೆ ಅವನ ಮನೆಯಲ್ಲಿ ತಂಡೋಪತಂಡವಾಗಿ ಎಡೆಬಿಡದೆ ಜನರು ತುಂಬಿ ತುಳುಕಾಡುತ್ತಿದ್ದರು. ಅವನ ಬಾಳು ಬತ್ತಿದ ಬಯಲಾಗದೆ ಅಲ್ಲೊಂದು ಆನಂದದ ಹೊಳೆಯು ಕೋಲಾಹಲದಿಂದ ಉಕ್ಕಿ ಹರಿಯುತ್ತಿತ್ತು. ಅದರಿಂದ ಅವನ ಬಾಳು ಬೆಂದಂತಿರದೆ ಸಂತಸದಿಂದ ಮುಂದೆ ಸಾಗುತ್ತಿತ್ತು. ಅವನ ನಾಡಿಗೂ ಅದರಿಂದ ವಿಶೇಷ ಪ್ರಯೋಜನವು ಉಂಟಾಗುತ್ತಿತ್ತು. ಆದರೆ ಅವನು ತನ್ನ ಅಪಾರವಾದ ಆ ಧನವನ್ನು ಸೂಕ್ತರೀತಿಯಲ್ಲಿ ವಿನಿಗಿಸ ಬೇಕೆಂಬ–ಅದರಿಂದ ಸಮಾಜಕ್ಕೆ ಸಮಂಜಸ ಸಹಾಯವಾಗಲೆಂಬ ಬಯಕೆ ಯನ್ನೂ ತಾಳಲಿಲ್ಲ. ಹೀಗೆ ಅದರಿಂದ ಪ್ರಯೋಜನಹೊಂದಿಸದೆ–ಅದನ್ನು ಇತರರ ಕೈಗೆ ಸಿಕ್ಕಗೊಡದೆ—ಭದ್ರಪಡಿಸುವುದರಲ್ಲಿ ಅವನು ಕೈಗೊಂಡ ರಹಸ್ಯ ಕ್ರಮಗಳು ವಿಶೇಷ ವಿಧಿ ವಿಧಾನಗಳಿಗೆ ಸೇರಿದ್ದುವು.

* * * *

ಪ್ರಕರಣ ೪.

# ಧನದಾಸ

ಈ ಮೊದಲೆ ಹೇಳಿದಂತೆ ಪೀಟರನ ಬಂಗಲೆಯಲ್ಲಿ ರಾತ್ರಿಯ ಹೊತ್ತು ಯಾವುದೋ ಒಂದು ಮೂಲೆಯಲ್ಲಿ ಕಿರುಹಣತೆಯೊಂದು 'ಮಿಣಕ್' 'ಮಿಣಕ್' ಎಂದು ಉರಿಯುತ್ತಿತ್ತು. ಹಣತೆಯಲ್ಲದೆ ದೊಡ್ಡದೊಂದು ಪ್ರಕಾಶಮಾನವಾದ ದೀಪವನ್ನು ಹೊತ್ತಿಸಿ ಇಡುವುದು ಅವನ ವಾಡಿಕೆಗೆ ಸರಿಬಂದಿದ್ದಿಲ್ಲ. ಬಂಗಲೆಯ ಅಂಚಿನಲ್ಲಿ ರಸ್ತೆಯೊಂದಿದ್ದಿತು. ಕತ್ತಲಾದ ಮೇಲೆ ಆ ರಸ್ತೆಯಲ್ಲಿ ಹಾದುಹೋಗುವವರಿಗೆ ಬದಿಯಲ್ಲೊಂದು ಬಂಗಲೆಯಿದೆಯೆಂಬುದೆ ಗೊತ್ತಾಗುತ್ತಿರಲಿಲ್ಲ. ಸಾಲದುದಕ್ಕೆ ಬಂಗಲೆಯ ಸುತ್ತಲೂ ವಿಶಾಲವೂ ಎತ್ತರವೂ ಆದ ವೃಕ್ಷಗಳು ಬೆಳೆದಿದ್ದುವು. ಕತ್ತಲಲ್ಲಿ ಆ ವಿಶಾಲ ವೃಕ್ಷಗಳು ಬಂಗಲೆಗೊಂದು ಕೋಟೆಯನ್ನು ಕಟ್ಟಿದಂತಿದ್ದುವು. ಮೇಲಾಗಿ ಬಂಗಲೆಯೊಳಗಿದ್ದ ಕಿರುಹಣತೆಯ ಪ್ರಕಾಶವು ಕಿಟಕಿಯ ಕಂಡಿಗಳಿಂದಲೂ ಇಣಿಕಿ ನೋಡುವಂತಿರಲಿಲ್ಲ. ಹಾಗಿರುವುದೇ ಕ್ಷೇಮಕರವೆಂದು ಪೀಟರನು ನಂಬಿದ್ದನು. ಅಪರಿಚಿತರಾರಾದರೂ ಅಕಸ್ಮಾತ್ತಾಗಿ ಆ ಹಾದಿಯಲ್ಲಿ ಹಾದು ಹೋದರೆ ಅವರ ಕಾಲು ಸಪ್ಪಳವೂ, ಬಾಯಿಮಾತೂ ಸಂಪೂರ್ಣವಾಗಿ ಅಡಗಿ ಮಾಯವಾಗುವವರೆಗೂ ಅವನಿಗೆ ಸಂಶಯವೇ. 'ಟಪ್ ಟಪ್' ಎಂದು ಹಾದಿಗರ ಮೇಜೋಡಿನ ಶಬ್ದವು ಪೀಟರನ ಕಿವಿಯಲ್ಲಿ ಬೀಳುತ್ತಿದ್ದಂತೆಲ್ಲ ಅವನ ಎದೆಯಲ್ಲಿ ಎರಡೆರಡು ಗುಂಡುಗಳು ಹೊಕ್ಕಂತಾಗುತ್ತಿತ್ತು. ಹಾಗೂ ಹಾಸಿಗೆಯಲ್ಲಿ ಹೊದ್ದುಕೊಂಡು ಮಲಗಿದರೂ ಅವನಿಗೆ ನಿದ್ರೆ ಹತ್ತುತ್ತಲೇ ಇರಲಿಲ್ಲ. ಅಷ್ಟೊಂದು ಭಯ ಅವನಿಗೆ. ಧನದೊಡೆಯನಾದ ಅವನು ನಿಮಿಷ ನಿಮಿಷಕ್ಕೂ **ಧನದಾಸ**ನಾಗುತ್ತ ಬಂದ.

ದಿನವೂ ರಾತ್ರಿ ವೇಳೆಯಲ್ಲಿ ಅವನು ಎಷ್ಟೋ ಹೊತ್ತು ಹೀಗೆ ಹೆದರಿ, ಹಂಬಲಿಸಿ, ಹಾಸಿಗೆಯಲ್ಲಿ ಬಿದ್ದು ಹೊರಳಾಡಿ ಭೀತಿಯ ನೂತನ ಕನಸುಗಳನ್ನು ಕಾಣುತ್ತ ಹೊತ್ತುಗೊತ್ತುಗಳನ್ನು ಬದಿಗೊತ್ತಿ ಹುಚ್ಚನಂತೆ ಎಚ್ಚೆತ್ತು ಕುಳಿತಿರುತ್ತಿದ್ದನು. "ಹಗಲು ಹಗಲಾಗಿಯೇ ಇದ್ದಿರಬಾರದಾಗಿತ್ತೆ? ಏತಕ್ಕಾಗಿಯಾದರೂ ಈ ರಾತ್ರಿಯು ಸೃಷ್ಟಿ ಹೊಂದಿತೋ ಕಾಣೆನಲ್ಲ" ಎಂದು ಅನೇಕ ವೇಳೆ ಅವನಿಗೆ ಅನ್ನಿಸದೆ ಇಲ್ಲ. "ಡೇನಿಯಲ್ಲನಿಗೆ ಕಣ್ಣು ಕಾಣಿಸದು ಎಂದವನು ಹೇಳುತ್ತಾನೆ. ಆದರೂ ಅದು ಪೂರ್ತಿಯಾಗಿ ನಿಜವಿರಲಾರದು. ಕಿವಿ ಕೇಳಿಸದು ಎನ್ನುತ್ತಾನೆ. ಆದರೆ ಅದೂ ಕೃತಕವಾಗಿರಬಹುದು. ಅವನು ಯಾವನಾದರೊಬ್ಬ ದರೋಡೆಗಾರನ ಪರವಾಗಿ ನನ್ನ ರಹಸ್ಯಗಳನ್ನು ಕಂಡು ಹಿಡಿದುಕೊಳ್ಳಲೋಸುಗ ನನ್ನ ಬಳಿ ಬಂದು ಕೆಲಸಕ್ಕೆ ನಿಂತಿರಬಹುದು" ಎಂದು ಮುಂತಾಗಿ ಪೀಟರನು ಎಷ್ಟೋ ಸಲ ಶಂಕೆಗೆ ಒಳಗಾಗಿದ್ದಾನೆ. ಮತ್ತೆ ಕೆಲವುಸಲ "ಹಾಗಿರಲಾರದು" ಹತ್ತು ವರ್ಷಗಳಕಾಲ ಕ್ರಮಬದ್ಧವಾಗಿ ಹೀಗೆ ನಟಿಸಲು ಸಾಧ್ಯವಾಗಲಾರದು" ಎಂದೂ ತನಗೆ ತಾನೇ ಪೀಟರನು ಸಮಾಧಾನ ಹೇಳಿಕೊಳ್ಳುತ್ತಿದ್ದನು. ಅವನ ಆ ಏಕಾಂತವಾದ ಜೀವನದಲ್ಲಿ ಪ್ರಶ್ನೆಗಳನ್ನು ಕೇಳಿಕೊಳ್ಳುವವನೂ ಅವನೇ. ಅವಕ್ಕೆ ಪರಿಹಾರಗಳನ್ನು ನೀಡಿಕೊಳ್ಳುವವನೂ ಅವನೇ. 'ತಾ ಕಳ್ಳ, ಪರರನ್ನು ನಂಬ' ಎಂಬಂತಿತ್ತು ಪೀಟರನ ಚಿತ್ತವೃತ್ತಿ!

ಒಮ್ಮೆ ಒಂದು ವಿಚಿತ್ರದ ಪ್ರಸಂಗವು ನಡೆಯಿತು. ತನ್ನ ಧಣಿಯ ಊಟವಾದ ಮೇಲೆ ಡೇನಿಯಲ್ಲನು ತಟ್ಟೆ-ಬಟ್ಟಲು, ಚಾಕು-ಚಮಚ, ಇವನ್ನು ತೊಳೆದು ಎತ್ತಿಡುತ್ತಿದ್ದನು. ತನ್ನ ವಶಕ್ಕೆ ಒಪ್ಪಿಸಲ್ಪಟ್ಟ ಪ್ರತಿಯೊಂದು ಪದಾರ್ಥಕ್ಕೂ ಡೇನಿಯಲ್ಲನು ಹೊಣೆ ಹೊತ್ತು ಭದ್ರವಾಗಿ ರಕ್ಷಿಸಬೇಕಾಗಿತ್ತು. ಧಣಿಯ ಅಪ್ಪಣೆಯಂತೆ ಪ್ರತಿದಿನವೂ ಪಿಂಗಾಣಿ ತಟ್ಟೆ, ಬಟ್ಟಲು, ಹೂಜಿ, ಲೋಟ, ಚಾಕು, ಚಮಚ ಪ್ರತಿಯೊಂದನ್ನೂ ಒಂದು ಬಡವೆ ಎಣಿಸಿ ಎತ್ತಿಡಬೇಕು. ಏನಾದರೂ ಹೆಚ್ಚು ಕಡಿಮೆಯಾದರೆ ಅದರ ನಷ್ಟವನ್ನು ಡೇನಿಯಲ್ಲನೇ ಸರಿತೊಂದಿಸಿಕೊಡಬೇಕೆಂಬ ಕಟ್ಟಪ್ಪಣೆ. ಎಂದಿನಂತೆ ಒಂದಾನೊಂದು ದಿನ ಡೇನಿಯಲ್ಲನು ಮಲಗುವುದಕ್ಕೆ ಮುನ್ನ ಬಳಕೆ

ಯಲ್ಲಿದ್ದ ಮೇಲ್ಕಂಡ ಪದಾರ್ಥಗಳೆಲ್ಲವೂ ಸರಿಯಾಗಿವೆಯೇ ಎಂದು ಎಣಿಸಿ ನೋಡುತ್ತಿದ್ದನು. ಉಳಿದೆಲ್ಲ ಪದಾರ್ಥಗಳೂ ಸರಿಯಾಗಿದ್ದುವು. ಆದರೆ ಒಂದು ಚಾಕು ಮಾತ್ರ ಕಾಣಿಸಲಿಲ್ಲ.... ಆಗ ಸುಮಾರಾಗಿ ಕತ್ತಲಾಗಿದ್ದಿತು. ಕಳೆದುಹೋಗಿದ್ದ ಚಾಕುವನ್ನು ಕುರಿತು ಡೇನಿಯಲ್ಲನು ವಿಶೇಷವಾಗಿ ಕಾತುರಗೊಂಡನು. 'ಬಂಗಲೆಯಿಂದ ತಟ್ಟೆ ಬಟ್ಟಲುಗಳನ್ನು ಹೊತ್ತು ಹೊರಗೆ ತರುವಾಗ ಚಾಕು ಎಲ್ಲಿಯೋ ಬಿದ್ದುಹೋಗಿರಬೇಕು. ಹಗಲಲ್ಲೆ ಸರಿಯಾಗಿ ಕಣ್ಣು ಕಾಣಿಸದ ನನಗೆ ಇನ್ನು ಕತ್ತಲಲ್ಲಿ ಕಾಣಿಸುತ್ತದೆಯೇ ? ಇದರ ಮೇಲೆ ನಾನು ಕಿವುಡ ; ನೆಲದ ಮೇಲೆ ಮೊಳದುದ್ದ ಹುಲ್ಲು ಹುಲುಸಾಗಿ ಬೆಳೆದಿದೆ. ಅದರಲ್ಲಿ ಚಾಕು ಬಿದ್ದರೆ ಅದರ ಸದ್ದು ಕೇಳಿಸುತ್ತದೆಯೆ? ಹೋಗಿ ನೋಡಬೇಕು ; ಹುಡುಕಿ ತರಬೇಕು ; ಒಡೆಯನ ವಸ್ತುಗಳನ್ನು ಒಪ್ಪವಾಗಿ ಎತ್ತಿಡಬೇಕು ; ನನ್ನದಾಗಿದ್ದರೆ ಭಾದಕವಿರಲಿಲ್ಲ ; ಧಣಿಯದು ; ಅದನ್ನು ಕಳೆಯಬಾರದು.' ಡೇನಿಯಲ್ ಆಲೋಚಿಸಿದ. ಕಿರುಹಣತೆಯನ್ನು ಹೊತ್ತಿಸಿ ಕೈಯಲ್ಲಿ ಹಿಡಿದುಕೊಂಡು ಅಡುಗೆಯ ಮನೆಯಿಂದ ಬಂಗಲೆಯವರೆಗೂ ಚಾಕುವನ್ನು ಹುಡುಕುತ್ತ ಬಂದ. ಕೊನೆಗೆ ಬಂಗಲೆಯ ಬಳಿ ಧಣಿಯು ಮಲಗುವ ಕೋಣೆಯ ಕಿಟಕಿಯ ಪಕ್ಕದಲ್ಲೆ ಚಾಕು ಬಿದ್ದಿದ್ದಿತು. ಆತುರದಿಂದಲೂ ಉತ್ಸಾಹದಿಂದಲೂ ಡೇನಿಯಲ್ ಚಾಕುವನ್ನು ಕೈಗೆ ತೆಗೆದುಕೊಂಡ. ಅವನ ಆಗಿನ ಆನಂದ ಅತಿಶಯವಾಗಿತ್ತು. 'ಸದ್ಯ ಕಳೆದುಹೋಗಿದ್ದು ಮತ್ತೆ ಸಿಕ್ಕಿತಲ್ಲ .... ...... ಬದುಕಿದೆ' ಎನ್ನುತ್ತ ಡೇನಿಯಲ್ಲನ ಮನಸ್ಸು ಹಗುರವಾಯಿತು. ಹೊರಗೆ ನಡೆದ ವಿದ್ಯಮಾನ ಇಷ್ಟೇ. ಅಷ್ಟರಲ್ಲೆ ಡೇನಿಯಲ್ ಕೈಯಲ್ಲಿ ಎತ್ತಿ ಹಿಡಿದಿದ್ದ ಕಿರುಹಣತೆಯ ಪ್ರಕಾಶವು ಪೀಟರನು ಮಲಗಿದ್ದ ಕೋಣೆಯ ಕಿಟಕಿಯ ಕಂಡಿಗಳಲ್ಲಿ ದೂರಿ ಅವನ ಎದೆಯನ್ನು ಕಲಕಿಬಿಟ್ಟಿತು.

"ಈ ಬೆಳಕು ಯಾವುದು ? ಎಲ್ಲಿಂದ ಬಂದಿತು ? ಹೊರಗೆ ಹೊಂಚು ಹಾಕುತ್ತಿರುವವರು ಯಾರು ?"

ಪೀಟರನು ಸರಸರನೆ ಊಹೆಗಳನ್ನು ಉದ್ದುದ್ದಕ್ಕೆ ಹೆಣೆದ. ಅವನ

ಸಂದೇಹಗಳಿಗೆ ಮಿತಿ ಮೇರೆಗಳೇ ಇಲ್ಲದಂತಾದುವು.

"ಕೊಳ್ಳೆ ಹೊಡೆಯುವುದಕ್ಕಾಗಿ ಯಾರೋ ಸಂಚು ನಡೆಸುತ್ತಿರುವರು." ಅವನು ಭಯಗೊಂಡ. "ಡೇನಿಯಲ್ಲನನ್ನೇ ಸಹಾಯಕ್ಕೆ ಕರೆಯೋಣವೆ?" ಎಂದು ಅವನು ಮೊದಲು ಆಲೋಚಿಸಿದ. "ಆದರೆ ಅವನು ಮೊದಲೇ ಕಿವುಡ; ಹತ್ತಿರವಿದ್ದಾಗಲೇ ಹೇಳಿದ ಮಾತು ಕೇಳಿಸದು; ಇನ್ನು ಹತ್ತಿಪ್ಪತ್ತು ಮಾರು ದೂರದಲ್ಲಿರುವ ಅವನಿಗೆ ನನ್ನ ಕೂಗು ಕೇಳಿಸೀತೇ?"

ಪೀಟರನು ನಿರಾಶನಾದನು.

"ಈಗೇನು ಮಾಡುವುದು? ಕೊಠಡಿಯಲ್ಲೆ ನಿಂತು ಸಹಾಯಕ್ಕಾಗಿ ಅರಚುವುದೇ? ಅಥವಾ, ಆದದ್ದಾಯಿತೆಂದು ಹೆದರದೆ ಧೈರ್ಯದಿಂದ ಹೊರ ಬಿದ್ದು ಶತ್ರುವನ್ನು ಎದುರಿಸುವುದೇ?" ಇವೆರಡರಲ್ಲಿ ಅವನಿಗೆ ಯಾವುದೊಂದೂ ಸ್ಪಷ್ಟವಾಗಿ ಹೊಳೆಯದಾಯಿತು. "ಬಾಗಿಲನ್ನು ತೆಗೆದು ಹೊರಗೆ ಬಂದಾಗ ಹೊರಗಿರುವ ಕಳ್ಳನು ಒಳಹೊಕ್ಕು, ಇದ್ದುಬದ್ದುದನ್ನೆಲ್ಲ ಕೊಳ್ಳೆ ಹೊಡೆದು, ತನ್ನ ಕೊರಳನ್ನು ಹಿಸುಕಿ ಕಾಲಿಗೆ ಬುದ್ಧಿ ಹೇಳಿದರೆ? ಅಥವಾ, ಹೊರಗಿರುವವನು ಒಬ್ಬನೋ, ಇಲ್ಲವೇ—ಇಬ್ಬರೋ, ಹತ್ತುಜನರೋ? ಶತ್ರುಬಲವು ಪ್ರಬಲತರವಾಗಿದ್ದರೆ? ಛೆ ...ಛೇ! ಕೂಡದು; ಖಂಡಿತವಾಗಿ ಕೂಡದು; ಕತ್ತಲು! ಕವಿದಮೇಲೆ ಬಾಗಿಲು ತೆಗೆಯುವುದೆಂದರೇನು? ಕೂಡದು."

ಪೀಟರನು ನಿರ್ಧರಿಸಿದ. "ಇದ್ದಲ್ಲೆ ನಾಲ್ಕಾರು ದಿವಸ ಇದ್ದೇನು; ಸಮಾಧಿ ಹೊಂದಿಯೇನು; ಹೊರಗೆ ಮಾತ್ರ ಈ ಹೊತ್ತಿನಲ್ಲಿ ಹೋಗಲಾರೆ." ಕೊನೆಗವನು ಕೊಠಡಿಯ ಕಿಟಕಿ ಕಂಡಿಯಿಂದ ಇಣಿಕಿ ನೋಡಿದನು. ಅವನಿಗೆ ಕಂಡುದೇನು? ಹಣತೆಯೊಂದಿಗೆ ಹೊರಗಿದ್ದವನು ಡೇನಿಯಲ್! ಅವನ ಕೈಯಲ್ಲಿ ಥಳಥಳಿಸುವ ಚಾಕು! ದೀಪದ ಬೆಳಕಿನಲ್ಲಿ ಅದು ಸ್ಪಷ್ಟವಾಗಿ ಕಾಣುತ್ತಿದೆ. ಅವನದನ್ನು ಎತ್ತಿಹಿಡಿದು ನೋಡಿ ನೋಡಿ ಆನಂದಿಸುತ್ತಿದ್ದಾನೆ. ಅವನನ್ನು ಕುರಿತು ಪೀಟರ್ ಗಟ್ಟಿಯಾಗಿ ಕೇಳಿದ:

" ಏನದು ಡೇನಿಯಲ್ ? "

" ಚಾಕು ......... ಧಣಿಗಳೇ ! "

" ಚಾಕು ! ಏತಕ್ಕೆ ? ಇಷ್ಟು ......... ಹೊತ್ತಿನಲ್ಲಿ......... ! "

" ಹೌದು ; ಚಾಕು ! "

ಹೀಗೆನ್ನುತ್ತ ಡೇನಿಯಲ್ಲನು ಚಾಕುವನ್ನು ಧಣಿಯತ್ತ ಎತ್ತಿ ಹಿಡಿದನು. 'ಕಳೆದು ಹೋದದ್ದು ಸಿಕ್ಕಿತು' ಎಂಬ ಆನಂದದ ಪ್ರದರ್ಶನ ಸರಳ ಡೇನಿಯಲ್ಲನದು. ಆದರೆ ತನ್ನನ್ನು ಕೊಲೆಮಾಡುವ ಉದ್ದೇಶದಿಂದ ಚಾಕು ವನ್ನು ತನ್ನತ್ತ ತೋರಿಸುತ್ತಿರುವನೆಂದು ತಪ್ಪರ್ಥ ಮಾಡಿಕೊಂಡು ಹೆದರಿದ ಪೀಟರನು—ಸಂಶಯದ ಪೀಟರನು-ಮತ್ತೆ ಹೇಗೆ ತಾನೇ ಅರ್ಥಮಾಡಿ ಕೊಂಡಾನು ? ಕೊನೆಗೆ ಡೇನಿಯಲ್ಲನೇ ತಲೆ ತಗ್ಗಿಸಿ ನಮ್ರತೆಯಿಂದ ಹೇಳಿದ:

" ಈ ಚಾಕು ಕಳೆದು ಹೋಗಿದ್ದಿತು ; ಹುಡಿಕಿಕೊಂಡು ಬಂದೆ ; ಇಲ್ಲಿ ಹುಲ್ಲಿನಮೇಲೆ ಬಿದ್ದಿತ್ತು ! ಅದೃಷ್ಟ ... ಸಿಕ್ಕಿತು ; ನಮಸ್ಕಾರ ! " ಹೀಗೆಂದು ನುಡಿದು ಡೇನಿಯಲ್ಲನು ತನ್ನ ಕೊಠಡಿಯಕಡೆ ಹೊರಟು ಹೋದನು. ಆದರೆ ಅದರಿಂದ ಪೀಟರನಿಗೆ ತೃಪ್ತಿಯಾಯಿತೆ ? ಇಲ್ಲವೇ ಇಲ್ಲ. ಹಾಗೆಲ್ಲ ಸತ್ಯವನ್ನು ನಂಬಿಬಿಡುವುದು ಅವನ ಪದ್ಧತಿಯಲ್ಲ. ಸುಳ್ಳಿಗೆ ಸಮಂಜಸ ವಾದ ಕವಚಗಳನ್ನು ಹೊದಿಸಿ ಅವಕ್ಕೆ ಸಹಸ್ರತೆರನಾದ ಸತ್ಯದ ಸ್ವರೂಪವನ್ನು ಕೊಡಲು ಸಾಧ್ಯವಾದೀತು ಎಂಬುದೀಗ ಅವನ ಸಂದೇಹ. ಅವನು ಯೋಚಿಸಿದ :

" ಡೇನಿಯಲ್ಲನು ನಿಜವಾಗಿಯೂ ಚಾಕುವನ್ನು ಕಳೆದುಕೊಂಡಿರ ಬಹುದೇ ? ಅವನು ಆ ವೇಳೆಯಲ್ಲಿ ಅಲ್ಲಿಗೆ ಬಂದುದು ನಿಜವಾಗಿಯೂ ಆ ಚಾಕುವನ್ನು ಹುಡುಕುವುದಕ್ಕಾಗಿಯೇ ? ಅಥವಾ, ಉದ್ದಿಶ್ಯಪೂರ್ವಕವಾಗಿ ಒಂದು ಕೈಯಲ್ಲಿ ಹಣತೆಯನ್ನು ಮತ್ತೊಂದು ಕೈಯ್ಯಲ್ಲಿ ಹರಿತವಾದ ಚಾಕು ವನ್ನೂ ಹೊತ್ತು ತಂದಿರಬಾರದೇತಕ್ಕೆ ? ತನ್ನನ್ನು ಕೊಲೆಮಾಡಲು ಅವನು ಸಮಯ ಕಾಯುತ್ತಿದ್ದಿರಬಹುದೇ ? ಕಳೆದವಾರ ನಾನವನನ್ನು ಮೂರು

ಸಲ ' ಕತ್ತಿ ' ಎಂದು ಬೈಮದಕ್ಕಾಗಿ ಅವನು ನನ್ನಮೇಲೆ ಕುಪಿತನಾಗಿರ ಬಹುದೇ? ಅವನು ನಿಜವಾಗಿಯೂ ಕಿವುಡನೇ..... ಕುರುಡನೇ? ಕೊಲೆಗಾರ ನಾಗಿರಬಾರದೇ? ಕೊಳ್ಳೆಗಾರರ ನೆರವುಗಾರನಾಗಿರಬಾರದೆ?"

ಪೀಟರನ ಎದೆಯಲ್ಲಿ ಈ ತೆರನಾದ ಆಲೋಚನೆಗಳು ತರಂಗ ತರಂಗ ವಾಗಿ ಎದ್ದೆದ್ದು ಎಡೆಬಿಡದೆ ಅವನನ್ನು ಮುಳುಗಿಸಿಬಿಡುವಂತಿದ್ದುವು. ಆ ರಾತ್ರಿ ಅವನು ಕಣ್ಣಮೇಲೆ ರೆಪ್ಪೆ ಮುಚ್ಚಲಿಲ್ಲ. ಮರುದಿನ ಅರುಣೋದಯ ವಾಯಿತು. ಅಂದು ಭಾನುವಾರ. ವಾಡಿಕೆಯಂತೆ ಪೀಟರನು ಚರ್ಚಿಗೆ ಹೊರಟನು. ಎಂದಿನಂತೆ ಡೇನಿಯಲ್ಲನೂ ಧಣಿಯನ್ನು ಮುಂಬಾಗಿಲಿನವರೆಗೆ ಹಿಂಬಾಲಿಸಿ ' ನಾನೂ ಜೊತೆಯಲ್ಲಿ ಬರಬಹುದೆ? ' ಎಂದು ಧಣಿಯನ್ನು ಕೇಳಿದನು. ಮೊದಲೇ ಹೆದರಿದ ಹುಲ್ಲೆಗೆ ಹುಲಿಯು ಅಡ್ಡಲಾಗಿ ಬಂದರೆ ಹೇಗೋ ಹಾಗಾಯಿತು ಪೀಟರನ ಆಗಿನ ಚಿತ್ತವೃತ್ತಿ! ಹಿಂದಿನ ರಾತ್ರಿಯೆಲ್ಲ ಯೋಚಿಸಿ ಯೋಚಿಸಿ ಯಾವುದೊಂದು ತೆರನಾದ ಇತ್ಯರ್ಥಕ್ಕೂ ಬರಲಾರದೆ ಭಯ ಭ್ರಾಂತಿಗಳಿಂದ ಬಳಲಿ ಬೆಂಡಾಗಿದ್ದ ಪೀಟರನ ಮನಸ್ಸಿಗೆ ಡೇನಿಯಲ್ಲನ ಸಲಹೆಯು ಸರಿಹೊಂದಲಿಲ್ಲ. ಅವನನ್ನು ಕುರಿತು ಪೀಟರನು ಹೇಳಿದ:

"ಬೇಡ; ನೀನು ಇಲ್ಲೇ ಇರು. ನಾನು ಮಾತ್ರ ಹೋಗಿ ಬರುತ್ತೇನೆ. ನಾನು ಹಿಂತಿರುಗಿ ಬಂದನಂತರ ಬೇಕಾದರೆ ನೀನು ಹೋಗಿಬರಬಹುದು. ನನ್ನ ಅಭ್ಯಂತರವೇನೂ ಇಲ್ಲ."

"ಧಣಿಯ ಚಿತ್ತವಿದ್ದಂತೆ" ಎನ್ನುತ್ತ ತಲೆತಗ್ಗಿಸಿ ಡೇನಿಯಲ್ಲನು ಹಿಂದುಳಿದನು.

ಚಾಕು ಕಳೆದುಹೋದುದು, ಮತ್ತೆ ಸಿಕ್ಕಿದ್ದು, ಇವೆರಡನ್ನು ಮಾತ್ರ ಡೇನಿಯಲ್ಲನು ಬಲ್ಲವನಾಗಿದ್ದನು. ಆದರೆ ಅದನ್ನವನು ಹಣತೆಯ ಬೆಳಕಿ ನಲ್ಲಿ ಹುಡುಕಿ ತೆಗೆದು ಕೈಯಲ್ಲಿ ಹಿಡಿದು ಆನಂದಿಸುತ್ತಿದ್ದುದನ್ನು ಕಿಟಕಿಯ ಕಂಡಿಯಿಂದ ಕಂಡ ಪೀಟರನ ಎದೆಯಲ್ಲಿ ಉತ್ಪನ್ನವಾದ ಉಲ್ಕಾಪಾತ ಸಮಾನವಾದ ಸಂಶಯಪರಂಪರೆಯನ್ನೆಲ್ಲ ಅವನೇನು ಬಲ್ಲ ಪಾಪ? ನಿಸ್ಪೃಹ

ನಾದ ಅವನು ಅದೊಂದನ್ನೂ ಗ್ರಹಿಸುವ ಪರಿಸ್ಥಿತಿಯಲ್ಲಿರಲಿಲ್ಲ. ಪೀಟರನ ಚಿತ್ತವೃತ್ತಿಯು ಮಾರ್ಪಟ್ಟು ಅವನು ತನ್ನಲ್ಲಿ ಅತಿಶಯ ಪ್ರಮಾಣದಲ್ಲಿ ಸಂಶಯಗೊಂಡಿರುವನೆಂದು ಅವನಿಗರಿವಾಗಲಿಲ್ಲ. ಸರಳ ಸ್ವಭಾವದವನಾದ ಡೇನಿಯಲ್ಲನಿಗೆ ಧಣಿಯು ಸಂಶಯಪಿಶಾಚಿಯ ಗುಲಾಮನಾಗಿಹೋಗಿರುವ ನೆಂದು ತಿಳಿಯದಿದ್ದುದೂ ಅತ್ಯಂತ ಕ್ಷೇಮಕರವೆಂದೆಣಿಸಿತು ಎನ್ನಲಡ್ಡಿಯಿಲ್ಲ.

ಪ್ರತಿದಿನವೂ ಕತ್ತಲಾಗುವುದಕ್ಕೆ ಮುನ್ನ ಪೀಟರನು ಊಟಮಾಡಿ ಬಿಡುತ್ತಿದ್ದನಷ್ಟೆ. ಅವನಿಗೆ ಬೇರಾವ ಹವ್ಯಾಸಗಳೂ ಇರಲಿಲ್ಲ. ಪುಸ್ತಕ ವಾಚನದಲ್ಲಂತೂ ಅವನಿಗೆ ಅಭಿರುಚಿಯೇ ಇರಲಿಲ್ಲ. ಯೌವನ ದೆಶೆಯಲ್ಲೇ ಅವನು ಅನೇಕ ಪುಸ್ತಕಗಳನ್ನು ಓದಿದ್ದಿರಬಹುದು. ಆದರೆ ಪ್ಯಾರಿಸ್ಸಿಗೆ ಬಂದನಂತರ ಅವನು ವರ್ಷಕ್ಕೊಂದು ಪುಸ್ತಕವನ್ನೂ ಓದಿದವನಲ್ಲ. ಚಿಕ್ಕಂದಿ ನಲ್ಲಿ ಓದಿ ಕಲಿತಿದ್ದರಲ್ಲಿ ನೆನಪಿನಲ್ಲಿ ನಿಂತದ್ದನ್ನು ಮಟ್ಟಿಗೆ ಅವನು ಸಮ ಯೋಚಿತವಾಗಿ ಪ್ರಯೋಗಿಸುತ್ತಿದ್ದನು. ಈಚೆಗೆ ಅವನು ಸಂಪೂರ್ಣವಾಗಿ **ಧನದಾಸ**—ಧನಶೇಖರಣೆ, ಧನಸಂರಕ್ಷಣೆ ಇವೆರಡನ್ನುಳಿದು ಮತ್ತಾವ ವಿಚಾರವೂ ಅವನಿಗೆ ಹಿತವನ್ನುಂಟುಮಾಡುತ್ತಿರಲಿಲ್ಲ; ಅವನ ಹತ್ತಿರ ಸುಳಿಯುತ್ತಲೂ ಇರಲಿಲ್ಲ. ಇಂತಹ ಪೀಟರನಿಗೆ ಸೂರ್ಯಾಸ್ತಮಾನದಿಂದ ಅರುಣೋದಯದವರೆಗಿದ್ದ ಆ ಇರುಳು, ನಟ್ಟಿರುಳು ಕಾರಿರುಳು ಇವು ಅತಿ ಧೀರ್ಘವಾಗಿ ಕಂಡುವು. ತನ್ನ ಮನೆಯ ನೆಲಮಾಳಿಗೆಯಲ್ಲಿ ಧನರಾಶಿಯ ಮುಂದೆ ಕುಳಿತಾಗ ಮಾತ್ರ ಅವನು ಪ್ರಕಾಶಮಾನವಾದ ದೀಪವನ್ನು ಹೊತ್ತಿ ಸಿಡುತ್ತಿದ್ದನು. ತಾನು ಕತ್ತಲೆಯ ಮನೆಯಲ್ಲಿದ್ದರೂ ಅವನಿಗೆ ಅಡ್ಡಿಯಿಲ್ಲ. ಆದರೆ ದೇದೀಪ್ಯಮಾನವಾದ ಬೆಳಕಿನ ಪ್ರಕಾಶದಲ್ಲಿ ತನ್ನ ಆ ದಿವ್ಯ ಧನರಾಶಿ ಯನ್ನು ಆಡಿಗಡಿಗೆ ನೋಡಬೇಕೆಂಬುದು ಅವನ ಪ್ರಬಲವಾದ ಹಾರೈಕೆ.

ಈ ರೀತಿ ಪುಸ್ತಕವನ್ನು ಓದಲು ಅವನ ಮನಸ್ಸು ಒಡಂಬಡದು. ಸ್ನೇಹ ಪರನಲ್ಲದುದರಿಂದ ಅವನ ಬಳಿ ಯಾರೂ ಸುಳಿಯರು. ಉದ್ಯೋಗನೇ ? ವಾಣಿಜ್ಯವೇ ? ವ್ಯವಹಾರವೇ ? ವ್ಯಾಯಾಮವೇ ? ಏನೊಂದೂ ಇಲ್ಲ. ದೇಶದಲ್ಲಿ ವಿದ್ಯಾಭಿವೃದ್ಧಿಗೆ ಅವನು ನೆರವಾಗಿ ನಿಲ್ಲಲಿಲ್ಲ; ವೈದ್ಯವೃತ್ತಿಯ

ಬೆಳವಣಿಗೆಗೆ ಸಹಾಯಕನಾಗಲು ಇಚ್ಛಿಸಲಿಲ್ಲ; ಸ್ವತಂತ್ರ ಮೇಲ್ವಿಚಾರಣೆ ಯಲ್ಲಿ ಯಾವುದೊಂದು ಸಂಸ್ಥೆಯನ್ನೂ ಸ್ಥಾಪಿಸಲಿಲ್ಲ; ಸುಸೂತ್ರವಾಗಿ ನಡೆಯುತ್ತಿದ್ದ ಯಾವ ಸಂಸ್ಥೆಗೂ ಸದಸ್ಯನಾಗಬಯಸಲಿಲ್ಲ; ಕೈಗಾರಿಕೆಗಳನ್ನು ಸ್ಥಾಪಿಸಿ ನಡೆಸುವ ಕೆಲಸಕ್ಕೆ ಕೈಹಾಕಲಿಲ್ಲ. ನೆರೆಹೊರೆಯವರಲ್ಲಿ ಎಷ್ಟೋ ಅಷ್ಟೇ ಎನ್ನುವಂತಿದ್ದ. ನೊಂದು ಬೆಂದವರ ಸಂಕಟ ನಿವಾರಣೆಗಾಗಿ ಅವನು ಕಂಕಣ ಕಟ್ಟಿಕೊಳ್ಳಲಿಲ್ಲ. ಹೋಗಲಿ; ಮೆಚ್ಚುಗೆ, ಮಡದಿ, ಮಮತೆಗೆ ಅರ್ಹರಾದವರು, ಯಾರಾದರೂ ಇದ್ದರಲ್ಲವೆ? ಒಟ್ಟಿನಲ್ಲಿ ಅವನು ಒಬ್ಬೊಂಟಿಗ; ಅವನಿಗೆ ಹೊತ್ತು ಹೋಗದು.

ಪರಿಮಳವಿಲ್ಲದ ಪುಷ್ಪದಂತೆ, ಮಾಧುರ್ಯವಿಲ್ಲದ ಕೀರ್ತನೆಯಂತೆ, ಹಾಲುಕರೆಯದ ಹಸುವಿನಂತೆ, ಸದ್ಗುಣವಿಲ್ಲದ ಸುಂದರಸ್ವರೂಪಿಣಿಯಾದ ಸತಿಯಳಂತೆ, ಗಾಂಭೀರ್ಯವಿಲ್ಲದ ವಿದ್ಯೆಯಂತೆ, ಆಪತ್ತಿಗೊದಗದ ಸ್ನೇಹಿತ ನಂತೆ, ಬರಗಾಲದಲ್ಲಿ ಬಚ್ಚಿಟ್ಟ ಭಂಗಾರದಂತೆ, ಸಭಿಕರೆಲ್ಲರೂ ಹೊರಟು ಹೋದಮೇಲೆ ಸಭೆಯಲ್ಲುಳಿದ ಸಭಾಪತಿಯಂತೆ, ಸೈನಿಕರಿಲ್ಲದ ಸೇನಾ ನಾಯಕನಂತೆ, ಧ್ವಜಪಟವು ಕಿತ್ತುಹೋಗಿ ಬಿರುಗಾಳಿಯಲ್ಲಿ ಕಡಲನಡುವೆ ಬಂಡೆಗೆ ತಗುಲಿ ತತ್ತಳಿಸುವ ಹಿರಿಯ ಹಡಗಿನಂತೆ, ಬೇರು ಸತ್ತುಹೋದ ವಿಶಾಲ ವೃಕ್ಷದಂತೆ ಪೀಟರನ ಅಪಾರ ಧನರಾಶಿಯು ಅವನ ಬಂಗಲೆಯ ನೆಲ ಮಾಳಿಗೆಯಲ್ಲಿ ಉಪಯೋಗವಿಲ್ಲದೆ ಕೊಳೆಯುತ್ತಿತ್ತು. ಕ್ರಮಕ್ರಮವಾಗಿ ತನ್ನಲ್ಲಿ ಸಂಶಯಪಿಶಾಚಿಯನ್ನು ಬೆಳಸುತ್ತ ಬಂದ—ತನ್ನ ಎದೆಯ ಒಲುಮೆ ಯನ್ನು ತೊಡೆದುಹಾಕಿ ಶಾಂತತೆಯನ್ನು ಭಂಗಪಡಿಸುತ್ತಿದ್ದ ಅವನ ಆ ಧನ ಮೊತ್ತದಲ್ಲಿ ಅವನು ತನ್ನ ಪ್ರೀತಿಯನ್ನೆಲ್ಲ ಕೇಂದ್ರೀಕರಿಸಿದ್ದನು. ಆದುದರಿಂದ ಅವನಿಗದರಮೇಲೆ ಆ ಅತುಳವಾದ ಮಮತೆ. ಉಳಿದೆಲ್ಲವರಮೇಲೆ ಅವನಿಗೆ ಅಸಡ್ಡೆ, ಅಸಹ್ಯ.

ಇಂತಹ ಪೀಟರನ ಮನೆಯಲ್ಲಿ ಕೋಲಾಹಲವೆಲ್ಲಿಂದ ಬರಬೇಕು? ಇಷ್ಟೊಂದು ಧನರಾಶಿಯ ಒಡೆಯನಾದ ಅವನಿಗೆ—ಅದನ್ನು ಬಳಸಿ ಪ್ರಯೋಜನ ಹೊಂದಬಯಸದ ಅವನಿಗೆ—ಅದು ಸಮಾಜದ—ದೇಶದ

ಪ್ರಗತಿಗೆ ಪ್ರಬಲತರವಾದ ಸಾಧನಸಾಮಗ್ರಿ ಎಂದರಿತುಕೊಳ್ಳಲು ಇಚ್ಛಿಸದ ಅವನಿಗೆ ಬಾಳಲ್ಲಿ ಸುಖವು ಕ್ರಮಕ್ರಮವಾಗಿ ನಶಿಸುತ್ತ ದುಃಖವು ಹೆಚ್ಚುತ್ತ ಬಂದಿತು: ವಿಹಾರಕ್ಕಿಂತಲೂ ವಿರಸವೇ ಅಧಿಕರಿಸಿತು; ಬಾಹ್ಯಪ್ರಪಂಚದಲ್ಲಿ ಬೇಸರವು ಬಲಗೊಂಡಿತು. ಅವನ ವೀರಮುಷ್ಟಿಯು ವಿವಿಧವಾದ ವೈಪರೀತ್ಯಗಳಿಗೆ ಕಾರಣವಾಯಿತು. ವಯೋವೃದ್ಧನಾದ ಅವನ ಬಾಳು ವ್ಯಗ್ರವೂ, ವ್ಯತಿರಿಕ್ತವೂ, ವ್ಯಧಿಕರಣವೂ ಆಗುತ್ತ ಬಂದಿತು. ಸದ್ರೀತಿಯಲ್ಲಿ ವ್ಯಯವಾಗದವರೆಗೆ ತನ್ನ ಧನವು ವ್ಯರ್ಥವೆಂದೂ ಅವ್ಯವಸ್ಥಿತವಾದುದೆಂದೂ ಅವನು ಅರಿತಕೊಳ್ಳದೆ ಹೋದನು.

ಒಂದೊಂದು ದಿನ ರಾತ್ರಿವೇಳೆಯಲ್ಲಂತೂ ಪೀಟರಸಿಗೆ ತಾಳಲಾರದ ಬೇಸರ. ಮಾಡುವುದಕ್ಕೆ ಕೆಲಸವಿಲ್ಲ; ಮಾತನಾಡುವುದಕ್ಕೆ ಜನರಿಲ್ಲ. ಅವನೇನನ್ನು ತಾನೇ ಮಾಡಿಯಾನು? ಬಂಗಲೆಯಲ್ಲಿದ್ದ ನೆಲಮಾಳಿಗೆ ಸುಭದ್ರವಾದುದು. ಬಂಗಲೆಯನ್ನು ಕಟ್ಟಿಸಿದ (ಪೀಟರನಿಗೆ ಹಿಂದಿನ) ಒಡೆಯನು ದೊಡ್ಡ ಕುಟುಂಬಿ. ಅವನು ಆ ನೆಲಮಾಳಿಗೆಯಲ್ಲಿ ಒಂದೆರಡು ವರ್ಷಗಳಿಗಾಗುವಷ್ಟು ದವಸಧಾನ್ಯಗಳನ್ನು ತುಂಬಿಕೊಳ್ಳುತ್ತಿದ್ದನು. ಈಗದು ಪೀಟರಸ ಭಾಗ್ಯವನ್ನು ಬಚ್ಚಿಡಲು ಸುರಕ್ಷಿತವಾದ ಸ್ಥಾನವಾಯಿತು. ಅವನ ಧನರಾಶಿಯೆಲ್ಲ ಆ ನೆಲಮಾಳಿಗೆಯಲ್ಲಿ ಇದ್ದಿತು. ಅವನು ಮಲಗುತ್ತಿದ್ದುದು ಆ ನೆಲಮಾಳಿಗೆಯ ಮೇಲಿದ್ದ ಕೊಠಡಿಯಲ್ಲಿ. ರಾತ್ರಿ ತನಗೆ ತೀರ ಬೇಸರವಾದಾಗ ಪೀಟರನು ಆ ನೆಲಮಾಳಿಗೆಯಲ್ಲಿ ಹೋಗಿ ಕುಳಿತುಬಿಡುತ್ತಿದ್ದನು. ಅಲ್ಲಿ ಅವನು ಹೊತ್ತಿಸಿ ಇಡುತ್ತಿದ್ದ ದೊಡ್ಡ ದೀಪದ ಪ್ರಕಾಶವು ನೆಲಮಾಳಿಗೆಯನ್ನು ದಾಟಿ ಹೊರಗೆ ಬರುತ್ತಿರಲಿಲ್ಲ. ದೀಪದ ಬೆಳಕಿನಲ್ಲಿ ಕುಳಿತು ನಲವತ್ತು ವರ್ಷಗಳಿಂದ ತಾನು ನಾನಾ ವಿಧಾನಗಳಿಂದ ಕೂಡಿಸಿ ಇಟ್ಟಿದ್ದ ಹೊನ್ನಿನ ನಾಣ್ಯಗಳನ್ನೆಲ್ಲ ಪೀಟರನು ರಾಶಿಯಾಗಿ ಸುರಿದು ಎಣಿಸೆಣಿಸಿ ಚೀಲಗಳಿಗೆ ತುಂಬುತ್ತಿದ್ದನು. ಇದರಿಂದ ಅವನಿಗಾಗುತ್ತಿದ್ದ ಆನಂದವು ಅನಿರ್ವಚನೀಯವಾದುದು. ಅವನ ನೊಂದ ಮನಸ್ಸಿಗೆ ತೃಪ್ತಿ ಇದರಿಂದಲೇ; ಅವನ ಎದೆ ಸಂತಸದಿಂದುಬ್ಬಿ ಬಿರಿವಂತಾಗುವುದು ಇದರಿಂದಲೇ; ಅವನ ಮನಸ್ಸಿಗೆ ಶಾಂತಿ—ದೇಹಕ್ಕೆ ವಿಶ್ರಾಂತಿ ಎಲ್ಲ ಇದರಿಂದಲೇ!

ಮನಸ್ಸಾಕ್ಷಿಯು ಅವನನ್ನೊಂದು ದಿನವಾದರೂ ಎಚ್ಚರಿಸಿ ಬಾಧಿಸಿ ದಂತೆ ಕಾಣಿಸಲಿಲ್ಲ. ಸಮಾಜಹಿತವನ್ನು ಕುರಿತು ವಿಚಾರಿಸುವಷ್ಟು ಸಹನೆ ಅವನಿಗಿರಲಿಲ್ಲ..... ಧನಾಭಾವದಿಂದ, ಧನವನ್ನು ಬಂಧಿಸಿ ಇಡುವುದರಿಂದ ದೇಶದಲ್ಲುಂಟಾಗುವ ಕ್ಷೋಭೆಯನ್ನು ಕುರಿತು ಪರಿಹಾರಕ್ರಮಕ್ಕೆ ಕೈ ಹಾಕುವ ಶ್ರಮವನ್ನೂ ಅವನು ವಹಿಸಲಿಲ್ಲ. ಅವನಾಯಿತು ಅವನ ಧನ ವಾಯಿತು; ಅದು ನೆಲಮಾಳಿಗೆಯಲ್ಲಿ; ಅವನು ಅದರ ಮೇಲಿದ್ದ ಕೊಠಡಿ ಯಲ್ಲಿ. ಹೀಗಾಗಿ ಅವನು ಹಣವನ್ನು ಮುದ್ರಿಸಿ ಮುದ್ರಿಸಿ ರಾಶಿರಾಶಿಯಾಗಿ ಮೂಲೆಗೊತ್ತರಿಸುವ ಒಂದು ಯಂತ್ರದಂತಾದನು. ಸಾಮ್ಯವು ಸಲ್ಪ ಸರಿ ಯಿಲ್ಲವೆಂದೆನ್ನಿಸಬಹುದು. ಆದರೂ ಆಯಾವೇಳೆಗೆ ತಿಂದು, ತೇಗಿ ತಿರು ಗಾಡುತ್ತ ಗುಟರುಹಾಕುವ ಗೂಳಿಗೂ ಅವನಿಗೂ ಒಮ್ಮೊಮ್ಮೆ ಯಾವ ವ್ಯತ್ಯಾ ಸವೂ ಇರಲಿಲ್ಲ ಏನೆಂದರೆ ಅದು ಪಶುವರ್ಗಕ್ಕೆ ಸೇರಿದುದು; ಇವನಾ ದರೋ ಮಾನವ ವರ್ಗಕ್ಕೆ ಸೇರಿದವನು.

ಒಮ್ಮೆ ಪ್ಯಾರಿಸ್ ನಗರದಲ್ಲಿ ಒಬ್ಬ ಬಡ ಹೆಂಗಸು ಹೊಟ್ಟೆ ಹೊರೆದು ಕೊಳ್ಳಲು ಪರದಾಡಿ ಪ್ರಯೋಜನವಾಗದೆ ಹೊದ್ದುಕೊಳ್ಳಲು ಬಟ್ಟೆಗೆ ಗತಿ ಯಿಲ್ಲದೆ, ನಿಲ್ಲುವ ನೆರಳಿಗೆ ಬಾಡಿಗೆ ಕೊಡಲು ಚೈತನ್ಯವಿಲ್ಲದೆ, ನಿರ್ಗತಿಕಳಾಗಿ ದುಃಖದಲ್ಲಿ ಮುಳುಗಿ ಕೊನೆಗೆ ತನ್ನ ಮೂವರು ಎಳೆ ಮಕ್ಕಳನ್ನು ಮಡುವಿನಲ್ಲೆಸೆದು ತಾನೂ ಅದೇ ಮಡುವಿನಲ್ಲಿ ಧುಮುಕಿ ಪ್ರಾಣವನ್ನು ತೊರೆದಳು. ಮುಂದಿನ ಭಾನುವಾರ ಚರ್ಚಿನಲ್ಲೊಂದು ಪ್ರಸಂಗ ನಡೆಯಿತು. ಆ ಸಂತಾಪಕರ ವಿಚಾರವನ್ನು ಕುರಿತು ಪಾದ್ರಿಯು ಹೇಳಿದನು:

" ಈ ನಾಗರಿಕ ನಗರದಲ್ಲಿಯೂ ಶ್ರೀಮಂತರಿದ್ದಾರೆ. ರಾಶಿರಾಶಿಯಾಗಿ ಹೊನ್ನು ಕೂಡಿಸಿ ಇಟ್ಟಿದ್ದಾರೆ. ಮೂಸಿನೋಡುವವರು ಗತಿಯಿಲ್ಲದೆ ನೆಲ ಮಾಳಿಗೆಗಳಲ್ಲಿ ಧನವು ಕೊಳೆಯುತ್ತಿದೆ. ಇದೇ ಸಮಯದಲ್ಲಿ ದೇಶದಲ್ಲಿ ಭೀಕರ ಬಡತನವು ನಾನಾತೆರನಾದ ಕರಾಳರೂಪವನ್ನು ತಾಳಿ ಸಮಾಜವನ್ನು ದಹಿಸಿಬಿಡುವಂತೆ ಕೆಂಡದ ಕಿಡಿಗಳನ್ನು ಕಾರುತ್ತ ದುರುಗುಟ್ಟಿಕೊಂಡು ನೋಡುತ್ತಿದೆ. ದೀನದಲಿತರ ತಡೆಯಿಲ್ಲದ ಅನಂತಯಾತನೆಗಳು ' ನೀವು

ಪಾಪಿಗಳು; ಅಷ್ಟೊಂದು ಧನಕ್ಕೆ ಒಡೆಯರಾಗಿದ್ದೂ ಸಂತಪ್ತಮಾನವರ ಸಂಕಟವನ್ನು ಪರಿಹರಿಸಿ ನಾಡ ನೆಮ್ಮದಿಗೆ ನೆರವಾಗಿ ನೊಂದ ನರವೃಂದವನ್ನು ಜೀವಸಹಿತ ಉಳಿಸುವುದಕ್ಕಾಗಿ ನಿಮ್ಮ ಕಿರುಬೆರಳನ್ನೂ ನೀವು ಮಿಡಿಸಲಾರಿರಾ?' ಎಂದು ಸಿರಿವಂತರ ವಜ್ರಹೃದಯವನ್ನು ಹಿಳಿ ಹೇಳಲಾರವೇ? ಬಡ ಒಡನಾಡಿಗಳನ್ನು ಎಡೆಬಿಡದೆ ಕಾಪಾಡಬೇಕೆಂದೇ ಸ್ಥಾಪಿತವಾದ ಧರ್ಮಸಂಸ್ಥೆಗಳಿಗೆ ಶ್ರೀಮಂತರಾದವರು ಉದಾರ ಧನಸಹಾಯವನ್ನು ಅಡಿಗಡಿಗೆ ನೀಡಬೇಡವೇ? ಶ್ರೀಮಂತ! ಅವನು ದೇಶಭಕ್ತನಾಗಿರಬೇಡವೆ? ಅವನು ದೈವಭಕ್ತನಾಗಿರಬೇಕಲ್ಲವೆ? ಸಮಾಜದ ಆಧಾರಸ್ತಂಭವಾಗಿರಬೇಕಲ್ಲವೆ? ಭಾಗ್ಯವಂತನ ಕರ್ತವ್ಯವು ಭಾಗ್ಯವನ್ನು ಮುಚ್ಚಿಡುವುದರಲ್ಲಿ ಕೊನೆಗೊಂಡೀತೇ? ಮುಚ್ಚಿಟ್ಟ ಭಾಗ್ಯ......... ಅದು ತಾಯ ಉದರದಲ್ಲಿ ಸತ್ತುಹೋದ ಶಿಶುವಿನಂತೆ! ಅದೇನು ಅರಚಬಲ್ಲುದೇ--ಆಟವಾಡಬಲ್ಲುದೇ? ದೇಶದಲ್ಲಿ ಗುಪ್ತನಿಧಿ ಹೆಚ್ಚಿದಂತೆಲ್ಲ ಗುಪ್ತಚಿಂತೆ ಹೆಚ್ಚೀತು. ಅದರಿಂದ ಘೋರ ಆತ್ಮಹತ್ಯೆಗಳಿಗೆ ದಾರಿ ಮಾಡಿಕೊಟ್ಟಂತಾಗುತ್ತದಲ್ಲವೆ? —ಹಣವನ್ನು ಬಚ್ಚಿಡುವವರು ನರಹತ್ಯೆಮಾಡಿದ ಪಾಪಕ್ಕೆ ಒಳಗಾಗುತ್ತಾರೆ. ಉಳ್ಳವರು ಉದಾರಭಾವದಿಂದ ದೇಶೋದ್ಧಾರ ಕಾರ್ಯಕ್ಕೆ ನೆರವಾಗದಿರುವುದೇ ಈ ಮಹಾಪಾತಕಕ್ಕೆ ಪ್ರಧಾನ ಕಾರಣವಾದೀತು. ಅಪಾರ ಶ್ರೀಮಂತರು ತಮ್ಮ ಅನುಭವಕ್ಕೆ ಸಾಕಾಗುವಷ್ಟು ಹಣವನ್ನು ಬಳಗಿಸಿಕೊಳ್ಳಲಿ—ಬೇಡವೆಂದವರಾರು? ಆದರೆ ಅದಕ್ಕೂ ಹೆಚ್ಚಿನ ಧನಕ್ಕೆ ಅವರು ರಕ್ಷಕರಂತೆ ಮಾತ್ರ ಇರಬೇಕು. ತಮ್ಮ ಆ ಹೆಚ್ಚುವರಿ ಧನದ ಅಧಿಕಾಂಶವನ್ನು ನೊಂದು ನರಳುವ ನರಶ್ರೇಣಿಯ ಉದ್ಧರಣಕಾರ್ಯಕ್ಕೆ ನಿವೇದನ ಮಾಡಬೇಕು. ಹಾಗಲ್ಲದೆ ಧನವಂತರಲ್ಲನೇಕರು ಧನದಾಸರಾಗುವುದಾದರೆ, ಕೃಪಣರು, ಕಲ್ಲೆದೆಯವರಾಗಿ ಕೈಕಟ್ಟಿ ಕುಳಿತುಕೊಳ್ಳುವುದಾದರೆ, ದೇಶದಲ್ಲಿ ಕಷ್ಟ ಪರಂಪರೆಗಳು ಅಧಿಕರಿಸುವುವು; ಕೊಲೆ ಕಳವುಗಳು ಹೆಚ್ಚುವುವು; ಆತ್ಮಹತ್ಯೆಗಳು ಅಸಂಖ್ಯಾತವಾಗುವುವು; ನಾಗರಿಕತೆಯ ಕಟ್ಟುಗಳು ಸಡಿಲವಾಗಿ ನೆಮ್ಮದಿಯು ನಾಶವಾದೀತು. ಏನೇ ಆಗಲಿ, ಧನವಂತರು ಧನದಾಸರಾಗಬಾರದು. ಬದಲಾಗಿ ದೈವವು ಅವರಿಗೆ ಕರುಣಿಸಿದ ದಯೆಯನ್ನು

ಕೊಂಡಾಡಿ ಅವರು ದೈವಜ್ಞರಾಗಬೇಕು. ದೀನದಲಿತರ ಉದ್ಧರಣಕ್ಕಾಗಿ ಟೊಂಕ ಕಟ್ಟಿ ಕಿಂಕರರಾಗಿ ನಿಲ್ಲಬೇಕು. ಒಡನಾಡಿ ದೀನಮಾನವರ ಮೇಲ್ಮೆಗಾಗಿ ದೇವರ ಅಂಕಿತದಲ್ಲಿ, ದಯಾದ್ರ್ಯೈನ್ಯತೆಗಳ ಅಂಕಿತದಲ್ಲಿ, ಸೇವಾತತ್ಪರರಾಗಿ ನಡುಕಟ್ಟಿ ನಿಂತು ಒಡೆಯನು ಮೆಚ್ಚುವ ತೆರನೆ ನಡೆದುಕೊಳ್ಳಬೇಕು. ಆಗಲೇ ಸ್ವರ್ಗಸಮಾನವಾದ ಸುಖಶಾಂತಿಗಳ ಸಾಮ್ರಾಜ್ಯವು ಪೃಥ್ವಿಯಲ್ಲಿ ಸ್ಥಾಪನೆಗೊಂಡೀತು. ಹಣದ ಅಭಾವದಿಂದ, ಧನಿಕರ ಅನಾದರಣೆಯಿಂದ, ಮೊನ್ನೆತಾನೇ ಮೂರು ಮಕ್ಕಳೊಂದಿಗೆ ಮಡುವಿನಲ್ಲಿ ಧುಮುಕಿ ಉಸಿರನ್ನಿತೊರೆದ ಕ್ರೈಸ್ತನಾರೀಮಣಿಗೆ, ಕ್ರೈಸ್ತರಿಂದ ತುಂಬಿದ ಪ್ಯಾರಿಸ್ ನಗರದಲ್ಲಿ ಕ್ರೈಸ್ತಸಹೋದರ ಸಹೋದರಿಯರೇ ಇಲ್ಲದಂತಾಯಿತೇ ? ಆ ಬಡಹೆಂಗಸಿನ ದುರಂತ ದೃಷ್ಟಾಂತವು ಧನಿಕವೃಂದಕ್ಕೆ ಎಚ್ಚರಿಕೆಯನ್ನು ನೀಡಲಾರದೇ ? ಪ್ರತಿಯೊಬ್ಬ ಧನಿಕನೂ ದೇವರ ಸಾನ್ನಿಧ್ಯದಲ್ಲಿ ನಿಂತು ತನಗೆ ದಯಾಮಯನಾದ ದೇವೇಶನು ಕರುಣಿಸಿದ ನಿಧಿಯನ್ನು ತಾನು ವಿನಿಯೋಗಿಸಿದ ವಿಧಾನವನ್ನು ಕುರಿತು ವರದಿಯನ್ನು ಒಪ್ಪಿಸಲೇ ಬೇಕಲ್ಲವೆ? ಆಗ ಕರ್ತವ್ಯ ಬಾಹಿರರಾದ, ಕಠಿಣಮನೋಭಾವದ ಕೃಪಣರಿಗೆ ಕಠಿಣ ಶಿಕ್ಷೆಯನ್ನು ವಿಧಾತನು ವಿಧಿಸದೆ ಬಿಟ್ಟಾನೇ ? "

ಪಾದ್ರಿಯ ಸ್ಫೂರ್ತಿಯುತ ಪ್ರಸಂಗವನ್ನು ಕೇಳಿ ಅನೇಕರು ತಲೆದೂಗಿದರು ; ಕೆಲ ಶ್ರೀಮಂತರು ತಲೆತಗ್ಗಿಸಿದರು. ಸಭಿಕರಲ್ಲಿ ಕೆಲವರ ದೃಷ್ಟಿ ಪೀಟರನತ್ತ ತಿರುಗಿದ್ದಿತು. ಅದನ್ನು ಕಂಡ ಅವನ ಮೈ ಬೆವರಿತು. ತನ್ನನ್ನು ಹಂಗಿಸಬೇಕೆಂದೇ ಪಾದ್ರಿಯು ಈ ಉದ್ದೇಶದ ಪ್ರಸಂಗವನ್ನು ಮಾಡಿರಬೇಕು ; ನೆರೆದವರ ದೃಷ್ಟಿಯನ್ನು ತನ್ನತ್ತ ಸೆಳೆದಿರಬೇಕು ; ಎಂದು ಮುಂತಾಗೆಲ್ಲ ಪೀಟರನಿಗೆ ತೋರಿತು. ತಾನು ಇನ್ನುಮೇಲೆ ಆ ಚರ್ಚಿಗೆ ಹೋಗುವುದನ್ನೇ ನಿಲ್ಲಿಸಿಬಿಡುವುದೊಳ್ಳೆಯದೆಂದು ಅವನು ಅಂದುಕೊಂಡನು. ಅದರ ನಂತರ ಅವನು ಎರಡುವಾರ ಆ ಚರ್ಚಿನ ಕಡೆ ತಲೆ ಇಡಲೇ ಇಲ್ಲ. ಅದಕ್ಕೆ ಕಾರಣವಿಲ್ಲದೆ ಇರಲಿಲ್ಲ. ಬಡ ಹೆಂಗಸು ಮಕ್ಕಳೊಂದಿಗೆ ಮಡುವಿನಲ್ಲಿ ಮುಳುಗಿ ಮಡಿದ ಬಳಿಕ ನೊಂದ ಇತರ ಕುಟುಂಬಗಳ ಸಂಕಟನಿವಾರಣೆಗಾಗಿ ಪಾದ್ರಿಯು ನಿಧಿಯನ್ನು ಶೇಖರಿಸತೊಡಗಿದನು. ತನಗೆ ನೆರವಾದ

ಹತ್ತಾರು ಜನರಿಂದ ಒತ್ತಾಯಪಡಿಸಿ ಬಹಿರಂಗವಾಗಿ ತನ್ನಿಂದ ನೂರಿನ್ನೂರು ಹೊನ್ನುಗಳನ್ನು ಸುಲಿಗೆಮಾಡಿಬಿಡುವುದಕ್ಕೆ ಪಾದ್ರಿಯು ಕಂಕಣತೊಟ್ಟಿರುವುದಾಗಿ ಪೀಟರನಿಗೆ ವದಂತಿಯು ಮುಟ್ಟಿದ್ದಿತು. ಅದಕ್ಕಾಗಿ ಅವನು ತೀವ್ರವಾಗಿ ಕಾತುರಗೊಂಡಿದ್ದನು. ಕೊನೆಗೂ ಬೇಡ ಬೇಡವೆಂದು ಬೇಡಿಕೊಂಡರೂ ಬಿಡದೆ ಪಾದ್ರಿಯು ನೆರಮನೆ ಸ್ಯಾಮ್‌ಸನ್ನನ ಎದುರಿಗೆ ವಾದಿಸಿ ತನ್ನಿಂದ ನೂರು ಹೊನ್ನುಗಳನ್ನು ಕಕ್ಕಿಸಿದ್ದನು ; ಪಾದ್ರಿಯೇ ಗೆದ್ದಿದ್ದನು. ತನಗಾದ ಈ ಬಗೆಯ ಸೋಲನ್ನು ಮರೆಯಲು ಪೀಟರನಿಗೆ ಸಾಧ್ಯವಾಗಲೇ ಇಲ್ಲ. ಅವನ ಆ ಇಡೀ ಜೀವಮಾನದಲ್ಲಿ ಆ ರೀತಿ ನೂರು ಹೊನ್ನುಗಳನ್ನು ಅವನು ಕೊಟ್ಟುಬಿಡಬೇಕಾಗಿ ಬಂದುದು ಅದೇ ಮೊದಲುಸಲವೆನ್ನಬಹುದು. ಧರ್ಮಕಾರ್ಯಕ್ಕೆ ದಾನಮಾಡಿ ಇವನಂತೆ ದುಃಖಿಸಿದವರು ತೀರ ವಿರಳವೆನ್ನಬಹುದು.

ಒಟ್ಟಿನಲ್ಲಿ ಪುಣ್ಯಪಾಪಗಳ ಅರಿವೇ ಅಳಿಸಿಹೋದಮೇಲೆ ಮಾನವನು ಕೇವಲ ಪಶುಸಮಾನನಾಗುತ್ತಾನೆ. ಪೀಟರನಂತಹ ಉದ್ದಂಡ ಶ್ರೀಮಂತನು ಆಗೊಮ್ಮೆ ಈಗೊಮ್ಮೆ ಯೋಚಿಸಿ ನೋಡಬಹುದಾಗಿದ್ದಿತು :

“ ನಾನು ಯಾರಿಗಾಗಿ ಸಂಪಾದಿಸುವುದು ? ಏತಕ್ಕಾಗಿ ಸಂಪಾದಿಸುವುದು ? ನನ್ನನಂತರ ನನ್ನ ಅಪಾರ ಧನವು ಯಾರಿಗೆ ಸೇರಬೇಕು ? ಉಸಿರು ಇರುವಾಗಲೇ ಸಮಾಜೋಪಕಾರಿಯಾದ ಹತ್ತಾರು ಉತ್ತಮ ಸಂಸ್ಥೆಗಳಿಗೆ ಉದಾರ ರೀತಿಯ ನೆರವನ್ನು ನೀಡಿ ಆತ್ಮೋದ್ಧಾರದ ದಾರಿಯನ್ನು ಹುಡುಕಬಾರದೇತಕ್ಕೆ ? ”

ಎಂದೆಲ್ಲ; ಆದರೆ ಅದೆಲ್ಲ–ಆಗದ ಮಾತು. ಈ ಯೋಚನೆಗಳು ಅವನಿಗೆ ಹೊಳೆಯುವುದು ಅತ್ಯಂತ ನಿಧಾನ ; ಅಕಸ್ಮಾತ್ ಹೊಳೆದರಂತೂ ಮಿಂಚಿನಂತೆ ಮಾಯ ! ಆದುದರಿಂದಲೇ ಅವನು ಭಾನುವಾರದಂದು ಚರ್ಚಿಗೆ ಹೋದಾಗ ಅವನ ಶರೀರವು ಮಾತ್ರ ಅಲ್ಲಿರುತಿತ್ತು. ಆದರೆ ಅವನ ಮನಸ್ಸು ಎಲ್ಲೆಲ್ಲೋ ಚಲಿಸಿ, ಯಾವುಯಾವುದರಲ್ಲೋ ಮಗ್ನವಾಗಿ ಹೋಗುತಿತ್ತು. ಅವನ ಹವ್ಯಾಸಗಳು ಹಲವಾರು. ಅವೊಂದೊಂದೂ ಅವನ ಧನರಾಶಿಗೆ ಬಚ್ಚ
ಚ

ಲಾರದ, ಹರಿಯಲಾರದ, ಕಕುಲಾತಿಯ, ಕಗ್ಗಂಟನ್ನು ಕಟ್ಟಿ ಸ್ಥಾನಬಂಧನ ಮಾಡುವುದರಲ್ಲಿ ನಿರತವಾಗಿದ್ದುವು. ಚರ್ಚಿನಲ್ಲಿ ಪಾದ್ರಿಯು ಸುವಾರ್ತೆಯನ್ನು ಪಠಿಸುತ್ತಿದ್ದಾಗ ಪೀಟರನಿಗಾವ ತೆರನಾದ ಪಾರವಶ್ಯತೆಯೂ ಉಂಟಾಗುತ್ತಿರಲಿಲ್ಲ. ಬದಲಾಗಿ ಅವನ ಮನಸ್ಸು ಅನೇಕಸಲ ಓಡೋಡಿ ಹೋಗಿ ನೆಲನಾಳಿಗೆಯಲ್ಲಿ ದೂರಿಕೊಳ್ಳುತಿತ್ತು ; ಹಗಲನ್ನು ರಾತ್ರಿಯಾಗಿಸುತ್ತಿತ್ತು ; ದೊಡ್ಡದಾದ ದೀಪವನ್ನು ಹೊತ್ತಿಸಿಡುತ್ತಿತ್ತು ; ಧನವನ್ನೆಲ್ಲ ನೆಲದ ಮೇಲೆ ಸುರಿಯುತ್ತಿತ್ತು ; ರಾಶಿಯಿಂದ ಹೊನ್ನಿನ ನಾಣ್ಯಗಳನ್ನು ಎಣಿಸೆಣಿಸಿ ಚೀಲಗಳಿಗೆ ತುಂಬುತಿತ್ತು : ಅವುಗಳ ಬಾಯಿಕಟ್ಟಿ ಮುದ್ರೆಯೊತ್ತುತ್ತಿತ್ತು ; ಮಮತೆಯಿಂದ ಅವುಗಳಿಗೆ ಮುತ್ತಿಡುತ್ತಿತ್ತು ; ಒಂದೊಂದು ಚೀಲವನ್ನೂ ಒಪ್ಪವಾಗಿ ಎತ್ತಿಡುತ್ತಿತ್ತು; ಹಿಂದಿನ ವಾರಕ್ಕಿಂತ ಈವಾರ ಹೊನ್ನು ಹೆಚ್ಚಾದುದೆಷ್ಟು ಎಂದು ಲೆಕ್ಕಹಾಕುತ್ತಿತ್ತು : ಆ ಧನರಾಶಿಯು ಇನ್ನೂ ಇತೋಪ್ಯತಿಶಯವಾಗಿ ಹೆಚ್ಚಲು ಆಚರಿಸಿಬೇಕಾದ ಗುಪ್ತ ನೀತಿ ನಿಯಮಗಳನ್ನು ಸೂಚಿಸುತ್ತಿತ್ತು ; ಅವನ ಅಸಾಧಾರಣ ಕಾರ್ಯಕ್ರಮಗಳಿಗೆ ಸಕಾಲವಲ್ಲಿ ಸುಂದರ ಸ್ವರೂಪವನ್ನು ಕೊಟ್ಟು ಸಂತಸದಿಂದ ನಲಿಯುತ್ತಿತ್ತು !

ಚರ್ಚಿನಲ್ಲಿ ಪ್ರಸಂಗ ನಡೆಸುತ್ತಿದ್ದ ಪಾದ್ರಿಯ ಮುಂದೆ ಕುಳಿತು ಪೀಟರನು ಇಂತಹ ಚಿತ್ರಗಳನ್ನು ಸ್ಮರಿಸಿ ಆನಂದಿಸುತ್ತಿದ್ದನು. ಇದೊಂದು ಆನಂದವನ್ನುಳಿದು ಅವನಿಗೆ ಬೇರಾವ ಆನಂದವೂ ಇರಲಿಲ್ಲ. ಇದೇ ಅವನ ತನ್ಮಯ; ಮಹೋದಯ; ಮುಕ್ತಿ ಸಾಮ್ರಾಜ್ಯ !

ಚಾಕುವಿನ ಪ್ರಸಂಗವು ನಡೆದ ಬಳಿಕ ವರ್ಷಗಳು ಒಂದರ ಮೇಲೊಂದು ಉರುಳಿದುವು. ಆದರೂ ಡೇನಿಯಲ್ಲನ ನಡತೆಯಲ್ಲಿ ಯಾವ ಬದಲಾವಣೆಯೂ ಕಾಣಿಸಲಿಲ್ಲ ಇದರಿಂದ ಪೀಟರನಿಗೆ ಅವನ ಮೇಲಿದ್ದ ಸಂಶಯವು ಮಾತ್ರ ನಶಿಸಿಹೋಯಿತು. ಶಂಕೆಯನ್ನು ಬದಿಗೊತ್ತಿ ಧಣಿಯು ಡೇನಿಯಲ್ಲನೊಂದಿಗೆ ಸಹಜತೆಯಿಂದ ನಡೆದುಕೊಳ್ಳತೊಡಗಿದನು. ಬಟ್ಲರನಿಗೆ ತಾನು ಕೊಡುತ್ತಿದ್ದ ಸಂಬಳದಿಂದ ತನಗಾವ ನಷ್ಟವೂ ಇಲ್ಲವೆಂದು ಎಷ್ಟೋಕಾಲದಿಂದ ಪೀಟರನು ಸ್ಪಷ್ಟವಾಗಿ ಮುಂದಟ್ಟು ಮಾಡಿಕೊಂಡಿದ್ದನು.

ಈ ತೀರ್ಮಾನಕ್ಕೆ ಬರುವುದಕ್ಕೆ ಮುನ್ನ ಪೀಟರನು ಆಯವ್ಯಯಗಳನ್ನು ಲೆಕ್ಕ ಹಾಕದೆ ಇಲ್ಲ. ಆದುದರಿಂದ ಅವನು ಡೇನಿಯಲ್ಲನನ್ನು ಕಠಿಣವಾಗಿ ಮಾತ ನಾಡಿಸುತ್ತಿರಲಿಲ್ಲ. ಪೀಟರನಲ್ಲಿ ಮೂರ್ಖತನವು ಹೆಚ್ಚಿದಂತೆ ಬಟ್ಲರನಲ್ಲಿ ಮುಗ್ಧತನವು ಮನೆಮಾಡಿಕೊಂಡಿತ್ತು. ಅಂತೂ ಈ ಸ್ವಾಮಿ—ಸೇವಕರಿಗೆ ಸಹವಾಸವು ಸಮಂಜಸವಾಗಿತ್ತು. ಬಟ್ಲರನಿಂದ ತನಗೆ ನಷ್ಟವಿಲ್ಲವೆಂದರಿತು ಕೊಂಡ ಪೀಟರನು ಅವನನ್ನು ಕಠಿಣವಾಗಿ ಮಾತನಾಡಿಸುತ್ತಿರಲಿಲ್ಲ. ಆದರೂ ಅವನ ಮುಗ್ಧ ಸ್ವಭಾವವನ್ನು ಕಂಡು ತಡೆಯಲಾರದೆ ಒಮ್ಮೊಮ್ಮೆ ಪೀಟರನು ಡೇನಿಯಲ್ಲನನ್ನು ಬೈಯ್ಯಬೇಕಾದ ಪ್ರಸಂಗಗಳೂ ಒದಗುತ್ತಿ ದ್ದುವು. ಒಮ್ಮೆ ಪೀಟರನು 'ಉಪ್ಪು ತೆಗೆದುಕೊಂಡು ಬಾ' ಎಂದಾಗ ಬಟ್ಲರನು ಸಕ್ಕರೆಯನ್ನು ತಂದು ಮುಂದಿರಿಸಿದ್ದನು. ಹಾಲು ತರಹೇಳಿದಾಗ ಬರಿಯ ಬಟ್ಟಲನ್ನೂ, ರೊಟ್ಟಿಯನ್ನು ತರಹೇಳಿದಾಗ ಮೊಟ್ಟೆಯನ್ನೂ ತಂದಿ ರಿಸಿದ್ದನು. ಇಂತಹ ಇನ್ನೂ ನೂರಾರು ಸಂದರ್ಭಗಳು ಆಗಿಂದಾಗ್ಗೆ ಒದ ಗುತ್ತಲೇ ಇದ್ದುವು. ತಡೆಯುವಷ್ಟು ತಡೆದು ತಡೆಯಲಸದಳವಾದಾಗ ಪೀಟರನು ಬಟ್ಲರನನ್ನು ಬಾಯಿಗೆ ಬಂದಂತೆಲ್ಲ ಬೈಯ್ಯುತ್ತಿದ್ದನು. ಆದರೆ ಕಿವುಡ ಬಟ್ಲರನಿಗೆ ತನ್ನ ಧಣಿ ತನ್ನನ್ನು ಬೈಯ್ಯುತ್ತಿದ್ದನೆಂದು ಅನೇಕವೇಳೆ ಗೊತ್ತಾಗುತ್ತಲೇ ಇರಲಿಲ್ಲ. ಬದಲಾಗಿ ಅವನು ತನ್ನನ್ನು ಹೊಗಳುತ್ತಿರುವ ನೆಂದೇ ಅವನ ನಂಬಿಕೆ. ಹೀಗೆಂದು ನೆನೆಸಿ ಬಟ್ಲರನು ನಕ್ಕುಬಿಡುತ್ತಿದ್ದನು. ಅದಕ್ಕೆ ಪೀಟರ್ ಮತ್ತೆ 'ಒಳ್ಳೆ ಮಂಕುದಿಣ್ಣೆಯ ಸಹವಾಸ' ಎನ್ನುತ್ತಿದ್ದನು. ಧಣಿ ಏನೆಂದನೆಂಬುದು ತಿಳಿಯದೆ ಡೇನಿಯಲ್ಲನು ಅದಕ್ಕೆ ಪ್ರತ್ಯುತ್ತರ ವಾಗಿ 'ಯಜಮಾನರ ಅನುಗ್ರಹ!' ಎಂಬುದೂ ಉಂಟು. ಒಟ್ಟಿನಲ್ಲಿ ಡೇನಿಯಲ್ಲನ ಕಿವುಡು ಅವನಿಗೊಂದು ಮಹಾಪ್ರಸಾದವಿದ್ದಂತೆ! ಆ ಕಿವುಡು ಅವನನ್ನು ಮಹತ್‌ಪಾಪಗಳಿಂದ ಪಾರುಗಾಣಿಸಿತ್ತೆಂದೇ ಹೇಳಬೇಕು.

* * * *

## ಪ್ರಕರಣ ೪.

## ತೋಟಗಾರ--

## ಸ್ಯಾಮ್ಯುಯಲ್--

ಪೀಟರನ ಬಂಗಲೆಯಿಂದ ಹತ್ತುಮೈಲಿಗಳಾಚೆ ಒಂದು ಹಳ್ಳಿ ಇತ್ತು. ಆ ಹಳ್ಳಿಯಲ್ಲಿ ಸ್ಯಾಮ್ಯುಯಲ್ ಎಂಬ ಒಬ್ಬ ಒಡರೈತನು ವಾಸಿಸುತ್ತಿದ್ದನು. ಪೀಟರನ ಬಂಗಲೆಗೆ ಸೇರಿದಂತಿದ್ದ ಸೇಬು ಮತ್ತು ದ್ರಾಕ್ಷಿ ತೋಟಗಳನ್ನು ಸ್ಯಾಮ್ಯುಯಲ್ಲನೇ ಗುತ್ತಿಗೆಗೆ ಹಿಡಿದಿದ್ದನು. ವಾರಕ್ಕೆರಡಾವರ್ತಿ ಹಳ್ಳಿಯಿಂದ ಬಂಗಲೆಗೆ ಬಂದು ಅವನು ತೋಟದ ವ್ಯವಸ್ಥೆಯನ್ನು ನೋಡುತ್ತಿದ್ದನು. ಲ್ಯೂಸಿ ಸ್ಯಾಮ್ಯುಯಲ್ಲನ ಹೆಂಡತಿ; ಆರ್ಥರ್ ಅವನ ಮಗ—ವಯಸ್ಸಿಗೆ ಬಂದವನು. ಒಮ್ಮೊಮ್ಮೆ ಇವರಿಬ್ಬರೂ ಸ್ಯಾಮ್ಯುಯಲ್ಲನೊಡನೆ ಬಂಗಲೆಗೆ ಬರುತ್ತಿದ್ದರು; ಆದಷ್ಟು ತೋಟದ ಆರೈಕೆಯನ್ನು ತಾವೂ ಗಮನಿಸುತ್ತಿದ್ದರು. ಪೀಟರನೊಬ್ಬ ಸ್ಥಿರಿಯ ಶ್ರೀಮಂತನೆಂದು ಸ್ಯಾಮ್ಯುಯಲ್ಲನಿಗೆ ತಿಳಿಯದು. ತಿಳಿದು ಅದರಿಂದ ಅವನಿಗಾಗಬೇಕಾದುದಾದರೂ ಏನು ? ತೋಟದಲ್ಲಿ ಬೆಳೆದು ಬಂದ ಬೆಳಸಿನಲ್ಲಿ ಮುಕ್ಕಾಲುಪಾಲು ಪೀಟರನದು. ಕಾಲುಪಾಲು ತೋಟಗಾರನದು. ಈ ತೆರನಾದ ಗುತ್ತಿಗೆ ಕರಾರನ್ನು ಅವರಿಬ್ಬರೂ ಮಾಡಿಕೊಂಡಿದ್ದರು; ಇದರಂತೆಯೆ ಫಲವಿಭಾಗವು ನಾಲ್ಕಾರು ವರ್ಷಗಳಿಂದ ನಡೆದುಬರುತ್ತಿತ್ತು. ತನ್ನ ಕೈಲಾದ ಎಲ್ಲ ಸಾಹಸವನ್ನೂ ಮಾಡಿ ಅನುಭವಿಯಾದ ಸ್ಯಾಮ್ಯುಯಲ್ಲನು ತೋಟದಿಂದ ಉತ್ತಮ ಫಲವನ್ನು ತೆಗೆಯುತ್ತಿದ್ದನು.

ಬಂಗಲೆಯ ಹಿತ್ತಿಲಲ್ಲಿ ಕಾಯಿಪಲ್ಯದ ಕೈತೋಟವಿದ್ದಿತಷ್ಟೆ. ಅದನ್ನು ಕೃಷಿಮಾಡುತ್ತಿದ್ದವರು ಪೀಟರ್ ಮತ್ತು ಬಟ್ಲರ್. ಆ ತೋಟದಿಂದ ಬಂದ

ಕಾಯಿಪಲ್ಯಗಳಲ್ಲಿ ಸ್ಯಾಮ್ಯುಯಲ್ಲನಿಗೆ ಪಾಲಿರಲಿಲ್ಲ. ಪೀಟರನೇ ದೊಡ್ಡ ಮನಸ್ಸುಮಾಡಿ ಆಗಷ್ಟು ಈಗಷ್ಟು ಅವನಿಗೇನನ್ನಾದರೂ ಕೊಟ್ಟರೆ ಉಂಟು; ಇಲ್ಲದೆ ಇದ್ದರೆ ಅದೂ ಇಲ್ಲ. ಆದರೆ ಬೆಳೆದ ಕಾಯಿಪಲ್ಯಗಳನ್ನು ಕುಕ್ಕೆಗಳಲ್ಲಿ ತುಂಬಿಕೊಂಡು ಲ್ಯೂಸಿಯೂ ಆರ್ಥರನೂ ಪೇಟೆಯಲ್ಲಿ ಮಾರಿ ಹಣವನ್ನು ತಂದು ಪೀಟರನಿಗೆ ಕೊಡುತ್ತಿದ್ದರು. ಆ ಹಣದಲ್ಲಿ ಕಾಲುಭಾಗವನ್ನು ಪೀಟರನು ಅವರಿಗೆ ಕೊಡುತ್ತಿದ್ದನು.

ಆ ಮಾತು ಹಾಗಿರಲಿ; ಕಾಯಿಪಲ್ಯದ ಗಿಡಗಳಿಗೆ ಅನೇಕವೇಳೆ ಪೀಟರನೇ ಸ್ವಂತವಾಗಿ ನೀರೆರೆಯುತ್ತಿದ್ದನು; ಕಳೆ ಕಿತ್ತು ಗೊಬ್ಬರ ಹಾಕುತ್ತಿದ್ದನು. ಗಿಡಗಳು ಕಾಯಿಪಲ್ಯಗಳನ್ನು ಸಮೃದ್ಧಿಯಾಗಿ ನೀಡದಿದ್ದರೆ ಅವುಗಳಿಗೆ ಗೊಬ್ಬರ ಹಾಕಿ ನೀರೆರೆದ ಕಾರ್ಯಕ್ಕೆ ಪೀಟರನು ಖಂಡಿತವಾಗಿಯೂ ಕೈಹಾಕುತ್ತಿರಲಿಲ್ಲ. ಹಿಂಡದ ಹಸುವಿಗೆ ಹುಲ್ಲನ್ನು ಕೊಂಡುಹಾಕುವವರು ಕಡಿಮೆ. ಮನುಷ್ಯರಲ್ಲಿ, ಪ್ರಾಣಿವರ್ಗದಲ್ಲಿ, ಪೀಟರನಿಗಿದ್ದ ಪ್ರೀತ್ಯಾದರಗಳು ಮತ್ತು ಸಸ್ಯವರ್ಗದಲ್ಲಿ ಅವನಿಗಿದ್ದ ನಂಬಿಕೆ ನೆಚ್ಚಿಕೆಗಳು ಅಷ್ಟಾಗಿ ಆಳತೆಗೆ ನಿಲುಕುತ್ತಿರಲಿಲ್ಲ. ಅವು ಪ್ರಪ್ರಥಮವಾಗಿ ಪ್ರತಿಫಲದ ಪ್ರಮಾಣ ಪರಿಣಾಮಗಳನ್ನು ಬಲವತ್ತರವಾಗಿ ಹೊಂದಿಕೊಂಡಿದ್ದುವು.

ಹಾಗಾದರೆ ಪೀಟರನ ಪ್ರೀತಿ ಯಾವುದರಮೇಲೆ ಅಖಂಡವಾಗಿ, ಅಭೇದ್ಯವಾಗಿ, ಅಚಲವಾಗಿ ಇದ್ದಿತು? ಧನ ..... ಧನ! ಧನವೊಂದಕ್ಕೇ ಜೀವಕಳೆ ಇದ್ದಿತೆಂದು ಅವನು ಸಂಪೂರ್ಣವಾಗಿ ನಂಬಿದ್ದನು. ಧನವೊಂದು ಮುಷ್ಟಿಗೆ ಅವನ ಪ್ರೇಮವೆಲ್ಲವನ್ನೂ ಸೂರೆಗೊಂಡಿದ್ದಿತು; ಅವನು ಆ ಧನದ ದಾಸನಾಗಿದ್ದನು. ಧನವೇ ಅವನ ಸರ್ವಸ್ವ; ಅದೇ ಅವನ ಎದೆ; ನರನಾಡಿ; ಶ್ವಾಸಕೋಶ. ಅದರ ಸಮೀಪದಲ್ಲಿ ಅವನಿಗೆ ಅತಿಯಾದ ಸಂತಸ; ಅದರ ಸಂಗ್ರಹದಲ್ಲಿ ಅವನ ಅಪಾರ ಸನ್ನಾಹ; ಅದರ ಸನ್ನಿಧಾನದಲ್ಲಿ ಅವನೊಬ್ಬ ಸೇವಕ—ಉಪಾಸಕ; ಅದಕ್ಕಾಗಿ ಅವನು ಸರ್ವಸಂಗವನ್ನೂ ತ್ಯಜಿಸಿದ್ದನು. ಧನದಲ್ಲಿ ಅವನಿಗೆ ಅಪರಿಮಿತ ಚಪಲ; ಅದು ಅತ್ಯಂತ ಚಂಚಲವಾದುದು ಎಂದವನು ನಂಬದಾದನು. ಆ ಧನಶೇಖರಣೆಗೆ ಸಹಾಯವಾಗುವುದಿದ್ದರೆ

ಮಾತ್ರ ಮನುಷ್ಯರಲ್ಲಿ, ಪ್ರಾಣಿವರ್ಗದಲ್ಲಿ ಅವನಿಗೆ ಆದರಣೆ; ಸಸ್ಯವರ್ಗದಲ್ಲಿ ಆಸಕ್ತಿ; ಒಟ್ಟಿನಲ್ಲಿ ಹೇಳುವುದಾದರೆ, ಯಾವುದೇ ವ್ಯವಹಾರವಾಗಲಿ, ವ್ಯಾಪಾರವಾಗಲಿ, ವ್ಯವಸ್ಥೆಯಾಗಲಿ, ಅದರಿಂದ ಕಂಡಂತೆ ಧನದ ಪ್ರತಿಫಲವು ಬರುವಂತಿರಬೇಕು. ಹಾಗಿದ್ದರೇನೇ ಪೀಟರನು ಅವುಗಳಿಗೆ ಕೈಹಾಕಬೇಕಿದ್ದರೆ. ಆದಾಯಭಾಗವನ್ನು ಪರಿಷ್ಕಾರವಾಗಿ ಲೆಕ್ಕಹಾಕಿ ತೃಪ್ತಿ ಹೊಂದಿದನಂತರವೇ ಅವನು ಯಾವ ಪ್ರಯತ್ನಕ್ಕಾಗಲಿ, ಇತ್ಯರ್ಥಕ್ಕಾಗಲಿ ಒಡಂಬಡಬೇಕಾಗಿದ್ದರೆ:

ಪೀಟರ್ ಮತ್ತು ಸ್ಯಾಮ್ಯುಯಲ್ ಇವರಿಬ್ಬರ ನಡುವಿನಲ್ಲಿದ್ದ ಗುತ್ತಿಗೆ ವ್ಯವಹಾರವೂ ಮೇಲ್ಕಂಡ ನೀತಿನಿಯಮಗಳಿಗೆ ಒಳಪಡಬೇಕಾಗಿತ್ತು. ಆಡಿಗಡಿಗೆ ಪೀಟರನು ಆ ನೀತಿನಿಯಮಗಳನ್ನು ತೋಟಗಾರನಲ್ಲಿ ಎತ್ತಿ ನುಡಿಯುತ್ತಿದ್ದನು. ಚಾಚೂ ತಪ್ಪದೆ ಅವುಗಳನ್ನು ಪರಿಪಾಲಿಸಬೇಕೆಂದೂ ಅವನನ್ನು ಒತ್ತಾಯಪಡಿಸುತ್ತಿದ್ದನು.

ಬಂಗಲೆಯ ಸುತ್ತಲೂ ಇದ್ದ ಹತ್ತಿಪ್ಪತ್ತು ಎಕರೆ ಭೂಮಿಯು ಅತ್ಯುತ್ಕೃಷ್ಟವಾಗಿದ್ದಿತು. ಆದುದರಿಂದಲೇ ಅದರಿಂದ ಬೆಳೆದುಬಂದ ಸೇಬು ದ್ರಾಕ್ಷಿಗಳ ಪ್ರಮಾಣವೂ ಹೆಚ್ಚಾಗಿದ್ದಿತು. ದೂರದ ಹಳ್ಳಿಯಿಂದ ಸ್ಯಾಮ್ಯುಯಲ್ಲನು ಬಂಗಲೆಗೆ ಬರುವ ವೇಳೆಗೆ ಹೊತ್ತೇರುತ್ತಿತ್ತು. ಹಳ್ಳಿಯಿಂದ ಬರುವಾಗ ಅವನು ಬೆಳಗಿನ ಊಟವನ್ನು ತೀರಿಸಿಕೊಂಡು ಬರುತ್ತಿದ್ದನು. ಬಂಗಲೆಯ ತೋಟದಲ್ಲಿ ಅವನು ವಾರಕ್ಕೆರಡಾವರ್ತಿ ಮೈಮುರಿದು ದುಡಿಯುತ್ತಿದ್ದನು. ಕೆಲಸವು ಹೆಚ್ಚಾಗಿದ್ದಾಗ ಅವನೊಂದಿಗೆ ಅವನ ಹೆಂಡತಿಯೂ ಮಗನೂ ಬಂಗಲೆಗೆ ಬರುತ್ತಿದ್ದರು. ಒಮ್ಮೊಮ್ಮೆ ತೋಟದ ಕೆಲಸವು ಮುಗಿಯುವ ವೇಳೆಗೆ ಕತ್ತಲು ಕವಿಯುತ್ತಿತ್ತು. ಆದರೂ ಸ್ಯಾಮ್ಯುಯಲ್ಲನು ಬಂಗಲೆಯಲ್ಲಿ ತಂಗುವುದಕ್ಕೆ ಪೀಟರನು ಒಪ್ಪುತ್ತಿರಲಿಲ್ಲ. ಬದಲಾಗಿ, ಅವನನ್ನು ಕುರಿತು ಪೀಟರನೇ ಹೇಳುತ್ತಿದ್ದನು. "ಯಾರಾದರೂ ದಾರಿಗರನ್ನು ಜತೆಮಾಡಿಕೊಂಡು ಊರಿಗೆ ಹೋಗಿ ಸೇರಿಬಿಡುವುದು ಒಳ್ಳೆಯದು ಸ್ಯಾಮ್ಯುಯಲ್!" ಎಂದು. ಒಮ್ಮೆ ಸ್ಯಾಮ್ಯುಯಲ್ಲನು ಸೇಬು, ದ್ರಾಕ್ಷಿಗಳನ್ನು

ಪೇಟೆಗೆ ಮಾರಾಟಕ್ಕಾಗಿ ಹೊತ್ತುಕೊಂಡು ಹೋಗಿ ಹಿಂತಿರುಗಿ ಬರುವ ವೇಳೆಗೆ ತೀರ ಕತ್ತಲಾಗಿ ಹೋಗಿತ್ತು. ಬಂದವನೇ ಅವನು ಮಾರಿ ತಂದ ಹಣವನ್ನು ತನ್ನ ಧಣಿಗೆ ಕೊಟ್ಟನು. ವಾಡಿಕೆಯಂತೆ ಪೀಟರನು ಕಾಲುಭಾಗವನ್ನು ಸ್ಯಾಮ್ಯುಯಲ್ಲನಿಗೆ ಕೊಟ್ಟು "ಹೊರಡು; ಹೊತ್ತಾಯಿತು" ಎಂದನು.

"ಇಲ್ಲ, ಇಲ್ಲ; ಧಣಿಗಳೇ! ಇಲ್ಲೇ ತಂಗುತ್ತೇನೆ. ಬೆಳಗ್ಗೆ ಎದ್ದು ಊರಿಗೆ ಹೋದರಾಯಿತು."

"ಕೂಡದು ಸ್ಯಾಮ್ಯುಯಲ್!" ಎಂದ ಪೀಟರ್.

ಕಾರಣವೇನೆಂದು ಕೇಳಲು ಸ್ಯಾಮ್ಯುಯಲ್ಲನಿಗೆ ಧೈರ್ಯಸಾಲದು. ಪ್ರತಿಯಾಗಿ ಅವನು ಧಣಿಯನ್ನು ಕುರಿತು ಕೇಳಿದ:

"ಡೇನಿಯಲ್ ಅಣ್ಣನ ಕೊಠಡಿ ಇಲ್ಲವೇ ಧಣಿಗಳೇ! ಅಲ್ಲೇ ಮಲಗಿರುತ್ತೇನೆ."

"ಕೂಡದು, ಕೂಡದು" ಎಂದು ತಡೆದ ಪೀಟರ್.

ಅಂದಿನಿಂದಾಚೆಗೆ ಸ್ಯಾಮ್ಯುಯಲ್ಲನು ಊರಿಗೆ ಹೋಗಲು ಹೊತ್ತಾದರೆ ದಿನಸಿ ವರ್ತಕನ ಮನೆಯಲ್ಲಿ ಮಲಗಿದ್ದು ರಾತ್ರಿಯನ್ನು ದೂಡುತ್ತಿದ್ದನು. ತೋಟಗಾರನನ್ನು ರಾತ್ರಿ ಬಂಗಲೆ ಬಳಿ ಮಲಗಕೂಡದೆಂದು ಪೀಟರನು ಹೇಳುತ್ತಿದ್ದುದೇಕೆ?

'ಊರಿಗೆ ಹೊರಟುಹೋಗು' ಎಂದು ಅವನನ್ನು ಒತ್ತಾಯಪಡಿಸುವುದರ ಆಳವಾದ ಸಂಕೇತವನ್ನು ಸರಳ ಸ್ವಭಾವಿಯೂ, ಸತ್ಯಸಂಧನೂ ಆದ ಸ್ಯಾಮ್ಯುಯಲ್ಲನು ಕಂಡುಕೊಳ್ಳಲಾರದೆ ಹೋದನು. ಬಂಗಲೆ ತೋಟದ ಬೆಳಸಿನಲ್ಲಿ ಸ್ಯಾಮ್ಯುಯಲ್ಲಿನ ಪಾಲು ಕಾಲು ಭಾಗವಷ್ಟೇ. ಅವನು ಬಂಗಲೆಗೆ ಬರುತ್ತಿದ್ದುದು ಹೊತ್ತೇರಿದ ಮೇಲೆ; ಊರಿಗೆ ಹೋಗುತ್ತಿದ್ದುದು ಹೊತ್ತು ಮುಳುಗುವುದಕ್ಕೆ ಮುನ್ನ.

ಅವನು ಬರುವುದಕ್ಕೆ ಮುನ್ನ, ಅವನು ಹೊರಟುಹೋದ ಮೇಲೆ

ಬೆಳಸು ಕಳುವಾದರೆ ಅವನು ಕಂಡು ಹಿಡಿಯುವಂತಿರಲಿಲ್ಲ. ಬೆಳೆದಿದ್ದರಲ್ಲಿ ಕಳುವಾದದ್ದು ಹೋಗುತ್ತ ಉಳಿದಿದ್ದರಲ್ಲಿ ಅವನ ಪಾಲು ; ಅದೂ ಧಣಿಯು ಲೆಕ್ಕಮಾಡಿಕೊಟ್ಟಂತೆ. ಹೊತ್ತು ಹೊತ್ತಿಗೆ ಹತ್ತು ಮೈಲಿದೂರ ದಾರಿ ನಡೆದು ಬಂಗಲೆಗೆ ಬರುವುದು; ನೆತ್ತಿಯ ಬೆವರು ಸುರಿಸಿ ಕೃಷಿಮಾಡಿ ಬೆಳೆ ಹೆಚ್ಚಿಸುವುದು; ಕೊಟ್ಟದ್ದನ್ನು 'ಸರಿ' ಎನ್ನುತ್ತ ತೆಗೆದುಕೊಳ್ಳುವುದು; ಇಷ್ಟನ್ನುಮಾತ್ರ ಅವನು ಬಲ್ಲವನಾಗಿದ್ದನು. ಅವನಿಗೆ ಓದು ಬರಹ ಬಾರದು. ಅವನಿಗೆ ಸೇರಬೇಕಾದ ಗುತ್ತಿಗೆ ಪಾಲಿನ ಪ್ರಮಾಣ ಪೀಟರನು ನಿರ್ಣಯಿಸಿ ದಂತೆ; ಅದನ್ನವನು ನಂಬಿದಂತೆ. ಪೀಟರನು ಬಂಗಲೆಯ ಒಡೆಯ. ಅವನ್ನನ್ನು ಕಾಣದೆ ಬೆಳಸನ್ನು ಯಾರು ಕಳವು ಮಾಡಲಾದೀತು ? ಮೇಲಾಗಿ ಪೀಟರನು ತನ್ನಂತಹ ಬಡ ಹಳ್ಳಿಗನನ್ನು ಮೋಸಮಾಡಲಾರ ಎಂಬ ದೃಢ ನಂಬಿಕೆ ಸರಳ ಸ್ಯಾಮ್ಯುಯಲ್ಲನಿಗೆ. ಆದರೆ ಈ ದೃಢನಂಬಿಕೆಯು ಕಾಲ ಕಳೆದಂತೆಲ್ಲ ಮೂಢನಂಬಿಕೆಯಾಗಿ ಪರಿಣಮಿಸುತ್ತ ಬಂದಿತು. ತನ್ನಲ್ಲಿ ತೋಟಗಾರನಿಗೆ ಪೂರ್ಣನಂಬಿಕೆ ಇದೆಯಲ್ಲ ಎಂಬ ಧೈರ್ಯ ಪೀಟರನಿಗೆ. ಆ ಧೈರ್ಯವು ದಿನೇ ದಿನೇ ಅವನಲ್ಲಿ ಅಧಿಕರಿಸುತ್ತ ಬಂದಿತು.

ಇವರಿಬ್ಬರ ವಿಚಾರ ಹೀಗಾಯಿತು. ತನ್ನ ಧಣಿ ಮತ್ತು ಸ್ಯಾಮ್ಯುಯಲ್ ಇವರಿಗೆ ನಡೆದ ಗುತ್ತಿಗೆ ಒಪ್ಪಂದದ ಅಂಶಗಳು ಇಂತಹುವೆಂಬುದು ಡೇನಿಯಲ್ಲನಿಗೆ ತಿಳಿಯದು. ಅವರಿಬ್ಬರೂ ಒಬ್ಬರೊಡನೊಬ್ಬರು ಆಡಿ ಕೊಳ್ಳುವ ಮಾತುಗಳನ್ನು ಬಟ್ಲರನು ಕೇಳಿದವನಲ್ಲ. ಬಂಗಲೆ ಯಜಮಾನರು ಮಾಡುವ ರಹಸ್ಯದ ಕೆಲಸಗಳನ್ನೂ ಅವನು ನೋಡಿದವನಲ್ಲ.

ಸ್ಯಾಮ್ಯುಯಲ್ಲನು ವಾರಕ್ಕೆರಡಾವರ್ತಿ ಬಂಗಲೆಗೆ ಬಂದು ಹೋಗು ತ್ತಿದ್ದನು. ಉಳಿದ ಐದುದಿನಗಳೂ ಅವನು ತೋಟದ ಕಡೆ ತಲೆ ಇಡುತ್ತಿರ ಲಿಲ್ಲ. ಆ ದಿನಗಳಲ್ಲಿ ಪೀಟರನ ಆಡಳಿತವೇ ಆಡಳಿತ. ಹಾಗೂ ಸ್ಯಾಮ್ಯು ಯಲ್ಲನು ಬರುತ್ತಿದ್ದ ಎರಡು ದಿನಗಳಲ್ಲಿಯೂ ಅತಿ ಪ್ರಾತಃಕಾಲದಲ್ಲೆ ಪೀಟರನು ಮಾಡುತ್ತಿದ್ದ ಕೆಲಸಗಳನ್ನು ಅವನೇನು ಬಲ್ಲ ಪಾಪ? ಹಾಗಾದರೆ ಸ್ಯಾಮ್ಯುಯಲ್ಲನ ಬೆನ್ನುಹಿಂದೆ ಗುತ್ತಿಗೆ ಒಪ್ಪಂದಕ್ಕೆ ವಿರುದ್ಧವಾಗಿ ಪೀಟರನು

ಮಾಡುತ್ತಿದ್ದುದೇನು ?

ಪ್ರತಿದಿನವೂ ಪ್ರಾತಃಕಾಲದಲ್ಲಿ ಪೀಟರನು ತೋಟವನ್ನು ಹೊಕ್ಕು ಪಕ್ವವಾದ ಸೇಬುದ್ರಾಕ್ಷಿಗಳನ್ನು ಕಿತ್ತು ಒಂದೆಡೆ ಗುಡ್ಡೆ ಹಾಕಿ ಕ್ರಮಕ್ರಮವಾಗಿ ಗೂಡೆಗಳಿಗೆ ತುಂಬುತ್ತಿದ್ದನು. ಪೀಟರನೇ ಪಳಗಿಸಿಕೊಟ್ಟ ಪದ್ಧತಿಯ ಪರಿಣಾಮವಾಗಿ ಪೇಟೆಯ ಹಣ್ಣಿನ ಮಾರಾಟಗಾರರು ತೋಟದ ಅಂಚಿನಲ್ಲಿ ಹಾರಾಡುತ್ತಿದ್ದರು. ಪೀಟರನು ಅವರನ್ನು ತಾನಾಗಿಯೇ ಕರೆಯುತ್ತಿದ್ದನು; ಅವರಿಗೆ ಉತ್ತಮಬೆಲೆಗೆ ಹಣ್ಣುಗಳನ್ನು ಮಾರುತ್ತಿದ್ದನು: ಬಂದ ಹಣವನ್ನು ಕಿಸೆಗೆ ತುಂಬಿಕೊಳ್ಳುತ್ತಿದ್ದನು. ಹೊತ್ತು ಹುಟ್ಟುವುದಕ್ಕೆ ಮುಂಚೆ ಹೊಸದಾಗಿ ಹಣವನ್ನು ಕಂಡರಲ್ಲದೆ ಅವನ ಮನಸ್ಸಿಗೆ ನೆಮ್ಮದಿ ಇರದು. ಆದರೆ ನ್ಯಾಯ ವಾಗಿ ಆ ಹಣದಲ್ಲಿ ಬಡ ತೋಟಗಾರನಿಗೂ ಒಂದು ಭಾಗವಿದೆ; ಅವನನ್ನು ವಂಚಿಸಬಾರದು; ಅವನ ಬೆನ್ನಹಿಂದೆ ಅವನ ಬಾಳನ್ನು ಸ್ವಲ್ಪ ಸ್ವಲ್ಪವಾಗಿ ಮುರಿಯಬಾರದು; ಅವನು ಸುರಿಸಿದ ಬೆವರು ವ್ಯರ್ಥವಾಗಬಾರದು; ಇತ್ಯಾದಿ ಯೋಚನೆಗಳು ಪೀಟರನನ್ನು ಭಾದಿಸುತ್ತಿರಲಿಲ್ಲ. ಅವನ ಮನಸ್ಸಾಕ್ಷಿಗೆ ತೂಕ ಕಡಿಮೆ. ಅವನು ಎಷ್ಟೆಷ್ಟು ಹೆಚ್ಚಾಗಿ ದುರಾಸೆಯ ದಾಸನಾಗುತ್ತ ಬಂದನೋ ಅವನ ಮನಸ್ಸಾಕ್ಷಿಯೂ ಅಷ್ಟಷ್ಟು ಹಗುರವಾಗುತ್ತ ಬಂದಿತು.

ತಾನು ದಿನವಹಿ ಹಣ್ಣುಗಳನ್ನು ಮರೆಯಾಗಿ ಮಾರಾಟಮಾಡುತ್ತ ಬಂದುದನ್ನು ತನ್ನಲ್ಲಿ ಕೊಂಡವರು ಹೊರಗೆಡವದಿರಲಿ ಎಂಬುದು ಪೀಟರನ ಹಾರೈಕೆ. ಅದಕ್ಕಾಗಿ ಅವನು ಅವರನ್ನು ಕಂಡು ಹೇಳುತ್ತಿದ್ದನು. "ಎಚ್ಚರಿಕೆ! ಏನೋ ಪಾಪ! ಬಡವರು; ಕುಕ್ಕೆ ಹೊತ್ತುಮಾರುವವರು; ಅಷ್ಟಿಷ್ಟು ಸಂಪಾದಿಸಿಕೊಳ್ಳಲಿ ಎಂದು ಕರೆದು ಕೊಡುತ್ತಿದ್ದೇನೆ; ಅದೂ ನಿಮ್ಮ ಪರಿಚಯವಿರುವುದರಿಂದ; ಹೊತ್ತು ಹುಟ್ಟದ ಒಡನೆ ನನ್ನ ತೋಟದ ಅಂಚಿನಲ್ಲಿ ಹಣ್ಣಿಗಾಗಿ ಹಾರಾಡುವ ನಿಮ್ಮನ್ನು ಬರಿಗೈಯ್ಯಲ್ಲಿ ಕಳುಹಿಸಲೇ ? ಇದುವರೆಗೆ ನಡೆದುಬಂದ ವಾಡಿಕೆಯನ್ನು ತಪ್ಪಿಸಬಾರದು ಎಂಬುದು ನನ್ನ ಬಯಕೆ. ಈ ಹಣ್ಣುಗಳು ನನ್ನ ತೋಟದವು ಎಂದು ಯಾರಲ್ಲಿಯಾದರೂ ಹೇಳೀರಿ–ಭದ್ರ! ಹಾಗೆಮಾಡಿದರೆ ನಿಮ್ಮಂತೆಯೇ ಕುಕ್ಕೆ ಹೊತ್ತು ತರುವವರು

ನೂರಾರುಮಂದಿ ಬಂದು ತೋಟಕ್ಕೆ ಮುತ್ತಿಗೆ ಹಾಕಿಯಾರು. ಆಗ ಪ್ರೈಪ್ರೋಟಿ ಹೆಚ್ಚಿ ನಿಮಗೇ ಅನಾನುಕೂಲ. ಬೇಕಾದರೆ ಇನ್ನೊಂದು ಗೊಂಚಲು ದ್ರಾಕ್ಷಿ, ನಾಲ್ಕು ಸೇಬು ಇವುಗಳನ್ನು ಹೆಚ್ಚಾಗಿ ಕೊಟ್ಟೇನು. ತೋಟದಬಳಿ ಮಟ್ಟಿಗೆ ದೊಂಬಿ ಸೇರಿಸಿಬಿಡಬೇಡಿ."

ಪೀಟರನು ಅಷ್ಟೊಂದು ಚತುರ. ಅದಷ್ಟು ಸಮಸ್ಯೆಗಳನ್ನು ರಹಸ್ಯವಾಗಿ ಪರಿಹರಿಸಬಲ್ಲ ಸಾಹಸವುಳ್ಳವನು. ಒಟ್ಟಿನಲ್ಲಿ ಅವನ ಬಾಳು ಗುಪ್ತವಾದದ್ದು; ಅವನ ಆಲೋಚನೆ ಅಂತರಂಗಗಳೂ ಗುಪ್ತ; ಅವನ ಭಯ, ಭೀತಿ, ಭ್ರಮೆ, ಎಲ್ಲಾ ಗುಪ್ತ; ಅವನ ವರಮಾನ ಗುಪ್ತ; ವ್ರಯ ಗುಪ್ತ; ನಿಧಿರಕ್ಷಣೆ ಗುಪ್ತ; ಪೀಟರನೇ ಗುಪ್ತಮಯ!

ಮಾರಾಟಗಾರರು ಹಣ್ಣುಗಳನ್ನು ಕುಕ್ಕೆಗಳಲ್ಲಿ ತುಂಬಿಕೊಂಡು ತೋಟದ ಅಂಚಿನಿಂದಾಚೆ ಹೋದಮೇಲೆ ಪೀಟರನು ಅಲ್ಲೊಂದೆಡೆ ಬಂಡೆಯ ಮೇಲೆ ಕುಳಿತು ತನಗೆ ಬೇಕಾದಷ್ಟು ಹಣ್ಣುಗಳನ್ನು ತಿಂದು ತೃಪ್ತಿ ಹೊಂದುತ್ತಿದ್ದನು. ಬಳಿಕ ನಾಲ್ಕಾರು ಗೊಂಚಲು ದ್ರಾಕ್ಷಿಯನ್ನೂ ಪಕ್ವಕ್ಕೆಬಂದ ಹತ್ತೆಂಟು ಸೇಬುಗಳನ್ನೂ ಕಿತ್ತು ಕೈಯಲ್ಲಿ ಹಿಡಿದು ಬಂಗಲೆಗೆ ಹಿಂತಿರುಗುತ್ತಿದ್ದನು. ಹಾಗೆ ಕಿತ್ತು ತಂದ ಹಣ್ಣುಗಳನ್ನೇ ನೆರೆಹೊರೆಯವರಿಗೆ ಕೊಟ್ಟು ಅವನು ಅವರಲ್ಲಿ ಊಟಕ್ಕೆ ನಿಲ್ಲುತ್ತಿದ್ದನು.

ಧಣಿಗಳ ಮಾತು ಹೀಗಾಯಿತು. ಸ್ಯಾಮ್ಯುಯಲ್ಲನ ರೀತಿನೀತಿಗಳೇನು? ಅವನು ಸತ್ಯಸಂಧ; ಸರಳ ಸ್ವಭಾವಿ; ಶಾಂತಮನೋಭಾವದವನು ಎಂದೆಲ್ಲ ಮೊದಲೇ ಹೇಳಿದೆಯಷ್ಟೆ. ತಾನು ಹಣ್ಣುಗಳನ್ನು ಕಂಡಂತೆಯೂ ಕಾಣದಂತೆಯೂ ಕಿತ್ತು ತಿಂದರೆ ಧಣಿಗೆ ದ್ರೋಹಮಾಡಿದಂತೆ ಆಗುತ್ತದಲ್ಲ ಎಂಬ ತೀವ್ರ ಯಾತನೆ ಅವನ ಮನಸ್ಸಿಗೆ. ತನ್ನ ಪಾಲು ಕಡಿಮೆಯಾದರೂ ಧಣಿಯ ಪಾಲು ಕಡಿಮೆಯಾಗಬಾರದೆಂಬುದು ಅವನ ಎಣಿಕೆ. ಸ್ಯಾಮ್ಯುಯಲ್ಲನು ಸ್ವಾಮಿನಿಷ್ಠೆಯಿಂದ ನಡೆದುಕೊಳ್ಳುತ್ತಿದ್ದನು. ಅವನಾಗಲಿ ಅವನ ಕುಟುಂಬದವರಾಗಲಿ ಒಂದು ದಿನವಾದರೂ ಧಣಿಯು

ಕಾಣದಂತೆ ಹಣ್ಣುಗಳನ್ನು ಕಿತ್ತು ತಿಂದವರಲ್ಲ; ಮಾರಿದವರು ಮೊದಲೇ ಅಲ್ಲ. ಪೀಟರನೇ ತಾನಾಗಿ ಕೊಟ್ಟ ಹೊರತು ತೋಟಗಾರನೂ, ಅವನ ಕುಟುಂಬದವರೂ ಏನನ್ನೂ ಮುಟ್ಟುತ್ತಿರಲಿಲ್ಲ. ಈ ವಿಷಯವನ್ನು ಪೀಟರನು ತನ್ನನ್ನೂ ಮಿಂಚಿ ಒಂದೊಂದು ವೇಳೆ ಕೊಂಡಾಡಿದ್ದನು.

ಇಷ್ಟಾದರೂ ಸ್ಯಾಮ್ಯುಯಲ್ಲನನ್ನು ಕುರಿತ ಪೀಟರನ ಶಂಕೆಗಳು ಹೇಳಲಳವಲ್ಲ. ಅವುಗಳನ್ನೆಲ್ಲಾ ಒಂದು ಪಟ್ಟಿಯಾಗಿ ತಯಾರಿಸಿದರೆ ಮುಖ್ಯಾಂಶಗಳು ಈ ರೀತಿ ಇರಬಹುದು :

" ಹಣ್ಣುಗಳೇಕೆ ಈ ರೀತಿ ದಿನದಿನವೂ ಕಡಿಮೆಯಾಗುತ್ತಿವೆ ? "

" ತೋಟದ ಅಂಚಿನಲ್ಲಿ ದ್ರಾಕ್ಷಿ ಅಂಬು, ಹಣ್ಣು, ಎಲೆ ಇವು ದಿನವೂ ಉದುರಿ ಚೆಲ್ಲಾಪಿಲ್ಲಿಯಾಗಿ ಹರಡಿರುವುದು ಹೇಗೆ ? "

" ಪೇಟೆಯಲ್ಲಿ ವಾಡಿಕೆ ಹಣ್ಣಿನಂಗಡಿಯವರು ' ನಮ್ಮಲ್ಲಿ ಸಾಕಷ್ಟಿವೆ ' ಎನ್ನುತ್ತಾರೆ. ಅವರು ಕೊಂಡುತಂದುದೆಲ್ಲಿ ? "

" ಡೇನಿಯಲ್ಲನೇನಾದರೂ ಧಣಿಯೊಂದಿಗೆ ಕಲೆತಿರಬಹುದೇ ? ಧಣಿಯು ಮಾಡಿದುದನ್ನು ಡೇನಿಯಲ್ಲನು ನನಗೆ ಆಗಾಗ ಹೇಳುತ್ತಾನೆ .... "

" ಮರೆಯಾಗಿ ಹಣ್ಣನ್ನು ಕೊಂಡುಕೊಂಡವರೇ ನನ್ನಲ್ಲಿ ಹೇಳಿದ್ದಾರೆ. ' ನಿನ್ನಲ್ಲಿ ಕೊಳ್ಳುವುದಕ್ಕಿಂತ ನಿನ್ನ ಧಣಿಯಬಳಿ ಕೊಳ್ಳುವುದೇ ಲೇಸು ' ಹಾಗಾದರೆ ಅವರು ವಾಡಿಕೆಯಾಗಿ ನನ್ನ ಬೆನ್ನು ಹಿಂದೆ ನನ್ನ ಪಾಲನ್ನು ಕೊಳ್ಳುತ್ತಿರುವರೇ ? "

" ನಮ್ಮ ತೋಟದಿಂದ ಪ್ರತಿದಿನವೂ ಬೆಳಗ್ಗೆ ಕುಕ್ಕೆಗಳಲ್ಲಿ ಹಣ್ಣುಗಳು ತಮ್ಮ ಮನೆಯ ಮುಂದೆ ಸಾಗಿ ಹೋಗುತ್ತಿರುವುದನ್ನು ನೆರೆಮನೆ ಸ್ಯಾಮ್ಸನ್ನರೂ, ಅವರ ಆಳೂ, ನೋಡಿದುದಾಗಿ ಹೇಳುತ್ತಾರೆ. "

" ಇವು ಪೀಟರ್ ಧೊರೆ....ತೋಟದ ಹಣ್ಣುಗಳು ; ತಿಂದು ನೋಡಿ ; ' ಅಮೃತ ! ' ಎಂದು ಮಾರಾಟಗಾರರು ಪೇಟೆ ಸ್ಥಳದಲ್ಲಿ ಅರುಚುವುದನ್ನು

ಹಳ್ಳಿಯಿಂದ ಬರುವಾಗ ಹಾದಿಯಲ್ಲಿ ನಾನೇ ನನ್ನ ಕಿವಿಯಾರೆ ಕೇಳಿದ್ದೇನೆ."

"ನೀವು ಗುತ್ತಿಗೆ ತೋಟದ ಹಣ್ಣುಗಳನ್ನು ಮರೆಯಾಗಿ ಮಾರಿ ನನ್ನ ಪಾಲನ್ನು ವಂಚಿಸಿದರೆ, ಮಾರಾಟಕ್ಕೆಂದು ಹೊತ್ತುಕೊಂಡುಹೋಗಿ ಬಂದದ್ದರಲ್ಲಿ ಅರ್ಧವನ್ನು ಮಾತ್ರ ನಿಮಗೆ ಕೊಟ್ಟರೆ........ಉಳಿದ ಅರ್ಧದಲ್ಲಿ ಕಾಲುಭಾಗವನ್ನು ಒಂಪ್ಪಂದಕ್ಕೆ ವಿರುದ್ಧವಾಗಿ ನಾನೇ ಉಳಿಸಿಕೊಂಡರೆ......... ಅಥವಾ, ಮಾರಾಟದ ಹಣವನ್ನು ಕಡಿಮೆಮಾಡಿ ಹೇಳಿ ವಂಚಿಸಿದರೆ, ಆಗ ನಿಮಗೆ ಹೇಗೆ ಅನ್ನಿಸುತ್ತದೆ?"

"ಹೌದು; ಸ್ಯಾಮ್ಯುಯಲ್ಲನು ತನ್ನನ್ನು ಹೀಗೆ ಪ್ರಶ್ನೆಮಾಡಬಹುದು; ತನ್ನನ್ನು ಇಕ್ಕಟ್ಟಿನಲ್ಲಿ ಸಿಲುಕಿಸಬಹುದು; ತನ್ನ ವಿ ಚಾ ರ ವರ್ತಕರಲ್ಲಿ ಅಪಪ್ರಚಾರಮಾಡಿ ಮಾನಹಾನಿಯನ್ನುಂಟುಮಾಡಬಹುದು ..... ಆಗೇನು ಮಾಡುವುದು? ಬದಲಾಗಿ, ತಾನೇ ಅವನನ್ನು ಇಕ್ಕಟ್ಟಿನಲ್ಲಿ ಸಿಲುಕಿಸಿ ದರೋ? ಅವನಾಗಿ ಪ್ರ ಸ್ತಾ ಪಿ ಸು ವು ದ ಕ್ಕೆ ಮುನ್ನ ತಾನೇ ಅವನನ್ನು ಪ್ರಶ್ನಿಸಿದರೋ?' ಪಾಪದ ಭೀತಿ ಇದ್ದವರು, ಪರಪೀಡೆಯು ನ ಡ ತೆ ಗೆ ಸರಿಬಂದದ್ದಲ್ಲವೆಂದರಿತವರು, ತಾವಾಡುವ ಮಾ ತ ನ್ನು ತುಲನಮಾಡಿ ಆಡುತ್ತಾರೆ. ಆದರೆ ಪೀಟರ್ ನಡತೆಯ ನಿಯಮಗಳಿಗೆ ಸಿಲುಕಿಬಿದ್ದವನಲ್ಲ. ಅವನ ಬುದ್ಧಿ ಪಾದರಸದಂತೆ ಚುರುಕಾಗಿ ಪ್ರವಹಿಸುತ್ತಿತ್ತು. ಸ್ಯಾಮ್ಯುಯಲ್ಲ ನನ್ನು ಕಂಡು ಅವನು ಕೇಳಿಯೇ ಕೇಳಿದ. ಪೀಟರನ ಎದೆಗಾರಿಕೆಯನ್ನು ಮೆಚ್ಚಬೇಕು!

"ಇದೇನು ಸ್ಯಾಮ್ಯುಯಲ್! ಇಷ್ಟೊಂದು ಗೊಬ್ಬರಹಾಕಿ, ನೀರು ಹಾಯಿಸಿ ಆರೈಕೆಮಾಡಿದರೂ ಬೆಳೆಯುವ ಸೇಬು ದ್ರಾಕ್ಷಿಗಳು ಇಷ್ಟೇನೇ? ಆ ದಿ ನ ಪೇಟೆಯಲ್ಲಿ ಆಬಟ್‌ರವರು ಹೇಳಿದರು: ಅವರ ತೋಟದ ವಿಸ್ತೀರ್ಣ ನಮ್ಮದರಲ್ಲಿ ಅರ್ಧಮಾತ್ರ ಇದೆಯಂತೆ! ಫಸಲಿನ ಬರುವಳಿ ನಮ್ಮದಕ್ಕೆ ಎರಡರಷ್ಟಿದೆಯಂತೆ. ನನಗೆ ಬಹಳ ನಷ್ಟವಾಗುತ್ತಿದೆಯಯ್ಯಾ! ನಿನ್ನನ್ನು ನೋಡಿದರೆ ನಿರ್ವಿಚಾರನಾಗಿದ್ದೀಯೆ. ಏನು ಹೇಳುತ್ತೀಯೆ?"

ಪೀಟರನು ಸ್ಯಾಮ್ಯುಯಲ್ಲನನ್ನು ಕೇ ಳಿ ದ ಪ್ರಶ್ನೆಯನ್ನು ಬೇರಾವ

ಗುತ್ತಿಗೆಗಾರನನ್ನಾದರೂ ಕೇಳಿದ್ದರೆ ಅವನು ಅದಕ್ಕೇನು ಪ್ರತ್ಯುತ್ತರವನ್ನು ಹೇಳುತ್ತಿದ್ದನೋ ತಿಳಿಯದು. ಆದರೆ ಸ್ಯಾಮ್ಯುಯಲ್ಲನು ಸರಳ ಸ್ವಭಾವಿ; ಮರುಳತನದಿಂದಲೂ, ಧೂರ್ತತನದಿಂದಲೂ ದುರುತ್ತರವನ್ನು ನುಡಿಯಲಾರ; ಅವನು ಯಾವ ತಪ್ಪನ್ನೂ ಮಾಡಲಿಲ್ಲ; ಅವನ ಮನಸ್ಸು ನಿರ್ಮಲವಾಗಿದೆ. ಆದರೂ ಅವನು ಅಪವಾದಕ್ಕೆ ಹೆದರುತ್ತಿದ್ದನು. ಅಡಿಗಡಿಗೆ ಪೀಟರನು ತನ್ನನ್ನು ಸೂಜಿಯಲ್ಲಿ ಚುಚ್ಚುವಂತೆ ಕೇಳುತ್ತಿದ್ದ ಆ ಏಕಮಾತ್ರ ಪ್ರಶ್ನೆಗೆ ಸಹನೆಯಿಂದ, ಸಭ್ಯತೆಯಿಂದ, ಸ್ವಾಮಿನಿಷ್ಠನಾದ ಸ್ಯಾಮ್ಯುಯಲ್ಲನು ಸಾವಧಾನವಾಗಿ ಸಮಾಧಾನ ಹೇಳುತ್ತಿದ್ದನು :

"ನನ್ನ ಕೆಲಸದಲ್ಲಿ ಲೋಪವಿಲ್ಲ ಧಣಿಗಳೇ! ನಾನಾಗಲಿ, ನನ್ನವ ರಾಗಲಿ, ತಮ್ಮ ತೋಟದಲ್ಲಿ ಒಂದು ಹಣ್ಣನ್ನಾದರೂ ಕಿತ್ತು ತಿಂದವರಲ್ಲ. ಬೆಳೆದದ್ದೆಲ್ಲ ತಮ್ಮ ತೋಟದಲ್ಲೆ, ತಮ್ಮ ಕಣ್ಣೆದುರಿನಲ್ಲೆ ಇದೆ."

"ಇದೆಲ್ಲ ಯಾತರ ಮಾತಯ್ಯ! ಚೆನ್ನಾಗಿದೆ ನಿನ್ನ ಉತ್ತರ." —ಪೀಟರನ ಬೆದರಿಕೆ.

"ಧಣಿಗಳೇ! ಬಡವನಮೇಲೆ ಕೋಪ ಮಾಡಬಾರದು."

"ಕೋಪದ ಮಾತಿರಲಿ; ಕೇಳಿದ ಪ್ರಶ್ನೆಗೆ ಉತ್ತರ ಹೇಳು."

"ನಾನು ವಂಚನೆಯಿಲ್ಲದೆ ಬೇಸಾಯಮಾಡುತ್ತಿದ್ದೇನೆ. ಬೆಳಸು ಕಡಿಮೆಯಾದರೆ ನನ್ನ ಪಾಲೂ ಕಡಿಮೆಯಾಗುವುದೆಂದು ನಾನು ಬಲ್ಲೆ."

"ಹಾಗಿದ್ದೂ ಬೆಳಸು ಕಡಿಮೆಯಾಗಲು ಕಾರಣ?"

"ನನ್ನ ವಿಚಾರಗಳು ಡೇನಿಯಲ್ಲನಿಗೆ ಗೊತ್ತು; ಅವನನ್ನು ಕೇಳಿ. ನಾನು ಸತ್ಯವಾಗಿ ನುಡಿಯುತ್ತೇನೋ ಇಲ್ಲವೋ ಅವನೇ ಹೇಳಬಲ್ಲ."

"ನಿನಗೆ ಡೇನಿಯಲ್ಲನು ಸಾಕ್ಷಿಯೋ? ಅವನನ್ನೇನು ಕೇಳುವುದು? ನೀನು ಮಾಡುವುದನ್ನು ಅವನು ಸರಿಯಾಗಿ ಕಣ್ಣಿನಲ್ಲಿ ನೋಡಲಾರ,

ನೀನಾಡುವುದನ್ನಂತೂ ಅವನು ಕಿವಿಯಿಂದ ಕೇಳಲಾರ. ಈ ಸಾಕ್ಷಿಗಳೊಂದೂ ಬೇಡ ಸ್ಯಾಮ್ಯುಯಲ್ !"

ಪೀಟರನು ತೋಟಗಾರನನ್ನೊಂದು ಬಗೆಯಾಗಿ ದಂಡಿಸುವಂತೆ ಬೆದರಿಸಿದನು. ಆದಕ್ಕವನು ಹೇಳಿದ್ದೇನು ?

"ಡೇನಿಯಲ್ಲನ ಮಾತು ಹಾಗಿರಲಿ ಧಣಿಗಳೇ ! ದೇವರೊಬ್ಬನಿಲ್ಲವೇ? ಯಾರು ನೋಡಲಿ ಯಾರು ಬಿಡಲಿ—ಅವನು ನಮ್ಮೆಲ್ಲರ ಕೆಲಸಗಳನ್ನು ಎಚ್ಚತ್ತು ನೋಡುತ್ತಿರುವನಲ್ಲವೆ? ಅವನನ್ನು ನಂಬಿದಲ್ಲಿ ನಾವು ನಮ್ಮ ಅಂತರಂಗವನ್ನು ಶುದ್ಧಿಗೊಳಿಸಿಕೊಳ್ಳಬೇಕಲ್ಲವೆ ? ಪರಮಾತ್ಮನನ್ನು ವಂಚಿಸಲು ಸಾಧ್ಯವೇ ಪ್ರಭು ?"

ಸ್ಯಾಮ್ಯುಯಲ್ಲನಾಡಿದ ಮಾತು ನಿಸ್ಪೃಹವಾಗಿದ್ದಿತು ; ಅದನ್ನು ಕೇಳಿದ ಯಾವ ವಂಚಕನಿಗಾದರೂ ಗಂಟಲಲ್ಲಿ ಸೀಸವಗಟ್ಟಿ ಸಿಲುಕಿದಂತಿತ್ತು. ಹಾಗಾಗಿ ಅವನ ಬಾಯಿಂದ ಮಾತುಗಳೇ ಹೊರಡುತ್ತಿರಲಿಲ್ಲ. ಆದರೆ ಈ ತೆರನಾದ ತೊಡಕುಗಳನ್ನು ಚತುರನಾದ ಪೀಟರನು ಎಂದೋ ಗೆದ್ದಿದ್ದನು. ಅವನ ಮನಸ್ಸಾಕ್ಷಿಯೂ ಬಲಹೀನವಾಗಿದ್ದಿತು. ಅವನು ಸ್ಯಾಮ್ಯುಯಲ್ಲನನ್ನು ಕಂಡು ಹೇಳಿದನು :

"ಸ್ಯಾಮ್ಯುಯಲ್ ! ಪರಮಾತ್ಮನ ಮಾತು ಹಾಗಿರಲಿ ; ನಾನು ಕೇಳುವ ಪ್ರಶ್ನೆಗೆ ಅದೇನೇ ಪ್ರತ್ಯುತ್ತರ ? ತೋಟವು ನಿನ್ನದೆಂಬ ಭಾವನೆಯು ನಿನ್ನ ಮನಸ್ಸಿನಲ್ಲಿ ಉದಿಸಿದರಲ್ಲವೆ ಆಗೆಲ್ಲವೂ ಸರಿಹೋಗಬೇಕಾದರೆ ?"

ಆಗಬಹುದು ಧಣಿಗಳೇ !"

ಪಾಪ ! ಬಡ ತೋಟಗಾರನೇನು ಬಲ್ಲ ಪೀಟರನ ಹಂಚಿಕೆಯನ್ನು ! ಬಾಯಿಬಡಿವ ಬಂಡವಾಳಗಾರರು ಬಡಿದಾಟಕ್ಕೆ ನಿಂತಾಗ, ಬಡಪೆಟ್ಟಿಗೆ ಸೋಲದಾಗ, ಬಡಸ್ಯಾಮ್ಯುಯಲ್ಲನಂತಹವರು ನಿಂತಲ್ಲಿ ನರ್ತನಮಾಡಿ ಯಾರು. ಅಂತೂ, ತೋಟಗಾರನು 'ಪರಮಾತ್ಮ' ಎನ್ನುವುದಕ್ಕೂ

ಪೀಟರನು 'ತೋಟವು ನಿನ್ನದೆಂಬ ಭಾವನೆಯು ನಿನ್ನ ಮನಸ್ಸಿನಲ್ಲಿ ಹುಟ್ಟಿಪರಲ್ಲವೆ ?' ಎನ್ನುವುದಕ್ಕೂ ಸರಿಹೋಯಿತು. ಅರ್ಥವಾಗದ ಮಾತು! ಆಡಿದವರಿಗೂ ಅರ್ಥವಾಗದ ಮಾತು! ಗೂಢಾರ್ಥವನ್ನು ಒಳಗೊಂಡ ಮಾತು! ಅದು ಒಮ್ಮೊಮ್ಮೆ ಬಾಯಿಂದ ಉದುರುತ್ತದೆ. ಉದುರಿದಾಗ ಬರಿಯ ಮಾತಿನಂತೆ ಕಾಣುತ್ತದೆ. ಆದರೆ ಆರಿಸಿಕೊಂಡಾಗ ಅದೇ ಹಿರಿಯ ಮುತ್ತಾಗುತ್ತದೆ. ಅವರಿಬ್ಬರ ಬಾಯಲ್ಲಿ ಪರಮಾತ್ಮನೇ ಆ ಮಾತುಗಳನ್ನು ಆಡಿಸಿರಬಾರದೇ?

ತೋಟದಲ್ಲಿ ಬೆಳೆದುಬಂದ ಹಣ್ಣುಹಂಪಲನ್ನೂ, ಕಾಯಿಪಲ್ಯಗಳನ್ನೂ ಸ್ಯಾಮ್ಯುಯಲ್ಲನೂ ಅವನ ಕುಟುಂಬದವರೂ ಪೇಟೆಯಲ್ಲಿ ಮಾರಿ ಪೀಟರನ ಕೈಯಲ್ಲಿ ತಂದುಕೊಡುತ್ತಿದ್ದರು. ತನಗೆ ಸೇರಬೇಕಾದ ಮುಕ್ಕಾಲು ಭಾಗವನ್ನು ಇರಿಸಿಕೊಂಡು ಕಾಲು ಭಾಗವನ್ನು ಸ್ಯಾಮ್ಯುಯಲ್ಲನಿಗೆ ಕೊಡುತ್ತಿದ್ದನು. ಒಂದೊಂದು ಸಲ ಹಣವನ್ನುಕೊಡುವಾಗಲೂ ಪೀಟರನು ಅವನನ್ನು ಎಚ್ಚರಿಸುತ್ತಲೇ ಇದ್ದನು :

"ಸ್ಯಾಮ್ಯುಯಲ್! ಬರಬರುತ್ತ ಬೆಳಸು ಕಡಿಮೆಯಾಗತೊಡಗಿದೆ. ಅದರಿಂದ ನಿನ್ನ ಭಾಗವೂ ಕಡಿಮೆಯಾದೀತು; ಎಚ್ಚರಿಕೆ!"

ಪೀಟರನು ಬೆದರಿಸಿದಾಗ ಸ್ಯಾಮ್ಯುಯಲ್ಲನು ಹೆದರುತ್ತಿದ್ದನು. ಆದರೆ ಅವನು ಹೆದರುತ್ತಿದ್ದುದು ತಪ್ಪುಮಾಡಿದೆನೆಂದಲ್ಲ; ತಪ್ಪು ಮಾಡದಿದ್ದರೂ ಅಪವಾದವು ಹೊತ್ತಿತಲ್ಲ—ನಾಲ್ಕು ಜನರ ದೃಷ್ಟಿಯಲ್ಲಿ ತನಗೆ ಅವಮಾನ ವಾದೀತಲ್ಲ—ಎಂದು. ಧಣಿಯು ಹೆದರಿಸಿದಾಗ "ನಾನೇನೂ ತಪ್ಪುಮಾಡಿಲ್ಲ; ಬಡವನಮೇಲೆ ದಯೆಯಿರಲಿ ಧಣಿಗಳೇ!" ಎಂದು ಕೈಜೋಡಿಸಿ ದೈನ್ಯದಿಂದ ಬೇಡುತ್ತಿದ್ದನು. ಓಡುವವರನ್ನು ಕಂಡರೆ ಅಟ್ಟುವುದು ಲೋಕದ ವಾಡಿಕೆ. ಸ್ಯಾಮ್ಯುಯಲ್ಲನು ಹೆದರಿದಂತೆಲ್ಲ ಪೀಟರನ ಬೆದರಿಕೆಯು ಹೆಚ್ಚುತ್ತಿತ್ತು. ತೋಟದ ಯಜಮಾನನು ಸುಮ್ಮಸುಮ್ಮನಾದರೂ ತನ್ನನ್ನು ದಂಡಿಸುತ್ತಿರುವ ನೆಂದು ತೋಟಗಾರನಿಗೆ ತಿಳಿಯದಾಯಿತು. ಅವನ ನಿಸ್ಪೃಹತೆಯೇ ಅವನ ಶತ್ರುವಿನಂತೆ ಪರಿಣಮಿಸಿತು.

ಇರಲಿ; ಸತ್ಯಕ್ಕೆ ಎಂದಿಗೂ ಚ್ಯುತಿಯಿಲ್ಲ--ಎಂದೆಣಿಸಿ ಸ್ಯಾಮ್ಯುಯಲ್ಲನು ಪೀಟರನ ಮನಸ್ಸಿಗೆ ತೃಪ್ತಿಯುಂಟಾಗಲಿ ಎಂದು ಆಗಿಂದಾಗ್ಗೆ ಹಳ್ಳಿಯಿಂದ ಕೋಳಿ ಮೊಟ್ಟೆಗಳನ್ನು ತಂದು ಅವನ ಮುಂದಿಡುತ್ತಿದ್ದನು. ಕ್ಷಣಕಾಲ ಅದರಿಂದ ಪೀಟರನ ಮನಸ್ಸಿಗೆ ಪ್ರೀತಿಯುಂಟಾಗುತ್ತಿತ್ತು. ಬಿಟ್ಟ ಬಂದು ದನ್ನು ಅವನು ಬಿಟ್ಟುಬಿಟ್ಟಾನೇ? ಆದರೇನು? ಹಸಿದ ಹುಲಿಗೆ ಒಮ್ಮೆ ಆಹುತಿ ಇಟ್ಟರೆ ಅದರಿಂದ ಅದು ಎಂದೆಂದಿಗೂ ತೃಪ್ತಿಹೊಂದ ಬಲ್ಲುದೇನು? ಹಸಿದಂತೆಲ್ಲ ಹುಲಿಗೆ ಆಹುತಿಯು ದೊರಕುತ್ತಲೇ ಇರಬೇಕು. ಇಲ್ಲದಿದ್ದರೆ ಹಸಿವು ಹೆಚ್ಚಿದಂತೆಲ್ಲ ಅದಕ್ಕೆ ಆತುರವೂ, ಆತುರದೊಂದಿಗೆ ಆವೇಶವೂ, ಕ್ರೋಧವೂ ಹೆಚ್ಚಾಗುವುದು. ತಾನಿದ್ದಲ್ಲೆ ಹುಲಿಗೆ ನಿರಾಯಾಸವಾಗಿ ಆಹುತಿಯು ದೊರೆಕುವುದಾದರೆ ಅದನ್ನು ಹೆಚ್ಚುಹೆಚ್ಚಾಗಿ ನಿರೀಕ್ಷಿಸುವುದು ಅದರ ವಾಡಿಕೆಯಾಗುತ್ತದೆ. ಅಂತೆಯೇ ಪೀಟರನ ಆಸೆಯೂ ಅಳವಿಲ್ಲದುದು. ಮೊದಮೊದಲು ಸ್ಯಾಮ್ಯುಯಲ್ಲನು ಮರ್ಯಾದಾರ್ಥವಾಗಿ ಮೊಟ್ಟೆಗಳನ್ನು ತನಗೆ ತಂದುಕೊಂಡುತ್ತಿದ್ದನು. ಆದರೆ ಅವೇ ಮೊಟ್ಟೆಗಳನ್ನು ಈಗವನು ವಾಡಿಕೆಯಾಗಿ ತಂದು ಕೊಡಬೇಕಾಗಿದ್ದಿತು. ತನ್ನಲ್ಲಿ ಸಾಕಷ್ಟು ಮೊಟ್ಟೆಗಳು ಸಿಕ್ಕದಿದ್ದರೆ ಅದನ್ನವನು ಕೊಂಡಾದರೂ ತಂದು ಕೊಡಬೇಕಾಗಿದ್ದಿತು. ಇಲ್ಲದಿದ್ದರೆ ಬೇರೆ ವಿಧಿಯಿಲ್ಲ. ಇದನ್ನು ಕಂಡು ಲ್ಯೂಸಿಯೂ ಆರ್ಥರನೂ ಕುಪಿತರಾದರು. ಅವರು ಆಡಿಗಡಿಗೆ ಸ್ಯಾಮ್ಯುಯಲ್ಲನನ್ನು ಕೇಳುತ್ತಲೇ ಇದ್ದರು:

"ಬಂಗಲೆ ಧಣಿಗೆ ಮೊಟ್ಟೆಗಳನ್ನು ತೆಗೆದುಕೊಂಡು ಹೋಗಿ ಕೊಡುವು ದಕ್ಕೆ ಮಿತಿಮೇರೆಗಳೇ ಇಲ್ಲವೆ? ನಾವು ಬಡವರು; ಮೊಟ್ಟೆಗಳನ್ನು ಮಾರಿ ಅಷ್ಟಿಷ್ಟು ಹೊಟ್ಟೆ ಹೊರೆದುಕೊಳ್ಳುತ್ತೇವೆ. ಅವರಿಗೇನು ಕಡಿಮೆ? ದುಡ್ಡು ಕೊಟ್ಟು ಕೊಂಡರೆ ಅವರಿಗೆ ದರಿದ್ರ ಸುತ್ತಿಕೊಳ್ಳುತ್ತದೆಯೆ? ಮೊಟ್ಟೆಗೊಂದು ಕೋಳಿಮರಿಯಾದೀತೆಂದು ಅವರಿಗೆ ತಿಳಿಯಬೇಡವೆ? ಹೀಗಾದರೆ ನಮ್ಮಲ್ಲಿ ಕೊನೆಗೆ ಕೋಳಿಗಳೇ ಇಲ್ಲದಂತಾಗುತ್ತವೆ! ಆಗೇನು ಮಾಡುವುದು?"

ಮೊಟ್ಟೆಗಳ ವಿಚಾರವಾಗಿ ಒಮ್ಮೆ ಸ್ಯಾಮ್ಯುಯಲ್ಲನಿಗೂ ಅವನ ಹೆಂಡತಿ

ಲ್ಯಾಸಿಗೂ ಎಂಟು ದಿನಗಳು ಮಾತುಕತೆಗಳೇ ನಿಂತು ಹೋಗಿದ್ದವು. ಬಡಕುಟುಂಬದಲ್ಲಿ ತನ್ನಿಂದುಂಟಾದ ಕಷ್ಟನಷ್ಟಗಳನ್ನು ಪೀಟರನೇನು ಬಲ್ಲ? ಇಷ್ಟಾದರೂ ಅವನು ತೋಟಗಾರನನ್ನು ಬೆದರಿಸುವುದನ್ನು ಬಿಡಲೇ ಇಲ್ಲ. ಸ್ಯಾನ್ಯುಯಲ್ಲನು ತನ್ನ ಕುಟುಂಬದವರ ಆಕ್ಷೇಪಣೆಯನ್ನು ತಡೆಯುವಂತಿರಲಿಲ್ಲ. ಧಣಿಯ ಬೆದರಿಕೆಯನ್ನೂ ಎದುರಿಸುವಂತಿರಲಿಲ್ಲ. ಫಲಕ್ಕೆ ಬಂದ ಬೆಳಸನ್ನು ಅವನು ಹೇಗೆ ಬಿಟ್ಟು ಬಿಡಲಾದೀತು?



ಪ್ರಕರಣ ೫.

## ನೆಲ ಹೋಗಿ

## ನಾಯಿ ಬಂತು !

ಸ್ಯಾಮುಯ್ಯಲ್ಲನಿಗೆ ಹಳ್ಳಿಯಲ್ಲಿ ಸ್ವಂತ ನೆಲವಿದ್ದಿತು. ಅದರೊಂದಿಗೆ ಅವನು ಒಬ್ಬಿಬ್ಬರ ನೆಲವನ್ನೂ ಸಾಗುವಳಿ ಮಾಡುತ್ತಿದ್ದನು. ಲ್ಯೂಸಿಯು ಹತ್ತಿಪ್ಪತ್ತು ಕೋಳಿಗಳನ್ನು ಸಾಕಿದ್ದಳು. ಆಗಾಗ ಮೊಟ್ಟೆಗಳನ್ನೂ ಮರಿಗಳನ್ನೂ ಪೇಟೆಯಲ್ಲಿ ಮಾರಿಕೊಂಡು ಬರುತ್ತಿದ್ದಳು. ಅವರದೊಂದು ಸ್ವಂತ ಕೈತೋಟವಿದ್ದಿತು. ಅದರಲ್ಲಿ ಬೆಳೆದು ಬಂದ ಹಣ್ಣು ಹಂಪಲುಗಳಿಂದಲೂ ಅಷ್ಟಿಷ್ಟು ಹಣವು ಬರುತ್ತಿದ್ದಿತು. ಇದರಮೇಲೆ ಬಂಗಲೆಯ ತೋಟದ ಬೆಳಸಿನಲ್ಲಿ ಕಾಲುಪಾಲು ಬೇರೆ. ಇಷ್ಟಾದರೂ ಇವರ ಬಡತನವು ಹರಿಯಲೇ ಇಲ್ಲ. ಸ್ಯಾಮ್ಯುಯಲ್ಲನ ಕುಟುಂಬವೇನೂ ಕಿರಿಯದಾದುದಲ್ಲ. ಅವನು, ಲೂಸಿ, ಆರ್ಥರ್, ಹಿರಿಯಮಗಳು ಮೇರಿ, ಅವಳ ಗಂಡ ವಿಲಿಯಂ, ಇನ್ನುಳಿದ ಮಕ್ಕಳು ರೋಬಸ್ಟಾ, ನ್ಯಾನ್ಸಿ, ಜೇನ್, ಜೋ, ಜಿಮ್ಮಿ, ನೆವ್ವಿಲ್, ಜಾನ್, ಸ್ಟೀಫೆನ್, ಇವರು; ಮೇಲ್ಪಟ್ಟು ಬೇಸಾಯದ ಸಹಾಯಕ್ಕೆಂದು ಇರಿಸಿಕೊಂಡಿದ್ದ ಆಳುಗಳು--ಪಾಲ್ ಮತ್ತು ಪೆರ್ಸಿಲೀ. ಇಷ್ಟು ಜನರ ಹೊಟ್ಟೆ ಬಟ್ಟೆಗಳ ಕರ್ಚು ನಡೆಯುವುದೇನು ಸುಲಭವೇ ?

ಪಟ್ಟಣದಲ್ಲಿ ಚಾರಲ್ಸ್ ಎಂಬೊಬ್ಬ ದಿನಸಿ ವರ್ತಕನಿದ್ದನು. ತಾನು ಬೆಳೆದಿದ್ದರಲ್ಲಿ ಹೆಚ್ಚುವರಿಯಾಗಿ ನಿಂತ ದವಸಗಳನ್ನು ಸ್ಯಾಮ್ಯುಯಲ್ಲನು ಚಾರಲ್ಸನಿಗೇ ಮಾರಿ ತನಗೆ ಬೇಕಾದ ಸಾಮುಗ್ರಿಗಳನ್ನು ಅವನಲ್ಲೇ ಕೊಳ್ಳು

ತ್ತಿದ್ದನು. ಸಾಲದುವಕ್ಕೆ ಅವನಿಂದಲೇ ಅಷ್ಟಿಷ್ಟು ಹಣವನ್ನು ಆಗಿಗಡಿಗೆ ಕೈಸಾಲವಾಗಿ ತರುತ್ತಿದ್ದನು. ಚಾರಲ್ಸ್‌ನೇನೂ ಉದಾರಿಯಲ್ಲ. ಸರಳ ಸ್ಯಾಮ್ಯುಯಲ್ಲನಿಗೆ ಅವನು ಕೊಟ್ಟುದೆಷ್ಟೋ, ಲೆಕ್ಕದಲ್ಲಿ ಬರೆದುಕೊಂಡುದು ಎಷ್ಟೋ ದೈವವೇ ಬಲ್ಲುದು. ವರ್ತಕನ ಬಳಿ ಬಡಹಳ್ಳಿಗನು ತಂದುದೆಷ್ಟೋ ತೀರಿಸಿದುದೆಷ್ಟೋ ತಿಳಿಯದೆ ಅನೇಕವೇಳೆ ತತ್ತಳಿ ಸುತ್ತಿದ್ದನು. ಹೀಗಾಗಿ ಆರೇಳು ವರ್ಷಗಳಿಂದ ಚಾರಲ್ಸ್‌ನಿಂದ ತಂದ ಸಾಲಗಳು ಎಷ್ಟು ತೀರಿಸಿದರೂ ತೀರಲೇ ಇಲ್ಲ. ಬದಲಾಗಿ ಸ್ಯಾಮ್ಯುಯಲ್ಲನ ಸಾಲದ ಹೊರೆಯು ಬೆಳೆಯುತ್ತಲೇ ಬಂದಿತು. ಅಂತೂ ಆಗಿಂದಾಗ ಚಾರಲ್ಸ್ ಕೊಟ್ಟ ಸಾಮಾನುಗಳ ಬೆಲೆ, ಕೈ ಸಾಲ, ಕಂತುಸಾಲ, ಅಡಮಾನದಸಾಲ ಇವೆಲ್ಲದರ ಮೊತ್ತಕ್ಕೆ ಸಲ್ಲಬೇಕಾದ ಸಾದಾಬಡ್ಡಿ, ಚಕ್ರಬಡ್ಡಿ ಇವು ಬೆಳೆದುಹೋದುವು. ಇದೊಂದುಕಡೆ ಇರಲಿ ; ಸ್ಯಾಮ್ಯುಯಲ್ಲನು ತನಗೆ ತಂದು ಮಾರುತ್ತಿದ್ದ ದವಸಗಳನ್ನು ವರ್ತಕನು ಕಮ್ಮಿ ಬೆಲೆಗೆ ಉತ್ತಾರಹಾಕಿಕೊಳ್ಳುತ್ತಿದ್ದನು. ಆಗಾಗ ಅವನು ರೊಕ್ಕವಾಗಿ ತಿರುಗಿಸಿ ಕೊಟ್ಟುದನ್ನು ಬಡ್ಡಿ ಲೆಕ್ಕಕ್ಕೆ ಬರೆದುಬಿಡುತ್ತಿದ್ದನು. ಆದುದರಿಂದ ಮೂಲ ಸಾಲವು ಮುಟ್ಟಿಗೆ ಕಡಿಮೆಯಾಗುತ್ತಲೇ ಇರಲಿಲ್ಲ. ಬದಲಾಗಿ ಅದು ಬೆಳೆಯುತ್ತಲೇ ಇದ್ದಿತು. ತನ್ನಂತೆಯೇ ವರ್ತಕನು ಸತ್ಯವಂತನೆಂದೇ ಸ್ಯಾಮ್ಯುಯಲ್ಲನು ನಂಬಿದ್ದನು. ಅವನಿಗೆ ಲೆಕ್ಕ ತಿಳಿಯದು. ಪಟ್ಟಣದ ವರ್ತಕನು ಹಳ್ಳಿಗರನ್ನು ಮೋಸಮಾಡಿಯಾನು ಎಂದು ಅವನು ನಂಬಲೇ ಇಲ್ಲ. ಹೇಗೆ ನಂಬಿಯಾನು ಪಾಪ ? ' ವರ್ತಕರೆ ! ' ಎಂದು ಸ್ಯಾಮ್ಯುಯಲ್ಲನು ಬಾಯಿಬಿಚ್ಚುತ್ತಿದ್ದಂತೆಯೇ ' ಎಷ್ಟಯ್ಯ ಬೇಕಾಗಿತ್ತು ? ' ಎಂದು ಕೇಳುತ್ತಿರಲಿಲ್ಲವೆ ಅವನು ?

ಆದರೆ ಈ ರೀತಿ ಸ್ಯಾಮ್ಯುಯಲ್ಲನು ಕೇಳಿ ಮುಗಿಸುವುದರೊಳಗೆ ' ತೆಗೆದುಕೊಳ್ಳಯ್ಯಾ ' ಎಂದು ವರ್ತಕನು ಕೊಡುತ್ತಿದ್ದ ಕಾಲವು ಮುಗಿದು ವರ್ಷಕ್ಕೆ ಮೇಲಾಗಿತ್ತು. ಈಗೇನಿದ್ದರೂ ' ನೀಕೊಡೆ ನಾಬಿಡೆ ' ಎನ್ನುವಂತೆ ಸ್ಯಾಮ್ಯುಯಲ್ಲನು ಕೊಡಿ ಎಂದು ದೈನ್ಯದಿಂದ ಬೇಡುವುದು, ' ಈಗಿಲ್ಲ— ಇಲ್ಲವೇ ಇಲ್ಲ ' ಎಂದು ವರ್ತಕನು ನಿರ್ದಾಕ್ಷಿಣ್ಯವಾಗಿ ಹೇಳಿಬಿಡುವುದು ಈ

ಘಟ್ಟಕ್ಕೆ ಇಳಿದಿದ್ದಿತು—ಇವರಿಬ್ಬರ ನಡುವಿನಲ್ಲಿದ್ದ ವ್ಯವಹಾರ. ಬಡಹಳ್ಳಿಗನಿಗೆ ಹಣದ ಮುಗ್ಗಟ್ಟು ಹೆಚ್ಚಿದಂತೆಲ್ಲ ಚಾರಲ್ಸ್‌ನ ತಗಾದೆ ಮಿತಿಮೀರುತ್ತ ಬಂದಿತು. ಸಾಲಕೊಡುವವನ—ಸಾಲತರುವವನ ನಡುವೆ ಒಂದು ತೆಳ್ಳನಾದ ಬೆಟ್ಟವು ಒಂದೊಂದು ಸಲ ಬೆಳೆದು ಬಿಡುತ್ತದೆ. ಆ ಬೆಟ್ಟವನ್ನು ಕುಟ್ಟಿ ಕೆಡವಲು ಕೊಟ್ಟವರು ಕೊಂಡವರು ಇಬ್ಬರೂ ಪ್ರಯತ್ನಿಸುತ್ತಾರೆ. ಆದರೆ ಕೊಟ್ಟವನು ನಿರಾಶನಾದಂತೆಲ್ಲ ತಂದವನ ಶಕ್ತಿಯು ಕುಂದುತ್ತಲೇ ಬರುತ್ತದೆ. ಕೆಲವು ವೇಳೆ ಕೊಟ್ಟವನು ಕುಟ್ಟಿಕುಟ್ಟಿ ತಂದವನ ಸತ್ವವನ್ನು ಹೀರಿ ಬಿಡುತ್ತಾನೆ. ತೆತ್ತರಲ್ಲವೆ ತಂದ ಸಾಲ ತೀರುವುದು? ತಂದವನು 'ಇಲ್ಲ' ಎಂದಂತೆಲ್ಲ ಕೊಟ್ಟವನು 'ತಾ, ತಾ, ಈಗಲೇ ತಾ' ಎಂದು ಅಬ್ಬರಿಸಿ ಬೊಬ್ಬೆ ಎಬ್ಬಿಸುತ್ತಾನೆ. ನಗುಮುಖಗಳು ಸೊಟ್ಟಮೋರೆಗಳಾಗುತ್ತವೆ; ಹಾಲು ಹಾಲಾಹಲವಾಗುತ್ತದೆ; ಸವಿ ಕಹಿಯಾಗುತ್ತದೆ; ರಸ ಕಸವಾಗುತ್ತದೆ.

ಈಗ ವಾಡಿಕೆಯಂತೆ ವರ್ತಕನು ಸ್ಯಾಮ್ಯುಯಲ್ಲನನ್ನು ನೋಡಿ ಹೆದರಿಸಿ ಬೆಂಡಾಗಿಸುವುದು ಹೆಚ್ಚಾಯಿತು.

"ಏನಯ್ಯಾ! ನಿನ್ನಿಂದ ಇನ್ನೂ ಇಷ್ಟು ಹಣ ಬರಬೇಕು .... ... .... ಅದನ್ನು ಕೊಟ್ಟುಬಿಡು. ಈಗ ಅವಸರವಾಗಿ ಬೇಕಾಗಿದೆ. ಬಂಡವಾಳವಿಲ್ಲದೆ ಅಂಗಡಿ ಬಾಗಿಲು ಮುಚ್ಚಿಬಿಡುವಂತಾಗಿದೆ. ನಿನಗೆಷ್ಟು ಹೇಳಿದರೂ ತಲೆಗೇ ಹಾಕಿಕೊಳ್ಳುವುದಿಲ್ಲ. ಏನು ಹೇಳುತ್ತಿ? ಇವತ್ತು ಹೇಳಿಬಿಡು. ನನ್ನಿಂದ ಇನ್ನು ತಡೆಯಲು ಸಾಧ್ಯವಿಲ್ಲ."

ವರ್ತಕನ ಮಾತು ದಿನೇ ದಿನೇ ಕಠೋರವಾಗುತ್ತಿತ್ತು. ದಾರಿಗಾಣದೆ ಸ್ಯಾಮ್ಯುಯಲ್ಲನೂ ಹೇಳುತ್ತಿದ್ದ:

"ಈಗೆಲ್ಲಿದೆ ನನ್ನ ಬಳಿ ವರ್ತಕರೇ! ಸುಗ್ಗಿಯ ಬೆಳೆ ಬರಲಿ; ತೋಟದ ಗುತ್ತಿಗೆ ಪಾಲು ಬರಲಿ; ಕೊಟ್ಟು ತೀರಿಸಿಬಿಡುತ್ತೇನೆ. ಇನ್ನು ಇಟ್ಟುಕೊಳ್ಳುವುದಿಲ್ಲ. ಈ ಸಲ ಒಂದೆರಡು ತಿಂಗಳು ಮನ್ನಿಸಿ. ಬಂದ

ಹಣ ಹೊಟ್ಟೆ ಬಟ್ಟೆಗಳಿಗೇ ಎಟಕುತ್ತಿಲ್ಲ."

ಒಮ್ಮೆ ವರ್ತಕನ ಪರಾತು ಮಿತಿ ಮಿಂಚಿಹೋಯಿತು. ದುಃಖದಿಂದ ಸ್ಯಾಮ್ಯುಯಲ್ಲನ ಕಣ್ಣಲ್ಲಿ ನೀರು ತುಂಬಿಹೋಯಿತು. ಅವನ ಕಂಠವು ಬಿಗಿಯಿತು; ದೇಹವು ನಡುಗಿತು. ಚಾರಲ್ಸನು ಸ್ಯಾಮ್ಯುಯಲ್ಲನನ್ನು ಕುರಿತು ಕೇಳಿದ:

"ಎಲ್ಲಯ್ಯಾ! ಹೋದ ವಾರವೇ ತಂದು ಕೊಡುತ್ತೇನೆಂದು ಹೇಳಿದ ದೊಡ್ಡಮನುಷ್ಯ ನೀನು—ಇವತ್ತು ಬಂದಿದ್ದೀಯೆ. ಎಲ್ಲಿ? ತೆಗಿ; ಎಷ್ಟು ತಂದಿದ್ದೀಯೋ ನೋಡೋಣ."

"ಏನನ್ನು ತರಲಿ ವರ್ತಕರೆ? ನಮ್ಮ ಜಿಮ್ಮಿ ಮೊನ್ನೆ ಜ್ವರ ಬಂದು ಸತ್ತುಹೋದ. ಅವನನ್ನು ಮಣ್ಣು ಮಾಡುವುದಕ್ಕೆ ಮನೆಯಲ್ಲಿದ್ದ ಉಣ್ಣೆಯ ಉಡುಪುಗಳನ್ನು ಫಿಲಿಪ್ಸನ ಬಳಿ ಒತ್ತೆಯಿಟ್ಟು ನಾಲ್ಕು ಹೊನ್ನು ತಂದದ್ದಾಯಿತು. ಹೀಗಿದೆ ನಮ್ಮ ಸ್ಥಿತಿ!"

ಚಾರಲ್ಸನು ಕೇಳಿಯಾನೇ? ಅವನೆಂದ:

"ಇದೋ; ಇನ್ನು ನನ್ನಿಂದ ನಿಜವಾಗಿಯೂ ತಡೆಯಲು ಸಾಧ್ಯವಿಲ್ಲ. ನನಗೆ ಹಣ ಅತ್ಯವಸರವಾಗಿ ಬೇಕು; ಇವತ್ತೇ ಬೇಕು; ಈ ಕ್ಷಣದಲ್ಲೇ ಬೇಕು. ಇಷ್ಟು ಮರುಮಾತನಾಡು. 'ಇಲ್ಲ' ಎಂದರೆ ಈ ಸ್ಥಳ ಬಿಟ್ಟು ನೀನು ಕದಲುವಂತಿಲ್ಲ; ತಿಳಿಯಿತೇ?"

"ಹೇಳುವುದೇನು ವರ್ತಕರೇ? ಜಿಮ್ಮಿ ಸಾಯದಿದ್ದರೆ..........."

"ಆ ಮಾತು ಮಟ್ಟಿಗೆ ಕೆಲಸಕ್ಕೆ ಬಂದದ್ದಲ್ಲ. ಜಿಮ್ಮಿ ಸಾಯುವುದಕ್ಕೆ ನಾನು ಕಾರಣನೇ?"

"ಹಾಗೆಂದು ಹೇಳಲಿಲ್ಲ ವರ್ತಕರೇ! ಮನೆಯವರು ಯಾರೂ ಪೇಟೆ ವ್ಯಾಪಾರಕ್ಕೆ ಹೋಗಲಾಗಲಿಲ್ಲ. ಮೇಲಾಗಿ.........."

"ಈಗ ನೀನು ಹೇಳುವುದಾದರೂ ಏನಯ್ಯಾ?"

" ಹೇಳುವುದೇನು? ಕೈಯಲ್ಲಿಲ್ಲ. ಇದ್ದಿದ್ದರೆ ಕೊಟ್ಟು ಬಿಡುವೆ. ಯಾವುದೂ ಬರಲಿಲ್ಲ. ಇಲ್ಲದ್ದಕ್ಕೆ ಏನು ಮಾಡಲಿ? "

" ಹಾಗೆಂದರೆ ಹೊಟ್ಟೆ ತುಂಬುತ್ತದೇನಯ್ಯಾ? "

" ಏನು ಮಾಡಬೇಕೆನ್ನುವಿರಿ ವರ್ತಕರೇ?........ಈ ವೇಳೆಗೆ ಎಷ್ಟೋ ತೆಗೆದೆ........ಕೊಟ್ಟೆ. "

"ಆಪೊತು ಈಗ ಬೇಡ. ಕೊಟ್ಟದ್ದನ್ನು ನಾನು ಕೇಳಲಿಲ್ಲ. ಕೊಡದೆ ನಿಂತಿರುವುದಕ್ಕೆ ಏನು ಹೇಳುತ್ತಿ? ಹೇಳಬೇಕಾದುದನ್ನು ಸ್ಪಷ್ಟವಾಗಿ ಹೇಳಿ ಬಿಡು. "

" ಗಂಟಲು ಬಿಗಿದಿದೆ .........ಏನು ಹೇಳಲಿ ?"

" ಬಂಗಲೆ ಧಣಿಗಳನ್ನು ಕೇಳಿ ಸಾಲ ತೆಗೆದುಕೋ ; ಕೊಟ್ಟುಬಿಡು ..... ನನಗದನ್ನು. "

" ಬಡಸೆಟ್ಟಿಗೆ ಕೊಟ್ಟಾರೇ ಬಂಗಲೆ ಧಣಿಗಳು? "

" ಏತಕ್ಕೆ ಕೊಡಲಾರರು? ಅವರು ನಿನಗೆ ಕೊಡತಕ್ಕದ್ದಿದೆ ಎಂದಿದ್ದೆಯಲ್ಲ ? ಕೊಡದಿರಲು ಕಾರಣ ? "

" ಬೇಬಾಕಿಯಾಗಿ ಕೊಟ್ಟುಬಿಟ್ಟರೆ ನಾನು ಬೇರೆ ಗುತ್ತಿಗೆ ಹಿಡಿದು ಅವರನ್ನು ಬಿಟ್ಟು ಹೊರಟು ಹೋಗಿಬಿಡುವೆನೆಂಬ ಭಯ ಅವರಿಗೆ. "

" ಅದಕ್ಕಾಗಿ? "

" ಬಾಕಿ ನಿಲ್ಲಿಸಿಕೊಳ್ಳದೆ ಪೂರ್ತಿಯಾಗಿ ಕೊಡುವುದಿಲ್ಲ. "

" ಈಗೇನು ಮಾಡುವೆ ಸ್ಯಾಮ್ಯುಯಲ್ ? "

" ಅದನ್ನೇ ನಾನೂ ಯೋಚಿಸುತ್ತಿದ್ದೇನೆ ; ಬಗೆಹರಿಯಲಿಲ್ಲ. ಏನು ಮಾಡಲಿ ? "

" ಹಾಗಾದಲ್ಲಿ ನಿನ್ನ ನೆಲದಲ್ಲಿ ಅರ್ಧ ನನಗೆ ಮಾರಿಬಿಡು."

" ಮಾರಿ ...... ..... .. .. ? "

" ಹೋಗಿ ಕಣಿ ಕೇಳು ಎಲ್ಲಿಯಾದರೂ ! "

" ಕೋಪಿಸಬೇಡಿ ವರ್ತಕರೇ ! "

" ಕೋಪವೆಂತಹುದಯ್ಯಾ ? ನನ್ನ ಪರಿಸ್ಥಿತಿ ನಾನೇ ಬಲ್ಲೆ. ನಿನಗೇನು ಗೊತ್ತು ? ಹೋಗಲಿ; ಇನ್ನು ಹದಿನೈದು ದಿವಸ ವಾಯಿದೆ ತೆಗೆದುಕೋ. ಅದರನಂತರವೂ ಹಣಗಾಡಿಸಿದರೆ ನಾನು ಸುಮ್ಮನಿರಲಾರೆ. ಸ್ಪಷ್ಟವಾಗಿ ತಿಳಿದುಕೋ. ಆಮೇಲೆ ನನ್ನನ್ನು ನಿಷ್ಠೂರ ಪಡಿಸಬೇಡ."

ಹದಿನೈದು ದಿವಸಗಳ ವಾಯಿದೆಯೂ ಮುಗಿಯಿತು. ಆದರೆ ಬಡ ಸ್ಯಾಮ್ಯುಯಲ್ಲನು ಹಣಕ್ಕಾಗಿ ಒದ್ದಾಡಿ, ಕೈ ಸಾಗದೆ ಬಡವಾಗಿ ಹೋದ. ಒಂದು ದಿನ ವರ್ತಕನ ವರಾತು ಪ್ರಬಲವಾಯಿತು. ದಾರಿಗಾಣದೆ ಅವನು ತನ್ನ ನೆಲದಲ್ಲಿ ಅರ್ಧವನ್ನು ವರ್ತಕನಿಗೆ ಮಾರಲೇ ಬೇಕಾಯಿತು. ಆದರೆ ಲ್ಯೂಸಿಯೂ ಆರ್ಥರನೂ ಇದನ್ನು ಕೇಳಿ ವ್ಯಸನಾಕ್ರಾಂತರಾದರು. ' ಕೈಮೀರಿಹೋದುದಕ್ಕೆ ಚಿಂತಿಸಿ ಫಲವಿಲ್ಲ ' ಎಂದು ಸ್ಯಾಮ್ಯುಯಲ್ಲನು ಅವರನ್ನು ಸಂತೈಸಿದನು. ಹೇಗೋ ತನ್ನ ಸಾಲವು ತೀರಿಹೋಯಿತಲ್ಲ ಎಂಬುದೇ ಸ್ಯಾಮ್ಯುಯಲ್ಲನ ಸಂತೋಷ. ಆದರೆ ಎಂಟು ದಿವಸಗಳನಂತರ ವರ್ತಕನು ಅವನನ್ನು ಕುರಿತು ಮತ್ತೆ ಕೇಳಿದ :

" ಇನ್ನೂ ನಿನ್ನಿಂದ ಬಾಕಿ ಬರಬೇಕಾದ್ದಿದೆಯಯ್ಯ "

" ನೆಲಮಾರಿದಾಗ 'ತೀರಿತು' ಎಂದಿದ್ದಿರಿ. ಇನ್ನೆಂತಹ ಬಾಕಿ ವರ್ತಕರೇ ? "

" ಇರಲಿ ; ನೀನೇನು ಕಂಡೆ ಲೆಕ್ಕವನ್ನು ? ಇಷ್ಟೇ ನಿನಗೆ ತಿಳಿದಿದ್ದು ! "

ವರ್ತಕನ ಮಾತನ್ನು ಕೇಳಿ ಸ್ಯಾಮ್ಯುಯಲ್ಲನು ಬೆಚ್ಚಿಬೆದರಿದ. ಅವನು ತನ್ನನ್ನು ಮೋಸಮಾಡಿದ್ದಾನೆ ಎಂದು ಅವನಿಗೆ ಸ್ಪ ಷ್ಟ ವಾ ಗಿ ತಿಳಿಯಿತು. ಆದರೆ ತಾನು ವರ್ತಕನಿಂದ ತಂದುದೆಷ್ಟು? ಅವನಿಗೆ ಕೊಟ್ಟುದೆಷ್ಟು? ಕೊಡದೆ ಉಳಿಸುದೆಷ್ಟು? ಇವುಗಳೊಂದೂ ಖಚಿತವಾಗಿ ಅವನಿಗೆ ತಿಳಿಯ ದಾಯಿತು ಪಾಪ! ಅವನು ಅನಕ್ಷರಸ್ಥ; ಸರಳ ಸ್ವಭಾವಿ; ಸಹನಾಶೀಲ; ಎಲ್ಲರನ್ನೂ ನಂಬಿಬಿಡತಕ್ಕವನು. ಅವನೇನನ್ನು ಮಾಡಿಯಾನು? ಲೆಕ್ಕದ ವಿವರಗಳನ್ನು ಕೇಳಿದರೆ ವರ್ತಕನು ಬಾಯಿಬಡಿಯುತ್ತಾನೆ. ವರ್ತಕನನ್ನು ಕುರಿತ ತನ್ನ ಕಷ್ಟಗಳನ್ನು ಇತರರಲ್ಲಿ ಹೇಳಿಕೊಂಡರೆ ಅವನು ತನ್ನ ಮೇಲೆ ಕುಪಿತನಾದಾನು. ಅಷ್ಟಕ್ಕೇ ನಿಲ್ಲದೆ, ಮತ್ತಾವ ಕಷ್ಟಕ್ಕಾದರೂ ತ ನ್ನ ನ್ನು ಗುರಿಪಡಿಸಿಯಾನು—ನಿಂತಲ್ಲೆ ನರ್ತನ ಮಾಡಿಸಿಯಾನು......... ತನ್ನ ಉಳಿದ ನೆಲವನ್ನೂ ನುಂಗಿಕೊಳ್ಳಲು ನೂತನ ಹಂಚಿಕೆಯನ್ನು ಹೂಡಿಯಾನು ಎಂಬ ಭಯ ಬೇರೆ-ಅವನಿಗೆ.

ಅಂತೂ ವರ್ತಕನೊಂದಿಗೆ ಹೋರಾಡಲು ಹಳ್ಳಿಗನ ಮನಸ್ಸೊಪ್ಪಲಿಲ್ಲ. ಚಾರಲ್ಸನು ತಾನು ಸ್ಯಾಮ್ಯುಯಲ್ಲನಿಂದ ಕೊಂಡುಕೊಂಡ ನೆ ಲ ವ ನ್ನು ಸಾಗುವಳಿ ಮಾಡಲು ಅವನಿಗೇ ಗುತ್ತಿಗೆಯ ಮೇಲೆ ಬಿಟ್ಟುಕೊಟ್ಟಿದ್ದನು. ಅಂತೂ ಬಡ ಸ್ಯಾಮ್ಯುಯಲ್ಲನ ಗತಿ ಹೀಗಾಯಿತು. ಚಾರಲ್ಸನಾದರೂ ತಾನು ಬಹಳ ಉದಾರಿ ಎಂದು ತೋರ್ಪಡಿಸಿಕೊಳ್ಳಬಯಸಿ ತನ್ನಲ್ಲಿದ್ದ—ಮರಿ ಹಾಕಲಿದ್ದ — ಒಂದು ಜಾತಿನಾಯಿಯನ್ನು ಬಹುಮಾನವಾಗಿ ಕೊಟ್ಟನು.

“ನೆಲದ ಬೆಳೆಸಿನಲ್ಲಿ ಅರ್ಧಪಾಲು ನಿನ್ನದು. ಶ್ರದ್ಧೆಯಿಂದ ಸಾಗುವಳಿ ಮಾಡಬೇಕಯ್ಯ” ಎಂದ ವರ್ತಕ.

ತನ್ನ ನೆಲದಲ್ಲಿ ಅರ್ಧವನ್ನು ಚಾರಲ್ಸನಿಗೆ ಮಾರಿ, ಮರಿ ಹಾಕಲಿದ ಎತ್ತರವಾದ ನಾಯಿಯನ್ನು ಸ್ಯಾಮ್ಯುಯಲ್ಲನು ಹಿಡಿದುಕೊಂಡು ಹಳ್ಳಿಯ ಕಡೆ ನಡೆದನು. ನಾಯಿಯೊಂದಿಗೆ ಮನೆ ಸೇರಿದನು. ಅವನನ್ನು ಕಂಡು ಲ್ಯೂಸಿ ಕೇಳಿದಳು :

“ ನೆಲ ಮಾರಿ ಮುಗಿಯಿತೋ ಇಲ್ಲವೋ ? ”

“ ಅರ್ಧವನ್ನು ಮಾರಿಬಿಟ್ಟೆ ಲ್ಯೂಸಿ ! ಬೇರೆ ಗತಿ ಇಲ್ಲ. ಏನು ಮಾಡಲಿ? ಮಾರದೆ ಇದ್ದರೆ ವರ್ತಕರ ಸಾಲ ಹರಿದೀತೇ ? ಮೊದಲೇ ಹೇಳಿದ್ದೆನಲ್ಲ. ”

“ ಈ ನಾಯಿ ? ”

“ ಇದನ್ನು ವರ್ತಕರು ಬಹುಮಾನವಾಗಿ ಕೊಟ್ಟಿದ್ದಾರೆ. ಜಾತಿ ನಾಯಂತೆ. ಇನ್ನೇನು ಇಷ್ಟರಲ್ಲೆ ಮರಿಹಾಕೀತು. ”

ಸ್ಯಾಮ್ಯುಯಲ್ಲನು ಸಾವಧಾನವಾಗಿ ಹೇಳಿದ. ಲ್ಯೂಸಿಗೆ ತಡೆಯಲಿಲ್ಲ. ಅವಳು ಗಂಡನ ಮೇಲೆ ರೇಗಿ ಬಿದ್ದಳು.

“ ಇದೇನು ನೀವು ಮಾಡುವ ಅಧ್ವಾನ್ನದ ಕೆಲಸಗಳು ! ಬಂಗಲೆ ಧಣಿ ಕೊಡಬೇಕಾದ ಗುತ್ತಿಗೆ ಬಾಕಿ ಕೇಳುವುದಕ್ಕ ನಿಮಗೆ ಎಲ್ಲಿಲ್ಲದ ನಾಚಿಕೆ. ಬರಬೇಕಾದ ಹಣ ಬಿಟ್ಟು ವರ್ತಕರ ಬಳಿ ಸಾಲ ಮಾಡಿದಿರಿ ; ಬಡ್ಡಿಗೆ ಬಡ್ಡಿ ತೆತ್ತಿರಿ ; ಆ ಸಾಲ ತೀರುವುದಕ್ಕೆ ಹಣವಿಲ್ಲದೆ ನೆಲ ಮಾರಿದಿರಿ ; ನೆಲ ಮಾರಿದ ನೆನೆಪಿಗೆ ಈ ನಾಯನ್ನೊಂದು ಕಟ್ಟಿಕೊಂಡು ಬಂದಿರಿ. ನೆಲ ಹೋಗಿ ನಾಯಿ ಬಂದಿತು ! ನಮ್ಮ ಮನೆ ತುಂಬಿದ ಹಾಗಾಯಿತು. ನಮ್ಮ ಅದೃಷ್ಟಕ್ಕೆ ಕಡಿಮೆಯೆ ಇಲ್ಲ. ಇನ್ನು ಇದಕ್ಕೆ ಬೇರೆ ದುಡಿದು ತಂದು ಹಾಕಬೇಕು. ಎಲ್ಲಿಯ ರಗಳೆ ಇದೆಲ್ಲಾ ? ”

ಜಿಮ್ಮಿಯನ್ನು ಕಳೆದುಕೊಂಡ ದುಃಖ ಒಂದೆಡೆ. ಕುಟುಂಬದ ವರಮಾನ ಕಡಿಮೆಯಾಗಿ ಕರ್ಚುಗಳು ಹೆಚ್ಚಿಹೋದುದು ಮತ್ತೊಂದೆಡೆ. ಮೇಲ್ಪಟ್ಟು ಅದುವರೆಗೂ ತಮ್ಮ ಜೀವನಾಧಾರವಾಗಿದ್ದ ಭೂಧನದಲ್ಲಿ ಅರ್ಧ ಭಾಗ ವರ್ತಕನ ಪಾಲಾಗಿ ಹೋದದ್ದು ಇನ್ನೊಂದು ಕಡೆ. ಇವೆಲ್ಲ ಕಷ್ಟ ನಷ್ಟಗಳನ್ನು ನೆನೆನೆನೆಸಿ ಲ್ಯೂಸಿ ಕಣ್ಣೀರು ಸುರಿಸಿದಳು. ಅವಳ ಇಂಗಿತವನ್ನು ಯಥೇಚ್ಛವಾಗಿ ಅರಿತಿದ್ದ ಸ್ಯಾಮ್ಯುಯಲ್ಲನು ಅವಳಾಡಿದ ಮಾತುಗಳನ್ನು ತಪ್ಪಾಗಿ ಭಾವಿಸಲಿಲ್ಲ. ಒದಗಿದ್ದ ಇಕ್ಕಟ್ಟುಗಳನ್ನೆಲ್ಲ ಹೇಗೋ ಒಂದು ಬಗೆಯಾಗಿ ಸಹಿಸಿ ನೆಲವನ್ನು ಉಳಿಸಿಕೊಳ್ಳಲು ಅವಳೂ ಬೇಕಾದಷ್ಟು

ಗಂಡನೊಡನೆ ಸಹಕರಿಸಿ, ಕೈಲಾದೆಲ್ಲ ಸಾಹಸ ಮಾಡಿದ್ದಳು. ಆದರೆ ಅದು ಸಾಧ್ಯವಾಗಲಿಲ್ಲ. ಕೃಷಿಗಾರನಿಗೆ ನೆಲವು ಹೋದಮೇಲೆ ಉಳಿದುದೇನು? ಲ್ಯೂಸಿಯ ಸಂಕಟ ತಡೆಯಲಾರದಂತಾಯಿತು. ಅವಳನ್ನು ಸಮಾಧಾನ ಗೊಳಿಸುತ್ತ ಸ್ಯಾಮ್ಯುಯಲ್ಲನು ಹೇಳಿದನು :

"ಲ್ಯೂಸಿ! ನಿನ್ನ ಸಂಕಟವನ್ನು ನಾನು ಬಲ್ಲೆ. ಆದರೆ ಈಗೇನು ಮಾಡುವುದು? ನಾವು ಬಡವರು; ಒಂದೊಂದು ಸಲ ಹಣವಂತರನ್ನು ಕಂಡು ನಾವು ನಡುಗಬೇಕಾಗುತ್ತದೆ ನೋಡು. ನಾಲಿಗೆಯ ತುದಿಯಲ್ಲೆ ಕೆಲವರು ಜೇನು ಸುರಿಸುತ್ತಾರೆ; ಸಮಯ ಸಾಧಿಸಿ ಕೊರಳು ತರಿಯುತ್ತಾರೆ; ನೋಡುವುದಕ್ಕೆ ಹೋದರೆ ನಮ್ಮಂತೆಯೆ ಅವರೂ ಮನುಷ್ಯರೇ! ನಮ್ಮನ್ನು 'ಹಳ್ಳಿಗರು! ಮಂಕುದಿಣ್ಣೆಗಳು! ಬುದ್ಧಿಯಿಲ್ಲದವರು! ಕೆಲಸಕ್ಕೆ ಬಾರದವರು! ಕೈಲಾಗದವರು!' ಎಂದೆಲ್ಲ ಅವರು ಹಿಯ್ಯಾಳಿಸಿ ಕೈತಟ್ಟಿ ಕೇಕೆಹಾಕಿ ನಗುತ್ತಾರೆ. ಅಲ್ಲದೆ, ತಾವು 'ನಾಗರಿಕರು! ಸತ್ಯವಂತರು! ಸಹಾಯ ಶೀಲರು!' ಹೀಗೆಂದು ಜಂಭ ಕೊಚ್ಚಿಕೊಳ್ಳುತ್ತಾರೆ. ಆದರೆ ಮರೆಯಾಗಿ ಅವರು ಮಾಡುವ ಅನ್ಯಾಯಗಳು—ಅವನ್ನು ದೇವರೊಪ್ಪುತ್ತಾನೆಯೆ? ಇರಲಿ; ಅರಿತವರೆಂದು ಅವರು ಅಟ್ಟಹಾಸ ತೋರುತ್ತಾರೆ; ವಿವೇಕಿಗಳೆಂದು ವೇಷ ಹಾಕುತ್ತಾರೆ; ದಯಾಳುಗಳೆಂದು ಧೋರಣೆಯನ್ನು ತೋರುತ್ತಾರೆ; ಸಭ್ಯರೆಂದು ಸೋಗು ಹಾಕುತ್ತಾರೆ. ಆದರೆ ಅರಿತವರೆಂದು ವೇಷತಾಳಿ ಅರಿಯದ ಹಳ್ಳಿಗರನ್ನು ಮೋಸಗೊಳಿಸುವ ಕೆಲವಾರು ನರರಾಕ್ಷಸ ನಾಗರಿಕರಿಗಿಂತಲೂ ಮೂಗು ಜೀವಿಯಾದ ಈ ನಾಯಿಯೇ ಎಷ್ಟೋ ಮೇಲು ಎಂದು ನಾನು ತಿಳಿದಿದ್ದೇನೆ. ಇದು ತನ್ನನ್ನು ಸಾಕಿದ ಒಡೆಯರಿಗೆ ಕೃತಜ್ಞತೆಯಿಂದ ತನ್ನ ಉಸಿರನ್ನೇ ಧಾರೆಯೆರೆಯಬಲ್ಲುದು. ಇದನ್ನು ಮರೆಯದಿರು ಲ್ಯೂಸಿ! ಇದಕ್ಕೆ ನೀನು ಹಾಕುವ ಹಿಡಿತುತ್ತು ಎಂದೆಂದಿಗೂ ವ್ಯರ್ಥವಾಗದೆಂದು ತಿಳಿ."

"ಅದೆಲ್ಲಾ ನಿಜವಿರಬಹುದು...."

"ಇರಬಹುದು ಎನ್ನಬೇಡ ಲ್ಯೂಸಿ! ನಿಜವಾಗಿಯೂ ಹಾಗೆಯೇ!"

“ ಇರಲಿ ; ಈಗ ನಮಗಂತೂ ಬರಗಾಲ ಬಂದ ಹಾಗಾಗಿದೆ. ಇನ್ನು ಈ ನಾಯಿಗೆ ಬೇರೆ ಸಂಪಾದಿಸಿ ತರಬೇಕಲ್ಲ. ”

ತಾಯಿಯ ಮಾತನ್ನು ಕೇಳಿ ಅವಳನ್ನು ಸಮಾಧಾನಗೊಳಿಸಲೋಸುಗ ಹಿರಿಯ ಮಗ ಆರ್ಥರನು ಹೇಳಿದ :

“ ಇರಲಿ ಅಮ್ಮ ! ಇದು ಜಾತಿಯ ನಾಯಿ. ಎರಡು ಮೂರು ಮರಿ ಹಾಕೀತು. ಯಾರಿಗಾದರೂ ನಾಲ್ಕು ಹೊನ್ನುಗಳಿಗೆ ಮರಿಗಳನ್ನು ಮಾರಿಬಿಟ್ಟರಾಯಿತು. ”

“ ಅದುವರೆಗೆ ಬರಲಿ, ಈಗ ನಡೆಯುವುದು ಹೇಳು ” ಎಂದಳು ಲ್ಯೂಸಿ.

“ ಬಿಡಮ್ಮ ! ಹೇಗಾದರೂ ಆಗುತ್ತೆ. ಇಂಥಾ ಜಾತಿನಾಯಿ ಸಿಕ್ಕುವುದು ಕಷ್ಟ. ವರ್ತಕರು ಮನಸ್ಸುಮಾಡಿ ಕೊಟ್ಟದ್ದು ಬೇಡವೆನ್ನಬಾರದು. ”

“ ಆರ್ಥರನ ಮಾತು ನಿಜ ” ಎಂದು ದನಿಗೂಡಿಸಿದ ಸ್ಯಾಮ್ಯುಯಲ್.

ಲ್ಯೂಸಿ ಯೋಚಿಸಿದಳು. ಇಂತಹುದನ್ನು ಮಾಡುವುದು ಎಂದು ಅವಳಿಗೆ ತೋರಲಿಲ್ಲ. ಆರ್ಥರನನ್ನು ಕುರಿತು ಹೇಳಿದಳು :

“ ತಂದೆ ಮಗ ಒಂದಾದಿರಿ. ಈ ಹಾಳು ನಾಯಿ ನನ್ನ ಕೋಳಿಗಳನ್ನು ಕಚ್ಚಿ ಕೊಂದುಹಾಕದೆ ಇರಬೇಕಲ್ಲ. ”

ಹೆಂಡತಿಯ ಗೋಳಾಟವನ್ನು ಕಂಡು ಸ್ಯಾಮ್ಯುಯಲ್ಲನು ಹೇಳಿದನು :

“ ಇರಲಿ, ಬೇಸರಪಡಬೇಡ. ಯಾವುದೋ ನ್ಯಾಯವನ್ನು ಅನುಸರಿಸಿಯೇ ದೇವರು ನೆಲವನ್ನು ಕಸಿದುಕೊಂಡು ನಾಯಿಯನ್ನು ಕಳುಹಿಸಿರಬಹುದು. ನೀನೇನು ಬಲ್ಲೆ ? ನಾನೇನು ಬಲ್ಲೆ ? ಆಗಲಿ ; ನೋಡೋಣ. ದೇವರಿಷ್ಟವಿದ್ದಂತೆ ತಾನೇ ಎಲ್ಲವೂ ನಡೆಯಬೇಕಾದರೆ ! ”

ಇದನ್ನು ಕೇಳಿ ಲ್ಯೂಸಿಯೂ ತನ್ನ ಮಾತನ್ನು ಮುಂದುವರಿಸಲಿಲ್ಲ.

* * * * * * * *

## ಆಪತ್ಕಾಲಕ್ಕೆ ಒದಗೀತು

ಆರು ತಿಂಗಳನಂತರ ವಾಡಿಕೆಯಂತೆ ಒಮ್ಮೆ ಪೀಟರನ ಮುಂದೆ ಪೊಟ್ಟಿಗಳನ್ನು ತಂದಿರಿಸಿ ಸ್ಯಾಮ್ಯುಯಲ್ಲನು ತೋಟದಕಡೆ ಹೋಗುವುದರಲ್ಲಿದ್ದನು. ಆಗ ಪೀಟರನು ಅವನನ್ನು ಕೂಗಿದನು :

" ಸ್ಯಾಮ್ಯುಯಲ್ ! "

" ಏನು ಧಣಿಗಳೇ ? "

" ತೋಟದ ಬೆಳಸು ಇಷ್ಟೊಂದು ಕಡಿಮೆಯಾಗುವುದಕ್ಕೆ ಕಾರಣ? ಪೀಟರನು ಎಂದಿನಂತೆ ಕೇಳಿದನು. ಉಚಿತವಾಗಿ ಬಂದಿದ್ದ ಪೊಟ್ಟಿಗಳು ಅವನ ಕಣ್ಣೆದುರಿಗೆ ಮೇಜಿನ ಮೇಲೆಯೇ ಇದ್ದುವು. ಆದರಿಂದಲೋ ಏನೋ ಅವನ ಮಾತಿನಲ್ಲಿ ಈ ಸಲ ಅಷ್ಟೊಂದು ಕಾಠಿಣ್ಯವಿದ್ದಂತೆ ಕಾಣಲಿಲ್ಲ. ಈ ಮುನ್ನ ಪೀಟರನ ಮಾತುಗಳು ಚುಚ್ಚುಮಾತುಗಳಾಗಿದ್ದುವು; ಅವುಗಳಲ್ಲೊಂದು ಬಗೆಯ ಬಿರುಸು ಇದ್ದಿತು ಇಂದು ಅವು ಹೆಚ್ಚು ಕಡಿಮೆ ಹೂವಿನ ಬಾಣಗಳಂತಿದ್ದುವು. ಹೊಡೆಯುವುದು ಮಲ್ಲಿಗೆ ದಂಡೆಯಿಂದಲೇ ಆದರೂ ಅದರ ಏಟು ಕಣ್ಣಿಗೆ ಬಿದ್ದರೆ ನೋಯದೆ ಇದ್ದೀತೆ? ಅಂತೆಯೇ ಪೀಟರನು ಕೇಳಿದ ಮಾತು ಮೆಲುದನಿಯಲ್ಲಿ ಇದ್ದರೂ ಅದು ತಿವಿದುದು ಕಳಂಕ ವಿವರ್ಜಿತವಾದ ಸ್ಯಾಮ್ಯುಯಲ್ಲನ ಎದೆಯನ್ನು ಧಣಿಯ ಆರೋಪಣೆಗೆ ಅವನಿತ್ತ ಉತ್ತರವು ಸ್ಪಷ್ಟವಾಗಿಯೂ ಇದ್ದಿತು :

" ಬೆಳಸಿನ ವಿಚಾರ ನಾನರಿಯೆ ಧಣಿಗಳೇ ! "

" ಇಲ್ಲಿ ನೋಡು ಸ್ಯಾಮ್ಯುಯಲ್ ! "

" ಕಿವಿಗೊಟ್ಟು ಕೇಳುತ್ತಿದ್ದೇನೆ; ಏನಪ್ಪಣೆ ಧಣಿಗಳೇ ! "

" ತೋಟದಿಂದ ಯಾರಾದರೂ .... ...... .... "

" ಹಣ್ಣುಗಳನ್ನು ಕದಿಯುತ್ತಿರಬಹುದೇ ಎಂದು ತಾನೇ ತಾವು ಕೇಳಬಯಸುವುದು ? "

" ಹೌದೌದು ಸ್ಯಾಮ್ಯುಯಲ್ ! ಸರಿಯಾಗಿ ಊಹಿಸಿದೆ. "

" ಇದ್ದರೂ ಇರಬಹುದು ...... ...... ...... "

" ಇರಬಹುದು ಎಂದೆಯಾ ? ಹಾಗಾದರೆ ಯಾರು ? "

" ನಾನೇನು ಹೇಳಲಿ ? ...... ...... ಬಂಗಲೆಯಲ್ಲಿರುವವರು ತಾವೊಬ್ಬರೇ ...... ...... "

" ಏನೆಂದೆ ಸ್ಯಾಮ್ಯುಯಲ್ ? "

" ಪ್ರಭುಗಳು ಸಾವಧಾನದಿಂದ ಲಾಲಿಸಬೇಕು. ನಾನಾದರೂ ದೂರದ ಹಳ್ಳಿಯಿಂದ ಬರತಕ್ಕವನು. ನಾನೇನು ಬಲ್ಲೆ-ನಾನಿಲ್ಲದಿರುವಾಗ ನಡೆಯುವ ವಿಚಾರಗಳನ್ನು ? "

" ಏನು ? ಹಾಗಾದರೆ ನಾನು ಕಳುವು ಮಾಡುತ್ತೇನೆಯೇ ? "

' ಕಳ್ಳನ ಮನಸ್ಸು ಹುಳ್ಳು ಹುಳ್ಳಗೆ ' ಎನ್ನುವ ತೆರನೆ ಇದ್ದಿತು— ಪೀಟರನ ಮನಸ್ಸಿನ ಆ ಕ್ಷಣದ ಪರಿಸ್ಥಿತಿ. ಅವನ ಅದೃಷ್ಟ—ಅವನ ಕಪಟ ತೋಟಗಾರನಿಗೆ ತಿಳಿಯದೆ ಇದ್ದುದು. ಧಣಿಯ ಪ್ರಶ್ನೆಗೆ ತೋಟಗಾರನು ಉತ್ತರ ಕೊಡುತ್ತ ಹೇಳಿದ :

" ಹಾಗೆನ್ನಬಾರದು ಪ್ರಭುಗಳೇ ! ತಾವು ತೋಟಕ್ಕೆ ಒಡೆಯರು. ತಮ್ಮನ್ನು ನಾನು ಜರಿಯಲೇ ? ತಮ್ಮ ತೋಟದಲ್ಲಿ ತಾವೇ ಕದಿಯುವುದೆಂದರೇನು ? ನನಗರ್ಥವಾಗಲಿಲ್ಲ."

" ಹಾಗಾದರೆ ? "

" ತಾವು ಹೊರಗೆ ಹೋದಾಗ ಹೊರಗಿನವರು ಯಾರಾದರೂ ...... "

ಈ ಸಲ ಸ್ಯಾಮ್ಯುಯಲ್ಲನೆ ಮಾತನ್ನು ಎತ್ತಿಕೊಟ್ಟನು. ಇದರಿಂದ ಪೀಟರನ ಪರಿಸ್ಥಿತಿಯು ಎಷ್ಟೋ ಸುಧಾರಿಸಿದಂತಾಯಿತು.

" ಅದು ನಿಜ ಸ್ಯಾಮ್ಯುಯಲ್ ! ಅದಕ್ಕೊಂದು ಕೆಲಸ ಮಾಡಿದರೆ ? "

" ಅಪ್ಪಣೆಯಾಗಲಿ ಧಣಿಗಳೇ ! "

" ನಿಮ್ಮ ಮನೆಯಲ್ಲಿ ಒಂದು ನಾಯಿ ಇದೆಯಂತೆ. ಹಾಗೆಂದು ನಿಮ್ಮ ಆರ್ಥರನು ನನ್ನೊಡನೆ ಹೇಳಿದ್ದ. ನಿಜವೇ ? "

" ಅಹುದು ಧಣಿಗಳೇ! ಒಂದೇಕೆ! ಎರಡಿವೆ; ಉತ್ತಮ ಜಾತಿಯವು; ಎತ್ತರವಾಗಿ ಸುಂದರವಾಗಿ ಬೆಳದಿವೆ; ಹುಲಿ ಮರಿಗಳಂತಿವೆ ! "

" ಏನು ! ಚೆನ್ನಾಗಿ ಬೆಳೆದಿವೆ ಎಂದೆಯಾ ? "

" ಹೌದು ಪ್ರಭುಗಳೇ ! "

" ಹಾಗಾದರೆ ಅದಕ್ಕೆ ಆಹಾರ ಹೆಚ್ಚಾಗಿಯೇ ಹಾಕಬೇಕಾದೀತು ಎನ್ನು. ನಿಜವೇ ? "

" ನಿಜ ; ಆದರೆ ಹಾಕಿದರೂ ಚಿಂತೆಯಿಲ್ಲ ಧಣಿಗಳೇ ! ನರಮನುಷ್ಯರನ್ನು ನಂಬುವುದಕ್ಕೆ ಬದಲು ನಾಯನ್ನು ನಿರಾಯಾಸವಾಗಿ ನಂಬಬಹುದು."

" ಹಾಗಾದರೆ ? "

" ಅದಕ್ಕೆ ಕೃತಜ್ಞತೆ ಇದೆ. ತನ್ನ ಧಣಿಯನ್ನು ಅದು ಒಂದು ಕಾಲಕ್ಕೂ ಮರೆಯದು. "

" ನಿಜ ಸ್ಯಾಮ್ಯುಯಲ್ ! "

"ಒಂದೊಂದು ವೇಳೆ ನಾವು ಮನುಷ್ಯರಾಗಿ ಹುಟ್ಟುವುದಕ್ಕೆ ಬದಲಾಗಿ ನಾಯಾಗಿ ಹುಟ್ಟಿದ್ದರೆ ಕೆಟ್ಟ ಹೆಸರೂ, ಕಷ್ಟಪರಂಪರೆಗಳೂ ಒಟ್ಟೊಟ್ಟಿಗೆ

ಒದಗಿ ನಿಟ್ಟುಸಿರು ಬಿಡಬೇಕಾಗಿರಲಿಲ್ಲ ಎಂದೆನ್ನಿಸುತ್ತದೆ ನನಗೆ. "

"ಹಾಗೇನು ?"

"ಅಲ್ಲದೇನು ? ಆವರಲ್ಲೂ ಈ ಜಾತಿನಾಯಿಗೆ ಹಾಕುವ ತಿಂಡಿ ಎಂದಿಗೂ ವ್ಯರ್ಥವಾಗಲಾರದು ಧಣಿಗಳೇ !"

"ಹಾಗೆಂದರಾದೀತೇನಯ್ಯ ? ಅಮೇಲೆ ಹಾಗದ ಕೋತಿಗೆ ಮುಪ್ಪಾಗದ ಬೆಲ್ಲ ತಿನ್ನಿಸಿದಂತಾದೀತು. ! ಮೇಲ್ಪಟ್ಟು ಹೆಚ್ಚು ಹೆಚ್ಚಾಗಿ ತಿನ್ನಿಸಿದಷ್ಟೂ ನಾಯಿ ಕೆಟ್ಟುಹೋಗುವ ಸಂಭವವುಂಟು. ಹಾಗೆಂದು ನೆರೆ ಮನೆ ಸ್ಯಾಮ್ಯುಯಲ್ಲರು ಎಷ್ಟೋ ಸಲ ನನ್ನಲ್ಲಿ ಒತ್ತಿ ಒತ್ತಿ ಹೇಳಿದ್ದಾರೆ. ನಾಯಿಗಳನ್ನು ಸಾಕುವುದರಲ್ಲಿ ಅವರದು ನುರಿತ ಕೈ."

"ಹೆಚ್ಚು ತಿನ್ನಿಸುವ ಮಾತು ಹಾಗಿರಲಿ ಧಣಿಗಳೇ ! ಹೊಟ್ಟೆ ತುಂಬು ವಷ್ಟಾದರೂ ರೊಟ್ಟಿ ಮಾಂಸಗಳನ್ನು ತಟ್ಟೆಯಲ್ಲಿ ಹಾಕದಿದ್ದರೆ ನಾಯಿ ಕೆಟ್ಟು ಹೋಗುವುದಿಲ್ಲವೆ ?"

"ನಿನ್ನ ಮಾತೇ ನಿನಗೆ ಸ್ಯಾಮ್ಯುಯಲ್. ಹಿತಮಿತವಿಲ್ಲದೆ ತಿನ್ನಿಸು ವವರೊಬ್ಬರಿದ್ದರೆ ತಿನ್ನುವ ನಾಯಿಗಳಿಗೇನು ಬರಗಾಲವೇ ? ಅವಕ್ಕೇನು ? ಬೇಕಾದಷ್ಟನ್ನು ತಿಂದು ಬೇಡವಾದ್ದನ್ನೂ ತಿನ್ನಲು ಸಿದ್ಧ !

"ಅದೆಂತಾದರೂ ಇರಲಿ ; ಅಂತಹ ಜಾತಿಯನಾಯಿ ಒಂದು ಮನೆ ಯಲ್ಲಿದ್ದರೆ ಅದು ಖಂಡಿತವಾಗಿಯೂ ಆಪತ್ಕಾಲಕ್ಕೆ ಒದಗೀತು. ಅದಿದ್ದೆಡೆ ಹತ್ತು ಜನ ಕಾವಲುಗಾರರಿದ್ದಂತೆ. ಬಂಗಲೆ ಬಳಿ ಕಳ್ಳಕಾಕರರು ಸುಳಿಯು ವುದೆಂದರೇನು ಧಣಿಗಳೆ !. ಇರಲಿ ; ಎರಡು ಮರಿಗಳಿವೆ. ಒಂದನ್ನು ತಮಗೆ ತಂದು ಕೊಡುತ್ತೇನೆ ; ಸಾಕಿಕೊಳ್ಳಿ. ಹಾಗೂ ತಮಗೆ ನಾಯಿ ಬೇಡವೆಂದು ತೋರಿದಾಗ ಹೇಳಿ. ನಾನೇ ಹಿಡಿದುಕೊಂಡು ಹೋಗುತ್ತೇನೆ."

"ತಂದುಕೊಡುವುದಕ್ಕೆ ಮುನ್ನವೇ ಹಿಡಿದುಕೊಂಡು ಹೋಗುವ ಮಾತೇಕೆ ಸ್ಯಾಮ್ಯುಯಲ್ ?

" ಆಗಲಿ, ತಂದುಕೊಡುತ್ತೇನೆ. ಅದು ಬಂಗಲೆಗೆ ಸರಿಯಾದ ಕಾವಲು. ತೋಟವನ್ನೆಲ್ಲ ಆ ನಾಯಿ ಒಂದೇ ಕಾದೀತು !

" ಒಳ್ಳೆಯದು ಸ್ಯಾಮ್ಯುಯಲ್ ! ನಾಯಿಗೆ ಬೆಲೆ ಕೊಡಬೇಕೆ ? "

" ಬೆಲೆ ! .ಅದಕ್ಕೆ ಬೆಲೆ ಕೊಡುವುದಾದರೆ ಬಹಳ ಕೊಡಬೇಕಾಗುತ್ತದೆ. ಅಂತಹ ಜಾತಿನಾಯಿ ಅದು ; ಸಿಕ್ಕುವುದು ದುರ್ಲಭ. ಅದಕ್ಕೆ ಹೆಚ್ಚು ಬೆಲೆ ಕೊಡುವವರೂ ಇದ್ದಾರೆ ಅನ್ನಿ. ಆದರೆ ತಾವಾಗಿ ಬಾಯಿ ಬಿಟ್ಟು ಕೇಳಿದಿರಿ. ದೊಡ್ಡವರು ಕೇಳಿದಾಗ ಇಲ್ಲ ಎಂದುಬಿಡುವುದು ಹೇಗೆ? ತಮ್ಮಲ್ಲಿ ನಾನು ಬೆಲೆ ತೆಗೆದುಕೊಳ್ಳಲೇ ? ಅಷ್ಟಕ್ಕೂ ಅದು ಮನೆಯಲ್ಲಿ ಹುಟ್ಟಿದ್ದು. ನಾನೇನೂ ಅದನ್ನು ಹಣಕೊಟ್ಟು ಕೊಂಡು ತರಲಿಲ್ಲವಲ್ಲ. ಪೇಟೆ ವರ್ತಕರು ಚಾರಲ್ಸ್ ಅಣ್ಣ ಇಲ್ಲವೆ ? ಅವರೇ ಈ ನಾಯಿಯ ತಾಯಿಯನ್ನು ನನಗೆ ಕೊಟ್ಟರು. "

" ಓಹೋ ! ಅದೋ ! ಬಲ್ಲೆ ; ಅದು ಉತ್ತಮ ಜಾತಿಯದೇ ಸರಿ ; ಹಾಗಿದ್ದಲ್ಲಿ ನಾಡಿದ್ದು ನೀನು ಬರುವಾಗ ಅದನ್ನು ಹಿಡಿದುಕೊಂಡು ಬಾ. "

" ಅಪ್ಪಣೆ " ಎನ್ನುತ್ತ ಸ್ಯಾಮ್ಯುಯಲ್ಲನು ತೋಟದಕಡೆ ಹೊರಟ.



ಪ್ರಕರಣ ೭.

# ಸತಿಸುತರೊಡನೆ ಸಂವಾದ

ಅಂದು ರಾತ್ರಿ ಮನೆ ಸೇರಿದೊಡನೆ ಲ್ಯೂಸಿ ಗಂಡನನ್ನು ಕೇಳಿದಳು :

" ಬಂಗಲೆಯಲ್ಲಿ ಏನು ಸಮಾಚಾರ ? ಈ ಸಲ ಸುಗ್ಗಿಗಾದರೂ ಬಾಕಿ ನಿಂತಿರುವ ಗುತ್ತಿಗೆ ಹಣವನ್ನು ಕೊಡುತ್ತಾರಂತೋ ಅಥವಾ, ಮತ್ತೆ ಮಾಯಿದೆ ಹೇಳುತ್ತಾರೋ? ಬಂಗಲೆ ಧಣಿಗೆ ನಾಲ್ಕಾಳು ಹೊರುವಷ್ಟು ಹಣ ಇವೆಯಂತೆ! ಕೊಡಬೇಕಾದ ಹಣವನ್ನು ಕೊಟ್ಟುಬಿಟ್ಟರೆ ಕೆಟ್ಟು ಹೋಗುತ್ತಾರೇನು ? "

" ಗುತ್ತಿಗೆ ಹಣದ ಮಾತನ್ನೇ ಎತ್ತಲಿಲ್ಲ ಧಣಿಗಳು ! "

" ಅವರ ಮಾತು ಯಾರಿಗೆ ಬೇಕಾಗಿದೆ ? ಕೊಡಬೇಕಾದ ಹಣ ಕೊಟ್ಟು ಬಿಡಲಿ. ಅವರ ಮಾತನ್ನು ಹಿತ್ತಿಲ ಭೂಮಿಯಲ್ಲಿ ಬಿತ್ತಿ ಹೊನ್ನನ್ನು ಬೆಳೆಯಲಿ —ಬೇಡವೆಂದವರು ಯಾರು ? "

" ಹಾಗೆನ್ನುವುದು ಏನು ಚೆಂದ ಲ್ಯೂಸಿ ? "

" ಅನ್ನಬೇಕೆನ್ನುವ ಬಯಕೆ ನನಗಿಲ್ಲ. "

" ಹಾಗಿದ್ದೂ ಅನ್ನುವಿಯೇಕೆ ? "

" ಅನ್ನದಿದ್ದರೆ ಗತಿಯಿಲ್ಲ. ನಾವು ಬಡವರು. "

" ಬಡವರೇನೋ ಸರಿ; ಆದರೆ, ಕೊಡಬೇಕಾದುದನ್ನು ಕೊಡದೆ ತಡೆದಿಡಲು ಧಣಿಗಳಿಗೇನೇನು ಅಡಚಣೆಗಳಿವೆಯೋ ನಾವೇನು ಕಂಡಿದ್ದೇವೆ?"

" ಅವರಿಗೆಂತಹ ಅಡಚಣೆ? ಹಣವಂತರಿಗೇ ಅಡಚಣೆಯಾದರೆ ಬಡವರಿಗೆ ಕೈ ನೀಡಿ ಕೊಡುವವರು ಇದ್ದಾರೆಯೇ? ನಾವು ಕೇಳುವುದು ಸಾಲವನ್ನಲ್ಲ; ಬರಬೇಕಾದ್ದನ್ನು ಮಾತ್ರ."

" ಕೊಡುವುದಿಲ್ಲವೆಂದು ಧಣಿಗಳು ಹೇಳಲಿಲ್ಲವಲ್ಲ; ಏನೋ ಅವರಿಗೂ ಸಮಯ ತಪ್ಪಿರಬಹುದು ; ಕೊಡುತ್ತಾರೆ."

" ಏನು ಕೊಡುವುದು? ಪಾದ್ರಿಗಳು ಇನ್ನೂರು ಹೊನ್ನು ಕೇಳಿದ್ದಕ್ಕೆ ಎರಡು ಹೊನ್ನು ಕೊಟ್ಟರಂತೆ! ಅವತ್ತು ಪೇಟೆಯಲ್ಲಿ ಜಾನ್ ಅಣ್ಣ ಹೇಳಿದ್ದು ಕೇಳಿಸಲಿಲ್ಲವೆ ನಿಮಗೆ? ಅಷ್ಟಕ್ಕೂ ನೀವೆಣಿಸುವಂತೆ ಬಂಗಲೆ ಧಣಿಗೆ ಏನು ಕಷ್ಟ ಇದೆ? ಅವರು ಸಂಪಾದಿಸುವುದೆಲ್ಲ ಗಂಟಿ! ಅವರಿಗೇನು ಮಕ್ಕಳೇ—ಮರಿಯೇ—ನಮ್ಮ ಹಾಗೆ? ಮುಖ್ಯ ಅವರು ಯಾರಿಗೆ ಕೊಡಬೇಕಾದರೂ ಹೆಣಗಾಡಿಸಿ ಕೊಡುತ್ತಾರಂತೆ. ಅದರಲ್ಲೂ ನಿಮ್ಮ ಹಾಗೆ ಬರಬೇಕಾದ್ದನ್ನು ಕೇಳುವುದಕ್ಕೇ ಹೆದರಿಕೊಂಡರೆ ತೀರಿತು. ಕೈಬಚ್ಚಿ ಕೊಟ್ಟುಬಿಡುತ್ತಾರೆ! ನೀವೂ ಬಾಯಿ ತೆರೆದುಕೊಂಡಿರಿ."

" ಇದೆಲ್ಲಾ ಏನು ಲ್ಯೂಸಿ? ಅವರು ಪಾದ್ರಿಗೆ ಕೊಟ್ಟದ್ದೂ ಬಿಟ್ಟದ್ದೂ ನಮಗೇಕೆ? ಅವರಿಷ್ಟ—ಪಾದ್ರಿಯ ಲಭ್ಯ! ಎಷ್ಟಾದರೂ ಅವರು ಧಣಿ. ಅವರ ವಿಚಾರ ನಾವು ಅವಮಾನಕರವಾಗಿ ಆಡಿಕೊಳ್ಳಬಾರದು ಕಂಡೆಯಾ? ಅವರು ಉಪ್ಪಿಟ್ಟವರು. ಅದನ್ನು ನಾವು ಮುಪ್ಪಿನವರೆಗೆ ಮರೆಯಬಾರದು."

ಸ್ಯಾಮ್ಯುಯಲ್ಲನ ಸದ್ಗುಣಗಳನ್ನು—ಅದರಲ್ಲಿಯೂ ಅವನ ಸಹನೆಯನ್ನು ಲ್ಯೂಸಿಯು ಚೆನ್ನಾಗಿ ಗ್ರಹಿಸಿದ್ದಳು; ಗ್ರಹಿಸಿ ಅನೇಕವೇಳೆ ಎಲ್ಲರೆದುರಿಗೆ ತನ್ನ ಗಂಡನನ್ನು ಬಾಯಿತುಂಬ ಕೊಂಡಾಡಿಯೂ ಇದ್ದಳು. ಆದರೆ ಬಂಗಲೆ ಧಣಿಯು ಜಿಪುಣನೆಂದು ಅವಳು ಎಂದೋ ಮುಂದಟ್ಟು ಮಾಡಿಕೊಂಡಿದ್ದಳು. ಅಷ್ಟಕ್ಕೆ ನಿಲ್ಲದೆ ಅವನು ಕಪಟಿಯೆಂದೂ, ಕ್ರೂರಾತ್ಮನೆಂದೂ ಅವಳು ಕೆಲವಾರು ಸಂದರ್ಭಗಳಲ್ಲಿ ಅನುಭವಿಸಿ ತಿಳಿದುಕೊಂಡಿದ್ದಳು. ಆದುದರಿಂದ ಬಂಗಲೆ ಧಣಿ ವಿಚಾರವನ್ನು ಸ್ಯಾಮ್ಯುಯಲ್ಲನು ಎತ್ತಿದಾಗಲಿಲ್ಲ

ಅವಳು ಸಿಟ್ಟಾಗುತ್ತಿದ್ದಳು. 'ಪೀಟರನ ವ್ಯವಹಾರ ಕ್ರಮಗಳು ಒಳಿತಾದು ವೆಂದೂ, ನ್ಯಾಯಬದ್ಧನೆಂದೂ, ದಯಾ ದೃಷ್ಟಿಯಿಂದ ಕೂಡಿದುದೆಂದೂ, ದೈವಸಮ್ಮತವಾದುವೆಂದೂ ಅವಳು ನಂಬಲೇ ಇಲ್ಲ. ಈ ಸಲ ಅವಳಿಗೆ ತಡೆಯದ ಅವಳು ಗಂಡನನ್ನು ಕೇಳಿದಳು :

" ಹಳ್ಳಿಯಿಂದ ಬಂಗಲೆಗೆ ಹತ್ತು, ಬಂಗಲೆಯಿಂದ ಹಳ್ಳಿಗೆ ಹತ್ತು, ಒಟ್ಟು ಇಪ್ಪತ್ತು ಮೈಲಿ ನಡೆದು ಅಂಗಾಲಿನ ಚರ್ಮವನ್ನು ಸವೆಸಿದ್ದಕ್ಕಾದರೂ ಹತ್ತುಮಾತು ಬಾಯಿತುಂಬ ಆಡಿದರೋ ಅದೂ ಇಲ್ಲವೋ? ಅಥವಾ, ಹಾಡಿದ್ದನ್ನೇ ಹಾಡುವುದು ಅವರಿಗೇನೂ ಹೊಸದಲ್ಲ. ನೀವು ನೂರು ಸಲ 'ಕೊಡಿ, ಕೊಡಿ' ಎಂದು ಬೇಡಿದರೆ ಅವರು ಒಂದೇ ಸಲ 'ಇಲ್ಲ' ಎಂದು ನಿಮ್ಮ ಬಾಯಿಗೆ ಬೀಗಹಾಕಿ 'ಹೋಗಿ ಬಾ' ಎನ್ನತಕ್ಕವರು. ಗೊತ್ತೇ ಇದೆ.

" ಸುಮ್ಮನೆ ಕಲ್ಪನೆ ಮಾಡಬೇಡ ಲ್ಯೂಸಿ ! "

" ಕಲ್ಪನೆಯೇನಂತೆ? ಅವರಾದರೂ ಹೊಟ್ಟೆ ತುಂಬಿದ ಪುಣ್ಯಾತ್ಮರು. ನಾವು ಬಡವರು ; ನಮ್ಮ ಕಷ್ಟ ಯಾವ ಯಾವ ಬಗೆ ಇದ್ದೀತೆಂದು ಅವರೇನು ಬಲ್ಲರು ? ಅದನ್ನೆಲ್ಲ ತಿಳಿದುಕೊಳ್ಳಲು ಅವರಿಗೇನು ಬೇಕಾಗಿದೆ ? ಇರಲಿ ; ಅವರಿಂದದ್ದಾದರೂ ಏನು ? "

" ಗುತ್ತಿಗೆ ಹಣದ ವಿಚಾರ ಅವರು ಏನನ್ನೂ ಅನ್ನಲಿಲ್ಲ."

" ನನಗೆ ಮೊದಲೇ ಗೊತ್ತು. ಆ ಮಾತನ್ನು ಅವರು ಎತ್ತಲಾರರು ಎಂದು. ತಮಗೆ ನ್ಯಾಯವಾಗಿ ಕೊಡಬೇಕಾದ ನಾಲ್ಕು ಹೊನ್ನನ್ನು ತೆತ್ತರೆ ನಾಲ್ಕಾರು ದಿವಸ ಅವರು ಉಪವಾಸವಿರುವರಂತೆ! "

" ಎಂತಹ ಆರೋಪಣೆ ಲ್ಯೂಸಿ ! ಯಾರನ್ನೂ ನಾವು ನಿಂದಿಸಬಾರದು; ದ್ವೇಷಿಸಬಾರದು; ಬದಲಾಗಿ ಎಲ್ಲರನ್ನೂ ಪ್ರೀತಿಸಬೇಕು. ಕೊಲ್ಲ ಬಂದ ಶತ್ರುವನ್ನೂ ನಾವು ಪ್ರೀತಿಸಿ ಪರಿವರ್ತನಗೊಳಿಸಬೇಕು. ಹೀಗೆಂದು

ಬೈಬಲ್ ಪ್ರವಚನದಿಂದ ಪಾದ್ರಿಗಳು ಎತ್ತಿ ಹೇಳಿದುದನ್ನು ನೀನು ಮರೆತಿರ ಲಾರೆಯಷ್ಟೆ ?"

"ಇರಲಿ; ಈಗ ನಮಗೆ ಬೇಕಾಗಿರುವುದು ಬರಬೇಕಾದ ಬಾಕಿ ; ಬೈಬಲ್ ಮಾತು ಅನಂತರ. ಬಂಗಲೆ ಧಣಿ ಹಣದ ಮಾತನ್ನೇ ಎತ್ತಲಿಲ್ಲ ಎಂದಿರಿ."

"ಹೌದು ; ನಾನೂ ಕೇಳಲಿಲ್ಲ. ಕೇಳಲು ಅವಕಾಶ ದೊರಕಲಿಲ್ಲ."

ಲ್ಯೂಸಿಗೆ ಮತ್ತೆ ತಡೆಯಲಿಲ್ಲ. ಅವಳು ಸ್ವಲ್ಪ ಕೋಪದಿಂದಲೇ ಹೇಳಿದಳು :

"ಅವಕಾಶ ದೊರಕಲಿಲ್ಲ ! ದೊರಕುತ್ತೆ ; ದೊರಕಲಿ ಸಾವಕಾಶವಾಗಿ. ಅರ್ಧ ನೆಲವನ್ನು ಚಾರಲ್ಸನು ನುಂಗಿಕೊಂಡಂತೆ ಫಿಲಿಪ್ಸನು ತನ್ನ ಸಾಲಕ್ಕೆ ಉಳಿದ ಅರ್ಧ ನೆಲವನ್ನೂ, ಮನೆಯನ್ನೂ, ದನ ಕರುಗಳನ್ನೂ, ಕುರಿ ಕೋಳಿ ಗಳನ್ನೂ ನುಂಗಿಕೊಳ್ಳಲಿ. ನಾವೆಲ್ಲ ಮಡುವಿನಲ್ಲಿ ಬಿದ್ದು ಸಾಯೋಣವಂತೆ!"

"ಈ ದಿವಸ ಏನು ನಿನಗೆ ಇಷ್ಟೊಂದು ಆವೇಶ ಲ್ಯೂಸಿ ?"

"ನಮ್ಮ ಕಷ್ಟ ನೋಡಿ ಹೇಗಿದೆ."

"ಇದೆ; ನನಗೆ ತಿಳಿಯದೆ? ಆದರೂ ದೇವರನ್ನು ನಂಬು. ನಂಬಿದವರನ್ನು ಅವನೆಂದಿಗೂ ಕೈಬಿಡಲಾರ."

"ಆಯಿತು ; ಕೊನೆಗೆ ಧಣಿ ಅಂದದ್ದಾದರೂ ಏನು ?"

"ನಾಯಿ ಮರಿ ಬೇಕಂತೆ."

ಈ ಮಾತನ್ನು ಕೇಳಿ ಲ್ಯೂಸಿಗೆ ಈ ಸಲ ನಗು ಬರುವಂತಾಯಿತು.

"ನಾಯಿಮರಿ ! ಧಣಿಗೇನಾದರೂ ಹುಚ್ಚುಗಿಚ್ಚು ಹಿಡಿಯಿತೋ ? ನಾಯಿಮರಿ ! ಏತಕ್ಕೋ ಕಾಣೆ. ಅದೋ ಮೂಕ ಪ್ರಾಣಿ ; ಧಣಿಯೊಂದಿಗೆ

ಮಾತನಾಡೀತೇ ಪಾಪ? ಅಷ್ಟಕ್ಕೂ ಮನುಷ್ಯರೊಂದಿಗೇ ಅವರು ಮಾತ ನಾಡುವುದು ಕಡಿಮೆ. ಇನ್ನು ನಾಯೊಂದಿಗೆ ಮಾತನಾಡುತ್ತಾರೆಯೇ?"

"ಮಾತನಾಡುವುದಕ್ಕಲ್ಲ ಲ್ಯೂಸಿ! ಬಂಗಲೆ ತೋಟದಲ್ಲಿ ಬೆಳಸು ಕಡಿಮೆಯಾಗುತ್ತಿದೆಯಂತೆ. ಹಣ್ಣುಗಳು ಕಳುವಾಗುತ್ತಿರಬಹುದು. ತೋಟದ ಕಾವಲಿಗೊಂದು ನಾಯಿ ಇರಲಿ ಎಂದು ಕೇಳಿದರು. ನಾಡಿದ್ದು ನಮ್ಮ ಮರಿಗಳಲ್ಲಿ 'ಒಂದನ್ನು ತಂದು ಕೊಡು' ಎಂದು ಹೇಳಿದ್ದಾರೆ."

"ತಂದುಕೊಡುವುದಾಗಿ ಮಾತುಕೊಟ್ಟು ಬಂದಿರುವಿರೋ ಇಲ್ಲವೋ?"

"ಹೌದು" ಎನ್ನುತ್ತ ತನಗೂ ತನ್ನ ಧಣಿಗೂ ನಡೆದ ವಿಚಾರಗಳನ್ನು ಸ್ಯಾಮ್ಯುಯಲ್ಲನು ಸವಿಸ್ತಾರವಾಗಿ ಲ್ಯೂಸಿಗೆ ತಿಳಿಸಿದನು. ಅದನ್ನು ಕೇಳಿ ಲ್ಯೂಸಿ ವ್ಯಾಖ್ಯಾನ ಮಾಡಿದಳು:

"ನನಗೆ ಗೊತ್ತು; ಕೈಬಿಚ್ಚಿ ದುಡ್ಡು ಕೊಡುವ ಮನುಷ್ಯನೇ ಬಂಗಲೆ ಧಣಿ? ಪುಕ್ಕಟೆ ಬಂದರೆ ಬೇಡ ಎನ್ನತಕ್ಕವರಲ್ಲ. ಅಂತೂ ಮಾತುಕೊಟ್ಟು ಬಂದಿರಿ."

"ಹೌದು ಲ್ಯೂಸಿ! ಧಣಿಯಂತ ದೊಡ್ಡ ಮನುಷ್ಯರು ಕೇಳಿದರೆ ಥಟಕ್ಕನೆ ಇಲ್ಲ ಎಂದು ಹೇಳಿ ಬಿಡುವುದು ಹೇಗೆ? ನೀನೇ ಹೇಳು."

"ನೀವು ಮಾಡುವುದೆಲ್ಲ ನಾನು ಹೇಳಿದಂತೆಯೇ. ಏನಾದರೂ ಹಣ ತಂದಾರು. ಸಣ್ಣ ಪುಟ್ಟ ಸಾಲಗಳನ್ನು ತೀರಿಸಿ ಸಂಕಟದಿಂದ ಪಾರಾ ಗೋಣ ಎಂದೆಲ್ಲ ಎಣಿಸಿದ್ದೆ. ಇವರೇನೆಂದರೆ ನಾಯಿಮರಿ ತಂದುಕೊಡು ತ್ತೇನೆಂದು ಮಾತು ಕೊಟ್ಟು ಬಂದಿದ್ದಾರಂತೆ! ಸರಿ ಸರಿ; ನಿಮ್ಮ ದಾಕ್ಷಿಣ್ಯ ದಿಂದ ನಮಗೆ ಉಳಿಗಾಲವೆಲ್ಲಿಂದ ಬರಬೇಕು?"

ಲ್ಯೂಸಿ ಕೋಪೋದ್ದೀಪಿತಳಾದಳು.

"ಏನದು ?" ಎನ್ನುತ್ತ ಆರ್ಥರನು ತಂದೆ ತಾಯಿಗಳ ನಡುವೆ ಬಂದು ನಿಂತನು. ಅವನನ್ನು ಕುರಿತು ಲ್ಯೂಸಿ ಹೇಳಿದಳು :

"ನಾಯಿಮರಿಯನ್ನು ಬಂಗಲೆ ಧಣಿಗಳಿಗೆ ಕೊಡುವಂತೆ ಮಾತಾಗಿದೆಯಂತೆ ಆರ್ಥರ್ !"

"ಎಷ್ಟು ಕೊಡುತ್ತಾರಂತೆ?" ಆರ್ಥರನು ಆತುರದಿಂದ ಕೇಳಿದನು.

"ಕೊಡುಗಿಡುವ ಮಾತು ಏನೂ ಇಲ್ಲವಂತೆ .... .... ಪುಕ್ಕಟೆ ಕೊಡಬೇಕಂತೆ .... .... ತೋಟದ ಕಾವಲಿಗೆ ಬೇಕಂತೆ."

ತಾಯಿಯ ಮಾತನ್ನು ಕೇಳಿ ಆರ್ಥರ್ ಹೇಳಿದ:

"ಹಾಗಾದರೆ ಬೇಡ. ಫಿಲಿಪ್ಸನು ಅದನ್ನು ಎರಡು ಹೊನ್ನಿಗೆ ಕೇಳಿದ್ದಾನೆ. ಮರಿಯನ್ನು ಹಿಡಿದುಕೊಂಡು ಹೋಗುವುದಕ್ಕೆ ನಾಳೆ ಬರುತ್ತಾನಂತೆ. ಛಳಿಗಾಲ ಸಮೀಪಿಸುತ್ತ ಬಂತು. ಈ ಸಲವಾದರೂ ಉಣ್ಣೆ ಬಟ್ಟೆಗಳನ್ನು ಕೊಳ್ಳದಿದ್ದರೆ ನಾವೆಲ್ಲ ಕೊರೆಯುವ ಛಳಿಯಲ್ಲಿ ಮಂಜುಗಡ್ಡೆಗಳಾಗುವುದು ದಿಟ! ಪಟ್ಟಣದ ತೋಟದ ಒಡೆಯರೊಬ್ಬೊಬ್ಬರೂ ಛಳಿಗಾಲದಲ್ಲಿ ತಮ್ಮ ತೋಟಗಾರರಿಗೆ ಬಟ್ಟೆಬರೆಗಳನ್ನು ಕೊಂಡುಕೊಡುತ್ತಾರೆ. ಕ್ರಿಸ್‌ಮಸ್ ಹಬ್ಬಕ್ಕೆ ತೋಟಗಾರರಿಗೂ ಅವರ ಮಡದಿ ಮಕ್ಕಳಿಗೂ ಸಾಕಾಗುವಷ್ಟು ತಿಂಗಳ ದವಸ ಬಹುಮಾನವಾಗಿ ಹಂಚುತ್ತಾರೆ. ಆದರೆ ಈ ನಮ್ಮ ಧಣಿ! ಇವರೇನು ಕೊಡುತ್ತಾರೆ? ಬಟ್ಟೆಯೂ ಇಲ್ಲ; ಬರೆಯೂ ಇಲ್ಲ. ಮೈಮೇಲೆ ಬಾಸುಂಡೆ ಏಳುವಂತೆ ಬೆತ್ತ ಬೇಕಾದರೆ ಹಾಕಿಯಾರು. ಇವರು ಬಹುಮಾನ ಬೇರೆ ಕೊಟ್ಟಾರು! ಬಿಟ್ಟಿ ಚಾಕರಿ ಬೇಕಾದಷ್ಟು ಮಾಡಿಸಿಕೊಂಡಾರು. ಮಾರಾಟ ಮಾಡಿ ತಂದ ಹಣ ಬಳಿದು ಬಾಚಿಕೊಂಡಾರು. ನಮ್ಮ ಪಾಲು —ಎಲ್ಲರೂ ಅರ್ಧಕೊಟ್ಟರೆ ಇವರು ಕಾಲು! ಅದನ್ನಾದರೂ ನ್ಯಾಯವಾಗಿ ಕೊಟ್ಟಾರೆ? ನಾವೇನು ಅವರ ಗುಲಾಮರೇ? ಎಲ್ಲ ಮಾಲೀಕರಂತೆ ಇವರೇಕೆ ಇರಬಾರದು? ಕೊಡುವ ಕಾಲುಪಾಲನ್ನು ಬೇಬಾಕಿಯಾಗಿ-ಎಂದು ಕೊಟ್ಟಿದ್ದಾರೆ ಬೆರಳುಮಡಿಸಿ ಹೇಳಲಿ. ಇವರಿಗೆ ಈಗ ನಾಯಿಮರಿ ಬೇಕೆ;

ಅದೂ ಪುಕ್ಕಟೆ ! ಆಗದು ಎಂದುಬಿಡಪ್ಪ."

ಆರ್ಥರನು ಇನ್ನೂ ಏನೇನೋ ತನ್ನ ತಂದೆಯೊಡನೆ ವಾದಿಸಿದ.

"ಬೇಡ ಆರ್ಥರ್ ! ಹಾಗೆನ್ನಬಾರದು. ಮಾತು ಕೊಟ್ಟ ಮೇಲೆ ಮುರಿಯಬಾರದು. ಅದು ಮಾನವರಿಗೆ ಧರ್ಮವಲ್ಲ. ಒಂದು ಮರಿಯನ್ನು ಫಿಲಿಪ್ಸನಿಗೆ ಮಾರು ; ಬೇಡ ಎನ್ನಲಿಲ್ಲ. ಆದರೆ ಮತ್ತೊಂದು ಮರಿ ಇದೆಯಲ್ಲ ; ಅದನ್ನೆ ಧಣಿಗೆ ಕೊಟ್ಟುಬಿಟ್ಟರಾಯಿತು"

ಎಂದು ಸ್ಯಾಮ್ಯುಯಲ್ ಹೇಳಿದನು. ಆದರೆ ಆರ್ಥರನು ಒಪ್ಪಲಿಲ್ಲ. ಅವನು ಹೇಳಿದ :

"ಮತ್ತೊಂದು ಮರಿ ! ಅದನ್ನು ಪಟ್ಟಣದ ದಿನಸಿ ಅಂಗಡಿ ವಿಲಿಯಮ್ಸನಿಗೆ ನಾಲ್ಕು ಹೊನ್ನುಗಳಿಗೆ ಮಾರುವುದಾಗಿ ಮಾತು ನಡೆದಿದೆ."

"ಹಾಗಾದರೆ ?" ಸ್ಯಾಮ್ಯುಯಲ್ ನಿರಾಶನಾದ.

"ಆಗದು." ಆರ್ಥರ್ ದೃಢವಾಗಿ ಹೇಳಿದ.

"ನಲವತ್ತು ಹೊನ್ನು ಬರುವುದಾದರೂ ಕೂಡದು. ಬಂಗಲೆ ಧಣಿಗೆ ಮಾತು ಕೊಟ್ಟಮೇಲೆ ನಡೆಸಿಕೊಡಲೇ ಬೇಕು. ಮಾತು ಮುರಿದು ಮಾನವಿಲ್ಲದೆ ತಿರುಗುವುದಕ್ಕಿಂತ ಮಣ್ಣುಪಾಲಾಗುವುದು ಮೇಲು."

ಸ್ಯಾಮ್ಯುಯಲ್ಲನು ಭಾವಾವೇಶದಲ್ಲಿ ಮುಳುಗಿದ. ಆರ್ಥರನ ದೃಢ ನಿಶ್ಚಯವು ಕಡಿಮೆಯಾದುದಲ್ಲ. "ಆಗಲೇ ಆಗದು" ಎಂದ ಅವನು ಮತ್ತೊಮ್ಮೆ.

"ಮಾತು ನಿಲ್ಲಿಸಿಕೊಳ್ಳುವವರಲ್ಲಿ ನಾವೂ ನಿಲ್ಲಿಸಿಕೊಳ್ಳಬೇಕು. ಬಂಗಲೆ ಧಣಿಯಂತೆ ನಿಮಿಷಕ್ಕೆ ನಾಲ್ಕಾವರ್ತಿ ಮಾತು ಮುರಿಯುವವರ ಬಳಿ ನಾವೇನಂತೆ ಮಾತು ಉಳಿಸಿಕೊಳ್ಳುವುದು ?

ಲ್ಯೂಸಿ ತಲೆಹಾಕಿ ಮಾತನಾಡಿದಳು. ಸ್ಯಾಮ್ಯುಯಲ್ ಪ್ರತ್ಯುತ್ತರ ವಾಗಿ ಹೇಳಿದನು :

" ಇರಬಹುದು ; ಆದರೂ ಅವರು ಮಾತು ಮುರಿದರೆ ಅವರಂತೆ ನಾವೂ ಮುರಿಯಬಹುದೇ ? ಕೊಟ್ಟ ಮಾತು ಉಳಿಸಿಕೊಳ್ಳುವುದು ನಮ್ಮ ಧರ್ಮ. ಅವರು ಮಾತು ಮುರಿದರೆಂದು ಅವರಿಗಾಗಿ ನಮ್ಮ ಧರ್ಮ ಕೆಡಿಸಿ ಕೊಳ್ಳುವುದು ಇದೆಂತಹ ಹುಚ್ಚು ? ನೀನು ಕೊನೆಯದಾಗಿ ಹೇಳುವು ದಾದರೂ ಏನು ಆರ್ಥರ್ ?

" ನಾನೇನು ಮಾಡಲಪ್ಪ ? ಆಗದು : ನಿನ್ನಂತೆ ನಾನೂ ಮಾತು ಕೊಟ್ಟಿದ್ದೇನೆ. ಆದರೆ ನಿನ್ನ ಮಾತು ಹೋದರೆ ಅದರಿಂದಾಗುವ ನಷ್ಟ ಏನೂ ಇಲ್ಲ. ನನ್ನ ಮಾತು ಹೋದರೆ ನಾಲ್ಕು ಹೊನ್ನು ನಷ್ಟ. ಯಾವುದು ಮುಖ್ಯ ನೀನೇ ನೋಡಿಕೋ. ಅಷ್ಟಕ್ಕೂ ಮಾತು ಕೊಡುವುದಕ್ಕೆ ಮುನ್ನ ಮನೆಯವರನ್ನೊಂದು ಮಾತು ಕೇಳಬೇಕಾಗಿತ್ತು. ಹಾಗೆ ಕೇಳದೆ ಇದ್ದುದು ನಿನ್ನ ತಪ್ಪು. ಇರಲಿ; ಬಂಗಲೆ ಧಣಿಯಂತಹ ಬಾಯಿ ಬಡುಕ ಬಡಾಯಿ ಗಾರನೊಂದಿಗೆ ನಿನ್ನ ಮಾತು ಉಳಿಯಬೇಕು ; ವಿಲಿಯಮ್ಮನಂತಹ ಒಳ್ಳೆಯವನೊಂದಿಗೆ ನನ್ನ ಮಾತು ಅಳಿಯಬೇಕಲ್ಲವೆ ? ಇದೆಂತಹ ನ್ಯಾಯ ವಪ್ಪ? ದುಡ್ಡು ಕೊಟ್ಟು–ಅದರಲ್ಲಿಯೂ ನಾಲ್ಕು ಹೊನ್ನು ! ಒಂದಲ್ಲ ಎರಡಲ್ಲ! ಕೊಳ್ಳಲು ಸಿದ್ಧರಾದವರನ್ನು ಮರೆತು ದಂಡಕ್ಕೆ ದ್ರೋಹಕ್ಕೆ ಕೇಳುವ ಧಣಿಗೆ ಕೊಟ್ಟುಬಿಡಬೇಕಲ್ಲವೆ? ಆಗದಪ್ಪ—ಆಗದು."

ಆರ್ಥರನು ದೃಢವಾಗಿ ಹೇಳಿದನು. ಆವನ ತಂದೆ ತಬ್ಬಿಬ್ಬಾದನು. ಲ್ಯೂಸಿ ಈಗ ಎಷ್ಟಾದರೂ ಮಗನ ಪಕ್ಷವೇ! ಆಗ ಸ್ಯಾಮ್ಯುಯಲ್ಲನು ಒಂದು ಬಗೆಯ ಆವೇಶದಿಂದ ಹೆಂಡತಿ ಮತ್ತು ಮಗನನ್ನು ಕುರಿತು ಕೇಳಿದನು :

" ಆಡಿದ ಮಾತನ್ನು ತಪ್ಪಲೇ ಕೂಡದು. ಆದರೆ ವಿಲಿಯಮ್ ಮತ್ತು ಬಂಗಲೆ ಧಣಿ ಇವರಿಬ್ಬರಲ್ಲಿ ಧಣಿಗೆ ಕೊಟ್ಟ ಮಾತನ್ನು ನಡೆಸಲೇ ಬೇಕು.

ಅದಕ್ಕೆ ಕಾರಣ ಗೊತ್ತೇ ಇದೆ. ಈಗಾಗಲೇ ಧಣಿಗಳು ನನ್ನ ಮೇಲೆ ಬಹಳ ಕುಪಿತರಾಗಿದ್ದಾರೆ. ಆರ್ಥರ್! ನೀನು ಹೇಳುವಂತೆ ಅದು ದಂಡವೋ, ದ್ರೋಹವೋ ದೈವವೇ ಬಲ್ಲದು. ಆದರೆ ಧಣಿಯ ಮಾತನ್ನೂ ಸ್ವಲ್ಪ ಆಳವಾಗಿ ಆಲೋಚಿಸಿ ನೋಡಬೇಕು. ಅವರು ಹೇಳುತ್ತಾರೆ: ' ಬರಬರುತ್ತ ಬೆಳಸು ಕಳುವಾಗಿ ಕಡಿಮೆಯಾಗತೊಡಗಿದೆ. ತೋಟದ ಕಾವಲಿಗೊಂದು ನಾಯಿ ಬೇಕು ' ಎಂದು. ನೀನು ಹೇಳಿದ್ದೆಯಂತೆ—ನಮ್ಮಲ್ಲಿ ಎರಡು ಮರಿಗಳಿವೆ ಎಂದು?"

"ಹೌದು; ಹೇಳಿದ್ದೆನಪ್ಪ!"

"ಅದರಲ್ಲಿ ಒಂದನ್ನು ಅವರಿಗೆ ಕೊಡುತ್ತೇನೆ ಎಂದು ಸಹ ಅಂದಿದ್ದೆಯಂತೆ!"

"ಅಂದಿದ್ದೆನಪ್ಪ! ನಿಜ; ಆದರೆ ಪುಕ್ಕಟೆ ಕೊಡುವೆನೆಂದು ನಾನೇನೂ ಹೇಳಿರಲಿಲ್ಲವಲ್ಲ."

"ನೀನೇನು ಹೇಳಿದ್ದೆಯೋ ಅವರಿಗೇನು ಕೇಳಿಸಿತೋ?"

"ಹಣ ಕೊಡುವ ಮಾತಾದರೆ ಅವರಿಗೆ ಕಿವಿ ಕೇಳಿಸದು; ಒಪ್ಪ ಬೇಕಾದದ್ದೇ! ಆದರೆ ಹಣ ಬರಬೇಕಾದರೆ ಅವರ ಕಿವಿ ನೆಟ್ಟಗಾಗುತ್ತದೆ. ಪುಕ್ಕಟೆ ಕೇಳುವುದರಲ್ಲಿ, ಪುಕ್ಕಟೆ ತರುವುದರಲ್ಲಿ ಅವರನ್ನು ಬಿಟ್ಟರಿಲ್ಲ."

"ಆಯಿತು ಆರ್ಥರ್! ನಿನ್ನ ತಾಯಿಗೆ ಹೇಳಿದ ಮಾತನ್ನೇ ನಿನಗೂ ಹೇಳಬೇಕಾಯಿತು. ಬಂಗಲೆ ಧಣಿ ವಿಚಾರವನ್ನು ವ್ಯಾಖ್ಯಾನ ಮಾಡಿ ವಿವೇಕ ಕೆಡಿಸಿಕೊಳ್ಳುವುದು ಬೇಡ."

"ಹಾಗಾದರೆ ಅವರು ಆಡಿದ್ದು — ಮಾಡಿದ್ದು ಎಲ್ಲಾ ಸರಿ ಅಲ್ಲವೇನಪ್ಪ?"

"ಸರಿಯೋ —ತಪ್ಪೋ—ನಮಗ್ಯಾಕದರ ವಿಚಾರ?"

"ಹಾಗಾದರೆ?" ಆರ್ಥರ್ ಕೇಳಿದನು.

“ ಅವರು ಒಂದು ಮರಿಯನ್ನು ಕೇಳಿದರು. ‘ ಆಗಲಿ ’ ಎಂದು ಮಾತುಕೊಟ್ಟು ಬಂದೆ. ಈಗ ನೀನು ‘ ಆಗದು ’ ಎಂದರೆ ನನ್ನ ಮಾತು ಸುಳ್ಳಾಗುತ್ತದೆ. ಏನೇ ಆಗಲಿ; ನನ್ನ ಮಾತು ಉಳಿಸು. ಅದರಿಂದ ಕೇಡುಕಾಗಲಾರದು ಎಂದು ನನ್ನ ನಂಬಿಕೆ. ಬಡವರಾದವರು ನಾವು ಸತ್ಯ ಹೇಳಿಯೇ ಇಷ್ಟೊಂದು ಕಷ್ಟಕ್ಕೆ ಒಳಗಾಗಿದ್ದೇವೆ. ಇನ್ನು ಸುಳ್ಳು ಹೇಳಿ ಬದುಕಲಾದೀತೇ ಆರ್ಥರ್? ಎಷ್ಟಾದರೂ ನಾವು ಮುಂದಿನ ಮಾತನ್ನು ಒಂದಷ್ಟು ಗಮನಿಸಲೇ ಬೇಕು.”

ತಂದೆಯು ದೈನ್ಯದಿಂದಲೂ ನಿಸ್ಪೃಹತೆಯಿಂದಲೂ ಆಡಿದ ಮಾತುಗಳನ್ನು ಕೇಳಿ ಆರ್ಥರನ ಮನಸ್ಸು ಚಲಿಸಿತು; ಕ್ರಮೇಣ ಕರಗಿತು; ಅವನು ಕೇಳಿದನು :

“ ಈಗೇನು ಮಾಡಬೇಕೆನ್ನುವಿಯಪ್ಪ? ”

“ ಮಾತನ್ನು ಉಳಿಸಿಕೊಳ್ಳುವುದಕ್ಕಾಗಿ ಹೊನ್ನಿನ ಹಂಬಲವನ್ನು ಬಿಡು. ಕೊಡುವ ದೇವರು ಹೇಗಾದರೂ ಕೊಟ್ಟಾನು. ಅವನು ಕೊಟ್ಟರೂ ಬಿಟ್ಟರೂ ‘ ನಾವು ಯಾವಾಗಲೂ ಆಡುವುದು, ನೋಡುವುದು, ಮಾಡುವುದು ಒಡೆಯರ ಒಡೆಯನಾದ ದೇವೇಶನು ಒಪ್ಪುವಂತಿರಲಿ ’ ಎಂದು ಅಂದು ಚರ್ಚಿನಲ್ಲಿ ಪಾದ್ರಿಗಳು ಮಾಡಿದ ಉಪದೇಶವನ್ನು ನೀನು ಮರೆತಿರಲಾರೆಯಲ್ಲವೆ? ಆ ಉಪದೇಶದಂತೆ ಇರಲಿ ನಮ್ಮ ನಡೆ, ನುಡಿ, ನೋಟ ಎಲ್ಲ. ಅಷ್ಟೇ ನಾನು ಹೇಳುವುದು. ನೀನು ಒಪ್ಪುವುದಾದರೆ ನಾಡಿದ್ದು ಮರಿಯನ್ನು ತೆಗೆದುಕೊಂಡು ಹೋಗಿ ಬಂಗಲೆ ಧಣಿಗೆ ಕೊಟ್ಟು ಬಿಡೋಣ.”

“ ನೀನೇನು ಹೇಳುವಿಯಮ್ಮ? ”

ಆರ್ಥರನು ತಾಯಿಯನ್ನು ಕೇಳಿದನು. ಲ್ಯೂಸಿ ಹೇಳಿದಳು :

“ ಏನು ಹೇಳಲಪ್ಪ? ನಿನ್ನಂತೆಯೇ ‘ ಕೂಡದು ’ ಎಂದು ನಾನೂ ಮೊದಲು ಹೇಳಿದೆ. ಆದರೆ ಈಗ ನಿನ್ನ ತಂದೆ ಹೇಳುವುದನ್ನೆಲ್ಲ ಯೋಚಿಸಿ

ನೋಡಿದರೆ 'ಚಿನ್ನಕ್ಕೂ ಮಿಂಚಿದ್ದು ಮಾನವನ ವಚನ' ಎಂದು ಪಾದ್ರಿಗಳು ಹೇಳಿದ್ದು ನನಗೆ ನೆನಪಾಗುತ್ತಿದೆ. ನಿಜ; ಅವರು ಮನೆಯ ಯಜಮಾನರು; ನಾವು ಅವರ ಅಧೀನರು; ಆಶ್ರಿತರು. ಅವರು ಹೇಳಿದಂತೆ ನಡೆಯುವುದೇ ನಮ್ಮ ಧರ್ಮ. ನಮಗಿರುವ ಕಷ್ಟದಲ್ಲಿ ಕೋಪವೇ ಬರುತ್ತದೆ. ಆದರೆ ಅವರ ಶಾಂತತೆಯನ್ನು ನಾವೂ ಕಲಿಯಬೇಕು. ಆ ಶಾಂತತೆಯಿಂದ ಕೋಪವನ್ನು ಗೆಲ್ಲಬೇಕು."

ಲ್ಯೂಸಿ ಆಡಿದ ಮಾತುಗಳು ಈ ಸಲ ಪರಿಪೂರ್ಣವಾಗಿ ಅರ್ಥಗರ್ಭಿತ ವಾಗಿದ್ದುವು. ಆರ್ಥರನು ಅವುಗಳಿಗೆ ಕಿವಿಗೊಟ್ಟನು. ಅವನು ತಾಯ್ತಂದೆ ಯರ ಮಾತುಗಳನ್ನು ಗ್ರಹಿಸಿ ಅವುಗಳಿಗೆ ಮನ್ನಣೆ ಕೊಟ್ಟನು. ಸ್ಯಾಮ್ಯುಯಲ್ಲನಿಗೆ ಇದರಿಂದುಂಟಾದ ಸಂತೋಷವನ್ನು ವರ್ಣಿಸಲಾದೀತೇ? ಅಷ್ಟರಲ್ಲಿ ಲ್ಯೂಸಿ ಮತ್ತೆ ಹೇಳಿದಳು:

"ಅವರು ಹೇಳುವಂತೆ ಮುಂದಿನ ಮಾತನ್ನೂ ಒಂದಷ್ಟು ಯೋಚಿಸ ಬೇಕು. ಇಂದಿನ ಮಾತೇ ಮುಖ್ಯವಲ್ಲ ಆರ್ಥರ್!"

ಲ್ಯೂಸಿ ಈಗ ಗಂಡನ ಪರವಾಗಿ ವಾದಿಸಿದಳು. ನಾಯಿಮರಿಗಳಲ್ಲಿ ಒಂದನ್ನು ಬಂಗಲೆ ಧಣಿಗೆ ಕೊಟ್ಟು ಬಿಡತಕ್ಕದ್ದು ಎಂದು ಕುಟುಂಬ ಸಭೆ ಯಲ್ಲಿ ತೀರ್ಮಾನವಾಯಿತು.

"ಸರಿ" ಎಂದ ಸ್ಯಾಮ್ಯುಯಲ್ ಮತ್ತೆ ಸಂತೋಷದಿಂದ.



ಧಣಿಯ ಚಿತ್ರ

# ಡೇನಿಯಲ್ಲನ ಸೇವೆ

ಪ್ರಕರಣ ೮

ನಾಯಿ ಮರಿಯನ್ನು ತಂದುಕೊಡುವುದಾಗಿ ಮಾತುಕೊಟ್ಟು ಸ್ಯಾಮ್ಯುಯಲ್ಲನು ಹೊರಟುಹೋದ ತರುವಾಯ ಪೀಟರನು ತನ್ನ ಬಂಗಲೆಯ ಹಜಾರದಲ್ಲಿ ಆರಾಮ ಕುರ್ಚಿಯಲ್ಲಿ ಕುಳಿತು ಪರಿಪರಿಯಾಗಿ ಆಲೋಚಿಸ ತೊಡಗಿದನು :

"ತರಲಿ; ನಾಯಿಮರಿ ತರಲಿ. ನಾವು ದಿನವೂ ತಿಂದು ಮಿಕ್ಕ ರೊಟ್ಟಿಯ ಚೂರುಗಳನ್ನೂ ಮಾಂಸದ ತುಂಡುಗಳನ್ನೂ ತಿಪ್ಪೆಯಗುಂಡಿಯಲ್ಲಿ ಎಸೆಯುವುದಕ್ಕೆ ಬದಲು ಈ ಶ್ವಾನದ ಹೊಟ್ಟೆಗೆ ತುಂಬಿಬಿಟ್ಟರಾಯಿತು: ಅದು ಜೀವಿಸಿಕೊಳ್ಳುತ್ತದೆ; ಮನೆಗೆ ಕಾವಲೂ ಆಯಿತು. ತೋಟದ ಮಾತು ಹಾಗಿರಲಿ. ತೋಟದಲ್ಲಿ ಕಳುವಾದರಲ್ಲವೆ ತೋಟಗಾರನ ಮಾತು! ಸ್ಯಾಮ್ಯುಯಲ್ಲನಿಗಾಗಿ ಹೇಳಿದ ಮಾತು ಅದು! ಇರಲಿ; ಹಾಗೂ ನಾಯಿಗಾಗಿ ಆಗುವ ಖರ್ಚನ್ನು ಒಂದೊಂದು ಸಲ ಸ್ಯಾಮ್ಯುಯಲ್ಲನ ತಲೆಯ ಮೇಲೆಯೇ ತಳ್ಳಿಬಿಟ್ಟರಾಯಿತು. ಅವನೇ ವಹಿಸಲಿ; ಯಾರ ಧರ್ಮಕ್ಕೆ ವಹಿಸುತ್ತಾನೆ? 'ಈ ತೋಟದ ಬೆಳಸಿನಲ್ಲಿ ನಿನ್ನದೂ ಕಾಲು ಪಾಲು ಇದೆ. ಅದನ್ನು ಕಾಪಾಡಿಕೊಳ್ಳುವ ಭಾರ ನಿನಗೂ ಸೇರಿದ್ದೇ ಅಲ್ಲವೇ?' ಎಂದೆಲ್ಲ ಹೇಳಿ ಅವನನ್ನು ಹೇಗೂ ಒಡಂಬಡಿಸಿದ್ದೇನೆ. ಅವನೋ ಗಗ್ಗ! ಹೇಳಿದ್ದನ್ನೆಲ್ಲ ನಿಜವೆಂದೇ ನಂಬಿಬಿಡುತ್ತಾನೆ. ಈ ಮಂಕನನ್ನು ಮೋಸಮಾಡುವು

ದೊಂದು ಪ್ರಯಾಸವೇ? ಬೆಳಸನ್ನು ಕಾಯುವುದಕ್ಕೆ ಕೂಲಿ ಯಾರು ಕೊಡು ವುದು? ತೆರಲಿ; ಏಸು ಕೊಳ್ಳೆ ಹೋಗಿದ್ದು? ಅವನ ಮಗ ಆರ್ಥರನೂ ವಾರಕ್ಕೊಮ್ಮೆ ನಾಯಿಯನ್ನು ತೊಳೆಯಲಿ. ಆಗೊಮ್ಮೆ ಈಗೊಮ್ಮೆ ಅವನೂ ಹಳ್ಳಿಯಿಂದ ಅದಕ್ಕೆ ತಿಂಡಿಯನ್ನು ತಂದು ಹಾಕಲಿ ..... ...... ಅಹ್ಹಹ!"

ತನಗೂ ತಿಳಿಯದೆ ಒಮ್ಮೆ ಪೀಟರನು ಗಟ್ಟಿಯಾಗಿ ನಕ್ಕುಬಿಟ್ಟನು. ಆಳವಾದ ಆಲೋಚನೆಯಲ್ಲಿದ್ದ ಅವನು ಹಲವಾರು ನಿಮಿಷಗಳನ್ನು ಏಕಾಂತ ವಾಗಿ ಕಳೆದಿದ್ದನು. ಆಗ ಡೇನಿಯಲ್ಲನು ಹದಗೊಳಿಸಿದ ರೊಟ್ಟಿ, ಬೇಯಿ ಸಿದ ಮಾಂಸ, ಕೋಸುಗೆಡ್ಡೆಯ ಪಲ್ಯ, ಒಂದು 'ಕೆಟಲ್' ತುಂಬ ಚಹ, ತಟ್ಟೆ, ಬಟ್ಟಲು, ಚಾಕು, ಚಮಚ ಇವುಗಳನ್ನು ತಂದು ಯಜಮಾನನ ಮುಂದಿದ್ದ ಮೇಜಿನ ಮೇಲಿರಿಸಿದನು. ಪೀಟರನ ಊಟವೂ ಮುಗಿಯಿತು. ಚಹವನ್ನು ಬಟ್ಟಲಿಗೆ ಬಗ್ಗಿಸಿ ಪೀಟರನೊಂದು ಗುಟುಕು ಕುಡಿದ. ಏನನ್ನೋ ಹೇಳುವುದಕ್ಕಾಗಿ 'ಡೇನಿಯಲ್' ಎಂದು ಅವನು ಕೂಗಿದನು. ಅನತಿದೂರದಲ್ಲಿ ವಿನಯದಿಂದ ನಿಂತು, ಆತುರದಿಂದ ಧಣಿಯ ಅಪ್ಪಣೆ ಯನ್ನು ನಿರೀಕ್ಷಿಸುತ್ತ ಅವನನ್ನೇ ನೋಡುತ್ತಿದ್ದ ಡೇನಿಯಲ್ಲನು ತಕ್ಷಣ ಅಡುಗೆಯಮನೆ ಕಡೆ ಓಡಿದ್ದ. ಬಟ್ಲರನನ್ನು ಕಂಡು ಪೀಟರನಿಗೆ ತಡೆಯ ಲಾರದ ಕೋಪವು ಉಕ್ಕಿ ಬಂದಿತು. ಅನನೆಂದ:

"ಈ ಹಾಳು ಹೆಣವನ್ನು ಕಟ್ಟಿಕೊಂಡು ನಾನೆಲ್ಲಿ ಹೋಗಿ ಹಾಳಾಗಲಿ? ಕಿವುಡು—ಒಂದೇ ಕಿವುಡು! 'ಡೇನಿಯಲ್' ಎಂದು ನಾನಿನ್ನೂ ಕೂಗಿ ಮುಗಿಸಲಿಲ್ಲ; ಆಗಲೇ ಓಡಿದ್ದಾನೆ—ಅಡುಗೆಮನೆ ಕಡೆ. ಅದೇನನ್ನು ತಂದು ನನ್ನ ಮುಂದಿರಿಸುತ್ತಾನೋ ಆ ಗಗ್ಗನೇ ಬಲ್ಲ!"

ಪೀಟರನ ಹುಬ್ಬು ಗಂಟು ಕಟ್ಟಿತು.

ಡೇನಿಯಲ್ಲನು ಕುರುಡ, ಕಿವುಡ ಎಂದು ಪೀಟರನು ಅನೇಕ ಬಾರಿ ಅವನನ್ನು ನಿಂದಿಸಿದ್ದಾನೆ. ಆದರೆ ಇತರರನ್ನು ನಾವೇನಾದರೂ ಅನ್ನ- ಬಯಸಿದಾಗ, ಅವರಲ್ಲಿ ಏನನ್ನು ಕುರಿತು ನಾವು ಆಕ್ಷೇಪಣೆ ಮಾಡುತ್ತೇವೋ

ಅದು ನಮ್ಮಲ್ಲಿ ಕೆಲವು ವೇಳೆ ಮನೆಮಾಡಿಕೊಂಡಿರುತ್ತವೆ; ನಾವು ಯಾವುದನ್ನು ಇತರರಲ್ಲಿ ದೂಷಿಸುತ್ತೇವೋ ಆ ದುರ್ಗುಣಗಳಿಗೆ ಅನೇಕಸಲ ನಾವೇ ದಾಸರಾಗಿರುತ್ತೇವೆ. ಇತರರಲ್ಲಿ ನಿಂದ್ಯವಾದುದೆಂದು ನಮಗೆ ಕಂಡುಬಂದುದನ್ನು ಮೊಟ್ಟಮೊದಲು ನಾವು ನಮ್ಮಿಂದ ದೂರ ಮಾಡಿಕೊಳ್ಳಬೇಕು. ಅದೇ ಅಭಿವೃದ್ಧಿಯ ಪ್ರಥಮ ಹಂತ! ಅಭಿನಂದನೆಗೆ ಅರ್ಹವಾದುದೂ ಅದೇ! ಪೀಟರನನ್ನೇ ದೃಷ್ಟಾಂತವಾಗಿ ತೆಗೆದುಕೊಳ್ಳೋಣ. ಡೇನಿಯಲ್ಲನನ್ನು ಕಿವುಡನೆಂದ ಇವನು ಎಷ್ಟೋ ಸಲ ಅದೇ ನಿಂದೆಗೆ ಗುರಿಯಾಗುತ್ತಾನೆ. ಹಾಗೂ ಕಿವಿಯಿಲ್ಲದ ಡೇನಿಯಲ್ಲನು ಕಿವುಡನಾಗಿರುವುದು ದೂಷ್ಯವೂ ಅಲ್ಲ; ಪಾಪವೂ ಅಲ್ಲ. ಆದರೆ ಕಿವಿಯಿದ್ದೂ ಎಷ್ಟೋ ಸಲ ಇತರರಲ್ಲಿ ವ್ಯವಹರಿಸುವಾಗ ಅವರಿಂದ ಸದ್ವಿವೇಕವನ್ನು ಕೇಳಿಯೂ ಕೇಳದಂತಿರುವ ಪೀಟರನು ಕಿವುಡನಲ್ಲದೆ ಮತ್ತೇನು? ಕಣ್ಣಿದ್ದರೂ, ಕಣ್ಣೆದುರಿಗೆ ಸ್ಪಷ್ಟವಾಗಿ ಕಾಣುತ್ತಿರುವ ಸದ್ವಿಷಯಗಳನ್ನು ಗ್ರಹಿಸದೆ ಇರುವುದರಿಂದ ತಾನೆಷ್ಟು ಕುರುಡನೆಂದು ಪೀಟರನಿಗೆ ಅರಿವಾಗುತ್ತಿತ್ತೇ? ಲೋಕದ ವಾಡಿಕೆಯೇ ಇಷ್ಟು. ಆಧುನಿಕ ಸಮಾಜದಲ್ಲಿ ಲಕ್ಷಲಕ್ಷಾಂತರ ಜನರು ಕಿವಿಯಿದ್ದರೂ ಕಿವುಡರಂತೆ, ಕಣ್ಣಿದ್ದರೂ ಕುರುಡರಂತೆ, ಕಾಲಿದ್ದರೂ ಹೆಳವರಂತೆ, ಎದೆಗಾರಿಕೆ ಇದ್ದರೂ ಹೇಡಿಗಳಂತೆ, ಜ್ಞಾನವಿದ್ದರೂ ಅಜ್ಞಾನಿಗಳಂತೆ, ಬುದ್ಧಿಯಿದ್ದರೂ ಮಂಕುದಿಣ್ಣೆಗಳಂತೆ, ಬಲವಿದ್ದರೂ ಅಬಲರಂತೆ, ಐಶ್ವರ್ಯವಿದ್ದರೂ ಬಡ ಭಿಕ್ಷುಕರಂತೆ, ವೀರ್ಯವಿದ್ದರೂ ನಿರ್ವೀರ್ಯರಂತೆ, ತೇಜಸ್ಸಿದ್ದರೂ ಕಳೆಗುಂದಿದವರಂತೆ, ಮೃದು ಮನೋಭಾವವಿದ್ದರೂ ಧೂರ್ತರಂತೆ, ಸೌಹಾರ್ದರಾದರೂ ಶತ್ರುಗಳಂತೆ, ಗಾಂಭೀರ್ಯವಿದ್ದರೂ ಅಡಿಗಡಿಗೆ ಅಲ್ಪರಂತೆ, ಕರುಣಿಗಳಾದರೂ ಕಠಿಣರಂತೆ, ದಯಾಶಾಲಿಗಳಾದರೂ ದಾನವರಂತೆ, ಅನೇಕವೇಳೆ ವರ್ತಿಸುತ್ತಿರುವುದು ಏತರಿಂದ? ಅವರನ್ನಾವರಿಸಿದ ಚಪಲತೆಯಿಂದ—ಮನೋದೌರ್ಬಲ್ಯದಿಂದ! ಅಜ್ಞಾನ ತಿಮಿರಾಂಧಕಾರವನ್ನು ಹೃದಯಾಕಾಶದಿಂದ ತೊಡೆದುಹಾಕಿದರಲ್ಲದೆ ಮಾನವನ ಪರಿಪೂರ್ಣ—ಪ್ರಭಾವಯುತ—ಪರಿಣಾಮಕಾರಕ—ಪರಿವರ್ತನೆಯುಂಟಾಗಲಾರದು.

ಒಟ್ಟಿನಲ್ಲಿ, ಕಣ್ಣಿದ್ದವರು ಕುರುಡರಾಗಬಾರದು; ಕಿವಿಯಿದ್ದವರು

ಕಿವುಡರಾಗಬಾರದು; ಕಾಲಿದ್ದವರು ಕುಂಟರಾಗಬಾರದು; ಬುದ್ಧಿಯಿದ್ದವರು ಭ್ರಮಿಸಿ ಬಳಲಬಾರದು; ಶ್ರೀಮಂತಿಕೆಯಿದ್ದವರು ದುರಂತದ ಬಾಲ ಹಿಡಿದು ಓಡಬಾರದು. ಧನಿಕರು ದೈವಜ್ಞರಾಗಿರಬೇಕು; ದುರ್ನುಡಿಗಳನ್ನು ಉಚ್ಚರಿಸದೆ, ದುರಾಚಾರಗಳ ದಾಸರಾಗದೆ, ದೀನದಲಿತರಲ್ಲಿ ದಯಾವಂತರಾಗಿರಬೇಕು. ಹೀಗಿರುವುದೇ ಸಮಾಜದ ಅಂದಿನ, ಇಂದಿನ, ಮುಂದಿನ, ಮುದದಿಂದ ಕೂಡಿದ ಮೋಕ್ಷಕ್ಕೆ ಮೂಲಾಧಾರ! ಬಾಳುವೆಯು ಉಳ್ಳವರ-ಇಲ್ಲದವರ ಒಕ್ಕೂಟ; ಬಡ-ಭಾಗ್ಯವಂತರ ಒರೆಗಲ್ಲು! ಕಸವನ್ನೂ ರಸವನ್ನಾಗಿ ಪರಿವರ್ತನಗೊಳಿಸಬಲ್ಲ ಸ್ಪರ್ಶಶಿಲೆ! ಮಾನವರ ಎದೆಯು ನಿರ್ಮಲಾಂತಃಕರಣದಿಂದ ಕೂಡಿರುವಷ್ಟು ಕಾಲ ಅದು ಮಹಾಮಹಿಮನ ಲೀಲಾಗೃಹವಾಗುವುದು. ಅಲ್ಲಿ, ಆಗಲೆ, ಅಪಾರ ಕರುಣಾನಿಧಿಯ ಲೀಲಾಜಾಲ ವಿನೋದಗಳು ವಿಸ್ಮಯಜನಕವಾಗಿ ವಿಕಾಸಗೊಳ್ಳುವುದು! ವಿಶ್ವವೆಲ್ಲ ವಿಧಾತನಿಂದ ವ್ಯಾಪ್ತವಾದುದು. ವಿಶ್ವದಲ್ಲುಳ್ಳ ಎಲ್ಲ ಪ್ರಾಣಿಕೋಟಿಗಳು ವಿಧಾತನ ಸಂತಾನ. ಆ ಎಲ್ಲ ಪ್ರಾಣಿಗಳಲ್ಲಿ ಪ್ರೇಮದಿಂದ ವರ್ತಿಸುವುದೇ ಆದರ್ಶ ಮಾನವನ ಆದ್ಯ ಕರ್ತವ್ಯ. ಸ್ವಚ್ಛವೂ, ಸುಲಲಿತವೂ ಆದ ಪ್ರೇಮಸೂತ್ರಗಳಿಂದ ವಿರಚಿತವಾದ ಸ್ವರ್ಣಮಯ ಸರಪಣಿಯು ಸೃಷ್ಟಿಯ ಸಕಲ ಮಾನವರನ್ನೂ ಸದಾಕಾಲದಲ್ಲಿಯೂ ಸಚ್ಚಿದಾನಂದ ಸ್ವರೂಪನಾದ ಸಕಲೇಶ್ವರನ ಪವಿತ್ರ ಪಾದಾರವಿಂದಗಳಿಗೆ ಬಂಧಿಸುತ್ತದಲ್ಲವೆ? ಆದುದರಿಂದ ಸ್ವಚ್ಛವಾದ ವಿಶ್ವಪ್ರೇಮದಿಂದಲೇ ಮಾನವರು ವಿಶ್ವೇಶ್ವರನ ಕರುಣೆಗೆ ಪಾತ್ರರಾಗಬಹುದು; ವಿಶ್ವಾತೀತವೂ ಶಾಶ್ವತವೂ ಆದ ಸಾಯುಜ್ಯಕ್ಕೆ ಅರ್ಹರಾಗಬಹುದು.

ಎಂದರೆ, ಮಾನವರ ಮುನ್ನಡೆಯೆಂತಿರಬೇಕು? ನಾವು ನೋಡುವುದು, ಆಡುವುದು, ಮಾಡುವುದು, ಕೊಡುವುದು, ಬಿಡುವುದು, ಎಲ್ಲ ಒಡೆಯನು ಒಪ್ಪುವಂತೆ ಇರಲೇ ಬೇಕು.

ಇರಲಿ; ಆಡುಗೆಮನೆಯ ಕಡೆ ಓಡಿದ ದೇಸಿಯಲ್ಲನು ತನ್ನ ಯಜಮಾನನಿಗೆ ಚಹಕ್ಕೆ ಸಕ್ಕರೆ ಸಾಲದೆಂದು ಊಹಿಸಿದ; ಹಿಂತಿರುಗಿ

ಬಂಗಲೆಗೆ ಬರುವಾಗ ಸಕ್ಕರೆಯ ಜಾಡಿಯನ್ನು ಹೊತ್ತು ತಂದು ಧಣಿಯ ಮುಂದಿರಿಸಿದ. ಇದನ್ನು ಕಂಡ ಪೀಟರನಿಗೆ ಕೋಪ ಒಂದೆಡೆ; ಬೇಸರ ಮತ್ತೊಂದೆಡೆ. ಅವನು ಡೇನಿಯಲ್ಲನನ್ನು ಕುರಿತು ಗದರಿಸಿ ಹೇಳಿದ :

"ನನ್ನೆದುರಿಗೆ ನಿಲ್ಲಬೇಡ; ಸೀಸವನ್ನು ಕರಗಿಸಿ ನಿನ್ನ ಕಿವಿಯಲ್ಲಿ ಸುರಿದವನು ಸಿಕ್ಕಿದರೆ ಅವನ ಕೊರಳನ್ನು ಹಿಸುಕಿ ಕೊಲೆಮಾಡಿಬಿಡಬೇಕೆನ್ನುವಷ್ಟು ಕೋಪ ನನಗೆ. 'ಡೇನಿಯಲ್' ಎಂದು ಕೂಗಿದರೆ 'ಏನು?' ಎಂದು ಕೇಳುವಷ್ಟು ಬುದ್ಧಿ ಇದೆಯೆ ನಿನಗೆ? ನನಗೆ ಬೇಕಾದದ್ದು ಹಾಲು; ನೀನು ತಂದಿರುವುದು ಸಕ್ಕರೆ! ಹೊರಟು ಹೋಗು ಇಲ್ಲಿಂದ.........."

ಡೇನಿಯಲ್ಲನಿಗೆ ಧಣಿಯ ಮಾತುಗಳು ಈ ಸಲವೂ ಸ್ಪಷ್ಟವಾಗಿ ಕೇಳಿಸಲಿಲ್ಲ. ಅವನು ಸಕ್ಕರೆ ಜಾಡಿಯನ್ನು ಹೊತ್ತುಕೊಂಡು ಹೋಗಿ ಅಡುಗೆ ಮನೆಯಲ್ಲಿರಿಸಿದ. ಬರುವಾಗ ರೊಟ್ಟಿಯ ತುಂಡುಗಳನ್ನು ತಟ್ಟೆಯಲ್ಲಿರಿಸಿ ಪೀಟರನ ಮುಂದೆ ತಂದಿಟ್ಟ. ಇದನ್ನು ನೋಡಿದ ಪೀಟರನ ಕೋಪ ಎಲ್ಲೆಯನ್ನು ದಾಟಿತು. ಅವನೆಂದ :

"ಡೇನಿಯಲ್! ಇದುವರೆಗೆ ನೀನು ಹುಟ್ಟಿಗೆ ಕತ್ತೆಯೆಂದೆಣಿಸಿದ್ದೆ. ಆದರೆ ಈಗ ನಿನ್ನ ಪೂರ್ವಿಕರೆಲ್ಲರೂ ಹಾಗೆಯೇ ಎಂದು ತೋರುತ್ತದೆ."

"ಹಾಲು' 'ಸಕ್ಕರೆ' 'ಉಪ್ಪು' 'ರೊಟ್ಟಿ' ಎಂಬ ಒಂದೇ ಮಾತು ಸ್ಪಷ್ಟವಾಗಿ ಕೇಳಿಸದ ಡೇನಿಯಲ್ಲನಿಗೆ ಧಣಿಯಾಡಿದ ಮೇಲ್ಕಂಡ ಅಷ್ಟೊಂದು ಮಾತುಗಳೂ ಒಟ್ಟಾಗಿ ಕೇಳಿಸಬಲ್ಲುವೇ? ಧಣಿ ಎಂದುದೇನೋ-ಡೇನಿಯಲ್ಲನು ಅಂದುಕೊಂಡುದೇನೋ? ಅಂತೂ ಅವನನ್ನೂ ಅವನ ಪೂರ್ವಿಕರನ್ನೂ ಪೀಟರನು 'ಕತ್ತೆ' ಎಂದು ಬೈದುದು ಅವನಿಗೆ ಕೇಳಿಸಲೇ ಇಲ್ಲವೆನ್ನಬೇಕು. ಆದಕ್ಕೆ ಕಾರಣವಾದರೂ ಇಷ್ಟೆ. ತಾನು ಆ ಮುನ್ನ ಧಣಿಯ ಮುಂದೆ ತಂದಿರಿಸಿದ್ದ ರೊಟ್ಟಿಯ ತುಂಡುಗಳನ್ನುಳ್ಳ ತಟ್ಟೆಯನ್ನು ಎತ್ತಿಕೊಂಡು ಹೋದ. ಡೇನಿಯಲ್ಲನು ಅಡುಗೆ ಮನೆಯಿಂದ ತಿರುಗಿ ಬರುವಾಗ ಮತ್ತೆ ಉಪ್ಪಿನ ಜಾಡಿಯನ್ನು ತಂದು ತನ್ನ ಯಜಮಾನನ ಮುಂದಿರಿಸಿ

ದನು ! ಇಂತಹ ವಿಚಿತ್ರ ಸೇವಕನ ವಿಚಿತ್ರ ವರ್ತನೆಯನ್ನು ನೋಡಿ ಪೀಟರನು ತಡೆಯಲಾರದೆ ಗೊಳ್ಳೆಂದು ನಕ್ಕುಬಿಟ್ಟನು. ಈ ಸಲ ಧಣಿಯು ಹಸನ್ಮುಖನಾದುದನ್ನು ಕಂಡ ಡೇನಿಯಲ್ಲನೂ ಪ್ರತಿಯಾಗಿ ನಕ್ಕುಬಿಟ್ಟನು. ಪೀಟರನು ಅವನನ್ನು ಕುರಿತು ಸನ್ನೆಮಾಡಿ ಹೇಳಿದ :

" ಇಲ್ಲಿಂದ ಹೊರಟು ಹೋಗು ; ಕಣ್ಮರೆಯಾಗಿ ನಿಲ್ಲು. "

ಧಣಿಯ ಮಾತಿನಂತೆ ಡೇನಿಯಲ್ಲನು ಆಚೆಗೆ ಹೊರಟುಹೋದನು. ತನ್ನ ಯಜಮಾನನು ಹಜಾರವನ್ನು ಬಿಟ್ಟು ಹೊರಟುಹೋಗುವವರೆಗೂ ಡೇನಿಯಲ್ಲನು ಮತ್ತೆ ಅತ್ತಕಡೆ ತಲೆಯಿಡಲಿಲ್ಲ. ಹೊರಗೆ ಹೊರಟು ಹೋಗ ಬೇಕೆಂದು ಯಜಮಾನನಿಂದ ಆಜ್ಞಪ್ತನಾದ ಅವನು ಅಲ್ಲೆ ಹೊರಗಡೆ ಮರೆ ಯಲ್ಲಿ ನಿಂತು ಸಮಯ ಕಾಯುತ್ತಿದ್ದನು. ಪೀಟರನು ಹಜಾರವನ್ನು ಬಿಟ್ಟು ದನ್ನು ಕಂಡು ತೃಪ್ತನಾದ ಅವನು ಅಲ್ಲಿದ್ದ ತಟ್ಟೆ, ಬಟ್ಟಲು, ಕೆಟಲ್ಲುಗಳನ್ನು ತೊಳೆಯುವುದಕ್ಕೆಂದು ಎತ್ತಿಕೊಂಡು ಅಡುಗೆ ಮನೆಗೆ ಹೋದನು. ಪೀಟರ ನಿಗೂ ಅವನ ಬಟ್ಲರನಿಗೂ ಪರಸ್ಪರ ಇದ್ದ ಸ್ವಾಮಿ-ಸೇವಕರ ಸಂಬಂಧದ ಸ್ವರೂಪವೆಂದರೆ ಇಂತಹುದೇ. ಪೀಟರನು ಏಕಾಂಗಿಯಾಗಿ ಬಂಗಲೆಯಲ್ಲಿ ಬಾಳುವೆಯನ್ನು ದೂಡುತ್ತಿದ್ದನಷ್ಟೆ. ಅವನ ಆ ಬಾಳುವೆಯಲ್ಲಿ ಬೆರೆತಿದ್ದ ಒಬ್ಬನೇ ಒಬ್ಬ ಮಾನವಜೀವಿ ಎಂದರೆ ಬಟ್ಲರ್. ಅವನ-ಇವನ ಮಾತು ಕತೆಗಳು-ಒಡನಾಟ-ಒಮ್ಮತ ಎಲ್ಲಾ ಇಷ್ಟೇ !

ದಿನಕ್ಕೊಮ್ಮೆಯೋ, ಎರಡಾವರ್ತಿಯೋ ಸನ್ನೆಗಳ ಮೂಲಕ ಒಡೆಯನು ಕಿಂಕರನೊಂದಿಗೆ ಏನನ್ನಾದರೂ ಮಾತನಾಡಿದರೆ ಉಂಟು ; ಇಲ್ಲದಿದ್ದರೆ ಅದೂ ಇಲ್ಲ. ಮೋಟಾರ್ ಕಾರಿನ ' ಸ್ವಿಚ್ ' ಅದುಮಿ ಯಂತ್ರವನ್ನು ನಡೆಸುವಂತೆ ಪೀಟರನು ಡೇನಿಯಲ್ಲನಿಂದ ಕೆಲಸಗಳನ್ನು ನಡೆಸುತ್ತಿದ್ದನು. ತನ್ನ ಧಣಿಯ ಪೂರ್ವ ವೃತ್ತಾಂತಗಳನ್ನಾಗಲೀ, ತಾತ್ಕಾಲಿಕ ರಹಸ್ಯಗಳ ನ್ನಾಗಲಿ ಡೇನಿಯಲ್ಲನು ಬಲ್ಲವನಾಗಿರಲಿಲ್ಲ; ತಿಳಿದುಕೊಳ್ಳಲು ಅವನಿಗೆ ಅವಕಾಶವೂ ಸಾಲದು ; ಆಸೆ ಮೊದಲೇ ಇಲ್ಲ. ಅವನು ಕಿರುಹಣತೆಯನ್ನು

ಕೈಯಲ್ಲಿ ಹಿಡಿದು ಚಾಕುವನ್ನು ಹುಡುಕಿದ ಆ ರಾತ್ರಿಯಿಂದ ಇಂದಿನವರೆಗೆ ಎಷ್ಟೋ ಕಾಲವು ಕಳೆದು ಹೋಗಿದ್ದಿತು. ಡೇನಿಯಲ್ಲನ ನಡತೆಯಲ್ಲಿ ಪೀಟರನ ಭಯವನ್ನು ಬಲಗೊಳಿಸುವ ಯಾವ ಬದಲಾವಣೆಗಳೂ ಕಂಡು ಬರಲಿಲ್ಲ. ಆದುದರಿಂದ ತನ್ನ ಮನೆಗೆ ಕನ್ನ ಹಾಕುವ ಬಯಕೆಯನ್ನು ಅವನು ತಾಳಿರಲಿಲ್ಲವೆಂದೂ, ಅವನಿಂದ ತನ್ನ ಧನಕ್ಕಾಗಲಿ, ಪ್ರಾಣಕ್ಕಾಗಲಿ ಯಾವ ಹಾನಿಯೂ ಇಲ್ಲವೆಂದೂ ಪೀಟರನು ಈಗ ಸ್ಪಷ್ಟತೆಯಿಂದ ನಂಬಲು ಅನುಕೂಲಿಸಿತು.



ಪ್ರಕರಣ ೯

*
*

* * ಉಲ್ಫ್ * *

*
*

ಮರುದಿನ ಸೂರ್ಯೋದಯವಾದ ಒಂದೆರಡು ಘಂಟೆಗಳಿಗೆ ನಾಯಿ ಮರಿಯು ಪೀಟರನ ಬಂಗಲೆ ಬಾಗಿಲಲ್ಲಿ ಬಂದು ನಿಂತಿತು. ಹಜಾರದಲ್ಲಿ ಕುಳಿತಿದ್ದ ಪೀಟರನು ಸ್ಯಾಮ್ಯುಯಲ್ಲನನ್ನು ಕಂಡು ಕೇಳಿದನು :

“ ಇದೇನೇ ನಾಯಿಮರಿ ? ”

“ ಹೌದು ಧಣಿಗಳೇ ! ”

“ಭೇಷ್ ! ಚೆನ್ನಾಗಿದೆ. ಜಾತಿನಾಯಿಯೇನೋ ಹೌದು. ”

ನಾಯಿಮರಿಯನ್ನು ಕಂಡು ಪೀಟರನು ಈ ಮಾತುಗಳನ್ನೆಂದು ಮುಗಿಸುವಷ್ಟರಲ್ಲಿ ಅದು ಅವನನ್ನು ನೋಡಿ ಎರಡಾವರ್ತಿ ‘ ವೌಳ್ ’ ‘ ವೌಳ್ ’ ಎಂದು ಬೊಗಳಿತು. ತನ್ನ ನೂತನ ಒಡೆಯನನ್ನು ಕಂಡು ನಾಯಿಮರಿಯು ಹಾಗೆ ಎರಡಾವರ್ತಿ ಬೊಗಳಿದ್ದೇತಕ್ಕೆ ? ನಾಯಾದರೂ ಅದು ಇಂಗಿತವುಳ್ಳ ಪ್ರಾಣಿ. ಅದರಲ್ಲೂ ಒಂದು ಆತ್ಮವುಂಟು. ಆ ಆತ್ಮವು ಪೀಟರನನ್ನು ಮೊಟ್ಟಮೊದಲೇ ಎಚ್ಚರಿಸಬಯಸಿತೇ ?

“ ನೋಡು ; ಇದು ನಾಯಿ ; ನೀಚ ಪ್ರಾಣಿ ಎಂದೆಲ್ಲಿಯಾದರೂ ತಿರಸ್ಕರಿಸೀಯೆ ; ಎಚ್ಚರಿಕೆ ! ದೇಹಧಾರಣೆಗೆ ಅದಕ್ಕೂ ದಿನವಹಿ ಹೊಟ್ಟೆ ತುಂಬ ಆಹಾರವು ಅವಶ್ಯವಾಗಿ ಬೇಕೆಂಬುದನ್ನು ಮರೆತುಗಿರತೀಯೆ. ಅಲ್ಪ ಜಂತುವೆಂದು ಅದನ್ನು ಅಲಕ್ಷ್ಯ ಮಾಡೀಯೆ. ಪ್ರತಿ ಜೀವಿಯಲ್ಲಿಯೂ ಜೀವ—ಆತ್ಮ ಎಂಬ ಎರಡು ಭಾಗವುಂಟು. ಶರೀರವನ್ನು ಮಾತ್ರ ನೆಚ್ಚಿ

ಆತ್ಮನನ್ನು ಅಸಡ್ಡೆಯಿಂದ ಕಾಣದಿರು. ಅನಿಷ್ಟವೆಂದು ಪರಿಗಣಿಸಿ ಅದನ್ನು ಕಂಡು ಅಸಹ್ಯಪಟ್ಟೀಯೆ. ಆತ್ಮದ ಉದ್ಧಾರಕ್ಕೆ ಶರೀರವು ಪ್ರಕೃತವಾದದ್ದು; ನೀನು ನನ್ನೊಡೆಯನಾಗಬಯಸುವಂತೆ ನಿನಗೊಬ್ಬನೊಡೆಯನಿರುವನೆಂದು ಮರೆಯದಿರು; ಅಷ್ಟು ಮಾತ್ರವಲ್ಲ. ವ್ಯವಹಾರದಲ್ಲಿ ಪುಣ್ಯ—ಪಾಪ ಎಂಬ ಎರಡು ಬಗೆಯುಂಟು. ಇವೆರಡರಲ್ಲಿ ಯಾವುದಕ್ಕೆ ನಿನ್ನ ಪುರಸ್ಕಾರ? ಯಾವುದಕ್ಕೆ ತಿರಸ್ಕಾರ? ಧನ—ಜ್ಞಾನ; ಇವೆರಡರಲ್ಲಿ ಯಾವುದು ನಶ್ವರ? ಯಾವುದು ಶಾಶ್ವತ? ಬಾಳ ಕಡಲಲ್ಲಿ ಈಜುವಾಗ ನಿನಗನುಕೂಲಿಸುವುದು ಬೆಳಕೋ? ಅಂಧಕಾರವೋ? ಸತ್ಯ—ಅಸತ್ಯ ಎಂಬೆರಡರಲ್ಲಿ ನೀನರಸುವುದಾವುದನ್ನು? ಸತ್ಯವನ್ನೋ? ಅಸತ್ಯವನ್ನೋ? ಕರುಣೆ—ಕಾರ್ಪಣ್ಯ; ಇವೆರಡರಲ್ಲಿ ನೀನು ಅವಲಂಬಿಸಬಯಸುವುದಾವುದನ್ನು? ಕಪಟ-ಕುಟಿಲತ್ವ, ಇವೆರಡು ಗುಣಗಳಲ್ಲಿ ಯಾವುದು ನಿನಗೆ ಹೆಚ್ಚಾಗಿ ಹಿಡಿಸುತ್ತದೆ? ಬಡವರು—ಭಾಗ್ಯವಂತರು, ಇವರಿಬ್ಬರಲ್ಲಿ ಯಾರನ್ನು ಕಂಡರೆ ನಿನಗೆ ಹೆಚ್ಚು ಪ್ರೀತಿ—ಪುರಸ್ಕಾರ? ವಿಧಿ-ನಿಧಿ, ಇವೆರಡರಲ್ಲಿ ನೀನು ನಂಬುವುದು ಯಾವುದನ್ನು? ವಿಧಿಯನ್ನೋ? ನಿಧಿಯನ್ನೋ? ಹಿಂಸ-ಅಹಿಂಸೆ; ಇವೆರಡರಲ್ಲಿ ಒಳಿತಾವುದು? ಕೆಡುಕಾವುದು? ಬಾಳ ಅಂತ್ಯದಲ್ಲಿ ಮರಣವಿದೆಯೆಂಬುದನ್ನು ನೀನು ಬಲ್ಲೆಯಾ? ಮರಣಕ್ಕೆ ಮುನ್ನ ಮಾನವನು ಮಾಡತಕ್ಕ ಮಹತ್ವದ ಕಾರ್ಯಗಳಿವೆ ಎಂಬುವನ್ನು ನೀನು ನಂಬುವೆಯಾ?"

ಇತ್ಯಾದಿಯಾಗೆಲ್ಲ ಆ ಪ್ರಾಣಿಯೊಳಗಿನ ಆತ್ಮನು ಪೀಟರನನ್ನು ಆದಿಯಲ್ಲೆ ಎಚ್ಚರಿಸಿರಬಹುದೇ? ಅಥವಾ, ನಾಯಿಮರಿಯೇ ಅವನನ್ನು ಮಾತನಾಡಿಸಿ ಬಾಳಲ್ಲಿ ನಿಬಿಡವಾದ ದ್ವಂದ್ವ ಸಮಸ್ಯೆಗಳನ್ನು ಅವನ ಮುಂದಿಟ್ಟಿತೆನ್ನೋಣವೇ?

ನಾಯಿಮರಿಯು ಪೀಟರನನ್ನು ಕುರಿತು ಈ ರೀತಿ ಹೇಳಿರಬಹುದೇ?

"ನಿನ್ನೆದುರಿಗೆ ಬಂದೊಡನೆಯೇ ಎರಡಾವರ್ತಿ ಬೊಗಳಿದುದೇಕೆ ಎಂದು ಕೇಳುವಿಯೋ? ನಾನು ನಾಯಿಮರಿ ಎಂದು ಅಲಕ್ಷ್ಯ ಮಾಡಬೇಡ. ಕಾಷ್ಠದಲ್ಲಿ ಅಗ್ನಿಯು ಅಡಗಿರುವಂತೆ, ಹೊರದೃಷ್ಟಿಗೆ ನೀಚವಾಗಿ ಕಾಣಿಸುವ

ನನ್ನಲ್ಲಿಯೂ ಪೌರುಷ-ಕೃತಜ್ಞತೆ ಇವೆರಡೂ ಇವೆ. ಬಾಳಲ್ಲಿ ಹಗಲು-ಸಂಜೆ ಎರಡಿವೆ. ನಿನ್ನ ಆತ್ಮದ ವಿಮೋಚನೆಗೆ ಭಕ್ತಿ—ಜ್ಞಾನಗಳು ಬೇಕಲ್ಲವೆ? ಅಂತೆಯೆ ನನ್ನ ದೇಹದ ಬೆಳವಣಿಗೆಗೆ ಹಗಲು—ಸಂಜೆ ಎರಡು ಹೊತ್ತೂ ಪುಷ್ಟಿಯಾದ ಆಹಾರ ಬೇಕು; ನಿನ್ನ ಶರೀರವನ್ನೂ ಧನವನ್ನೂ ರಕ್ಷಿಸುವ ಇರ್ತರನಾದ ಕರ್ತವ್ಯವನ್ನು ಹೆಗಲಮೇಲೆ ಹೊತ್ತು ನಾನಿಲ್ಲಿಗೆ ಬಂದಿರುವೆ; ಸ್ವಾಮಿನಿಷ್ಠನಾಗಿ ಸೇವೆ ಸಲ್ಲಿಸಲು ನಾನು ಸಿದ್ಧನಿದ್ದೇನೆ. ಪ್ರಾಣಿವರ್ಗ—ಮಾನವವರ್ಗ ಎರಡರಲ್ಲಿಯೂ ನಿನಗೆ ಕನಿಕರವಿರಲಿ; ಧನದಾಸನಾಗಿ ಮಾನವರಿಗೂ—ದೈವಕ್ಕೂ ದ್ರೋಹಿಯಾಗದಿರು; ನಾನು ಸಣ್ಣ ಪ್ರಾಣಿ. ನನ್ನನ್ನೇನೋ ನೀನು ಕಣ್ಣಾರೆ ನೋಡಬಲ್ಲೆ. ಆದರೆ ನನ್ನೊಳಗೂ ನಿನ್ನೊಳಗಿರುವಂತೆ ವಿಶ್ವಾತ್ಮನ ಅಂಶವು ಜ್ಯೋತಿರ್ಮಯವಾಗಿ ಅಂತರ್ಗತವಾಗಿದೆ. ಅದು ಅಖಂಡ ಪ್ರಕಾಶವುಳ್ಳದಾದರೂ ಅವ್ಯಕ್ತವಾದುದು. ಕಣ್ಣಲ್ಲಿ ಕಂಡ ನನ್ನನ್ನು ನೋಡುವ ನೀನು ಕಣ್ಣಲ್ಲಿ ಕಾಣದ ನನ್ನೊಳಗಿರುವ ತೇಜಸ್ಸನ್ನು ನೋಡಬಲ್ಲೆಯಾ? ನೋಡಬಯಸಿದರೆ ನೋಡಲಾದೀತು. ನನ್ನೊಳು, ನಿನ್ನೊಳು ಚಲಿಸುವ ದಿವ್ಯಶಕ್ತಿಯು ಉತ್ಪನ್ನವಾದುದು ಒಂದೇ ಮೂಲಸ್ಥಾನದಿಂದ; ಒಂದೇ ಅಖಂಡ ಬ್ರಂಹ್ಮಾಂಡ ಜ್ಯೋತಿಯಿಂದ ಹೊರಹೊರಟು ಸಕಲ ಜೀವ ಜಡಾತ್ಮಕ ಜಗತ್ತಿನೊಳಗಡಗಿರುವ ಕಿಡಿ, ನಿನ್ನೊಳಗೂ.... ನನ್ನೊಳಗೂ ಉಂಟು. ಅದು ಹೊದ್ದ ಕವಚವು ಬೇರೆ ಬೇರೆಯಾದರೂ ಹೊಂದಿರುವ ಶಕ್ತಿ ಒಂದೇ. ನಾನು ಎರಡಾವರ್ತಿ ಬೊಗಳಿದುದೇತಕ್ಕೆ ಬಲ್ಲೆಯಾ? ನನಗೂ ನಿನಗೂ ಇರುವುದು ಎರಡು ಕಣ್ಣುಗಳು; ನಿನ್ನೆರಡು ಕಣ್ಣುಗಳಲ್ಲಿ ಒಂದರಲ್ಲಿ ನೀನು ಇಹವನ್ನೂ ಮತ್ತೊಂದುರಲ್ಲಿ ಪರವನ್ನೂ ಎಡೆಬಿಡದೆ ನೋಡುತ್ತಲೇ ಇರಬೇಕು. ಆಡಿದುದನ್ನು ಒಂದು ಕಣ್ಣುನೋಡಿದರೆ, ಮಾಡಿದುದನ್ನು ಮತ್ತೊಂದು ಕಣ್ಣು ನೋಡುತ್ತದೆ. ಎಚ್ಚರಿಕೆ! ಆಡಿದಂತೆ ನಡೆಯಬೇಕು; ನೋಡಿದಂತೆ ನುಡಿಯಬೇಕು. ಬಾಳಲ್ಲಿ ಬೇಡದುದನ್ನು ಬಿಡು; ಬೇಕಾದುದನ್ನು ಹಿಡಿ. ಹಿಂಸೆಯನ್ನು ಬದಿಗೊತ್ತಿ ಸತ್ಯವನ್ನು ಎತ್ತಿಹಿಡಿ."

ನಾಯಿಯು ಎರಡಾವರ್ತಿ ಬೊಗಳಿದುದರಲ್ಲಿ ಇವೆಲ್ಲ ಸಂಕೇತಗಳು

ಅಡಗಿರಬಹುದು. ಆದರೆ ಪೀಟರನ ಲಕ್ಷ್ಯವು ಅದರ ಕಡೆ ತಿರುಗಿದ್ದಿತೇ ?

ನಾಯಿಗೆ ಹೆಸರಿಗೆ ಆರು ತಿಂಗಳು ಆಗಿರಬಹುದು. ಆದರೆ ಅದು ಎತ್ತರವಾಗಿ ಬೆಳೆದಿತ್ತು; ಜಾತಿಗೆ ತಕ್ಕಂತೆ 'ಘುರ್! ಘುರ್!' ಎನ್ನುತ್ತಿತ್ತು. ಬಂದ ಕೆಲವೇ ದಿನಗಳಲ್ಲಿ ಅದು ಹೊಸಜಾಗದಲ್ಲಿ ಪಳಗಿಕೊಂಡಿತು. ನಾಯಲ್ಲಿ ತನಗೆ ದಯೆಯಾಗಲಿ, ಪ್ರೀತಿಯಾಗಲಿ, ಇದ್ದಿತೋ ಇಲ್ಲವೋ ಅವನ್ನು ಪೀಟರನೇ ಬಲ್ಲ. ಆದರೆ ನಾಯಿಗೆ ತನ್ನಲ್ಲಿ ಪ್ರೀತಿ ಕೃತಜ್ಞತೆಗಳು ಬೆಳೆದು ಬರುವಂತೆ ನಡೆದುಕೊಳ್ಳಲು ಮಾತ್ರ ಪೀಟರನು ಪ್ರಯತ್ನಿಸಲೇ ಇಲ್ಲ. ಒಟ್ಟಿನಲ್ಲಿ ಲೋಕಸಹಜವಾದ ಬಾಂಧವ್ಯವು ನಾಯಿಗೂ ಅವರ ಒಡೆಯನಿಗೂ ನಡುವಿನಲ್ಲಿ ನೆಲಸಿ ನಲಿಯಿತು ಎಂದರೆ ಅದು ಸತ್ಯದ ಎಲ್ಲೆಗೆ ದೂರವಾದ ಮಾತೆಂದೇ ಹೇಳಬೇಕು. ನಿಜಾಂಶವಾದರೂ ಇಷ್ಟೇ:

ಈ ಎರಡು ಜೀವಿಗಳ ನಡುವೆ ಇದ್ದುದು, ಒಡೆತನದ ...ಅಡಿಯಾಳುತನದ.....ಅಪರೂಪ ಸ್ವರೂಪ! ಬೆರತೂ ಬೆರೆಯದ ಸಂಬಂಧ!

ಇಷ್ಟಾದರೂ ಜಾತಿನಾಯಿಯಾದುದರಿಂದ ದಿನಕ್ರಮೇಣ ಅದರ ಪೌರುಷ ಹೆಚ್ಚುತ್ತ ಬಂದಿತು. ಪೀಟರನ ಬಂಗಲೆ ಬಳಿ ಸ್ಯಾಮ್ಯುಯಲ್, ಲ್ಯೂಸಿ, ಆರ್ಥರ್ ಇವರನ್ನುಳಿದು ಬೇರಾರೂ ಧಾರಾಳವಾಗಿ ಕಾಲಿಡುವಂತಿರಲಿಲ್ಲ. ಹೊಸಬರನ್ನು ಕಂಡರಂತೂ ನಾಯಿ ಬಿಚ್ಚಿದ ಬಾಯನ್ನು ಮುಚ್ಚದು. ಬ್ರಹ್ಮಾಂಡವೇ ತನಗೆ ವಿರುದ್ಧವೆಂದು ತೋರಿಕೊಡುವ ತೆರನೆ ಅದು ಬೊಗಳಿ ಬೊಗಳಿ ಬಾಯೊಣಗಿಸಿಕೊಳ್ಳುತ್ತಿತ್ತು. ಹಾಗೂ ತನ್ನ ಯಜಮಾನನ ಹುಟ್ಟುಗುಣವನ್ನರಿಯದೆ ದಿಟ್ಟತನದಿಂದ ಯಾರಾದರೂ ಬಂಗಲೆ ಬಳಿ ಕಾಲಿಟ್ಟುಬಿಟ್ಟರೆ ಸರಿ; ತಿಳಿಗೇಡಿತನದಿಂದ ತನಗೆ ಕಾಣಿಸಿಕೊಂಡರೂ ಸರಿ; ನಾಯಿಯು ಬೊಗಳಿ ಬೊಗಳಿ ಅಂತಹವರನ್ನು ಹೊರಗೆ ಅಟ್ಟಿಬಿಡುವವರೆಗೂ ಬಾಯಿ ಮುಚ್ಚುತ್ತಲೇ ಇರಲಿಲ್ಲ. ಬಿಚ್ಚಿಬಿಟ್ಟರೆ ಅದು ಎಲ್ಲಿಯಾದರೂ ಸ್ವಾತಂತ್ರ್ಯವನ್ನು ಗಳಿಸಿಕೊಳ್ಳಲು ಓಡಿಹೋದೀತು ಎಂಬ ಭಯದಿಂದಲ್ಲ..... ಯಾರನ್ನಾದರೂ ಕಚ್ಚಿಬಿಟ್ಟೀತಲ್ಲ ಎಂಬ ಹೆದರಿಕೆಯಿಂದ....ಪೀಟರನು ಹಗ

ಲೆಲ್ಲ ನಾಯಿಯನ್ನು ಹಜಾರದಲ್ಲಿ ಕಟ್ಟಿಹಾಕಿದ್ದನು ರಾತ್ರಿ ಹೊತ್ತು ಮಾತ್ರ ಅದನ್ನು ಬಿಚ್ಚಿಬಿಡುತ್ತಿದ್ದನು. ಆಗ ಅದು ಸಂತಸದಿಂದ ಬಂಗಲೆಯ ಸುತ್ತಲೂ ಸ್ವತಂತ್ರವಾಗಿ ಓಡಾಡುತ್ತಿತ್ತು; ಆನಂದಾತಿಶಯದಿಂದ ಅಲ್ಲಿಲ್ಲಿ ಅಲೆದಲೆದು ನಲಿದು ನರ್ತನಮಾಡುತ್ತಿತ್ತು.

ಭಿಕ್ಷುಕರನ್ನು ನೋಡಿ ನಾಯಿ ಬೊಗಳುವುದಕ್ಕೆ ಆರಂಭಿಸಿದರಂತೂ ತೀರಿತು. ಆದರೆ ಆ ಬೊಗಳುವಿಕೆಯಲ್ಲಿ ಒಂದು ಮಹತ್ವದ ತತ್ತ್ವವೇ ಅಡಗಿದ್ದಂತೆ ಭಾಸವಾಗುತ್ತಿತ್ತು :

" ನನಗೇ ಹೊಟ್ಟೆ ತುಂಬ ಕಾಲಕಾಕ್ಕೆ ತಿಂಡಿಹಾಕದ ನನ್ನ ಯಜಮಾನನು ಇನ್ನು ನಿಮಗೆ ಬೇರೆ ರಾಶಿ ಕೂಡಿಸಿ ಇಟ್ಟಿದ್ದಾನೆಯೆ? ಹೊರಡಿ, ಹೊರಡಿ; ಬೇಗ ಹೊರಡಿ. ನೊಣಗಳೇ ಓಡಿಯಾಡದ ಸ್ಥಳವಿದು! ಇದೇನೂ ಧರ್ಮಶಾಲೆಯಲ್ಲ. ಇದೊಂದು ಗುಪ್ತ ಕಾರಾಗಾರ. ಇಲ್ಲಿ ನಿಂತು ಕಾಲು ನೋಯಿಸಿಕೊಳ್ಳಬೇಡಿ; ಅರಚಿ ಅರಚಿ ಗಂಟಲು ಒಣಗಿಸಿಕೊಳ್ಳಬೇಡಿ; ಬೇಡಿ ಬೇಡಿ ಬರಿದೆ ಬಳಲಿ, ಬಸವಳಿದು ಬೆಂಡಾಗಬೇಡಿ. ಇದು ಭಾಗ್ಯದ ಬೀಡು. ಆದರೂ ಬಡವರನ್ನು ಬರಮಾಡಿಕೊಳ್ಳುವ ಕನಿಕರದ ಕುಟೀರವಲ್ಲ. ನಾನಿಲ್ಲಿ ಮೊದಲು ಬಂದಾಗ ಏನೇನೋ ಬಯಸಿದೆ. ಆದರೆ ಆ ಬಯಕೆಯಲ್ಲ ಬಯಲು ಭ್ರಾಂತಿಯಾಯಿತು. ಇರಲಿ; ನಾನಾದರೂ ನಾಯಿ: ನೀಚ ಎಂದು ನೀವೆಣಿಸಬಹುದು. ಆದರೇನು? ನನಗೂ ನೀತಿಯುಂಟು. ನಾಚಿಕೆಯಿಲ್ಲವೆ ನಾನಿಲ್ಲಿ ನಿಂತಿದ್ದೇನೆ. ಇವನ ನಲ್ಮೆ ಉದಾರತೆಗಳನ್ನು ಎದಿರು ನೋಡಿ ನಾನೂ ಜೀಸತ್ತು ಹೋದೆ. ನಾಯಾಗಿ ಹುಟ್ಟಿದ ನಾನು ನರನಾದ ಇವನನ್ನು ಆಶ್ರಯಿಸಲೇಬೇಕಾಯಿತು. ಆದರೆ ನೀವಾದರೂ ನರಜಾತಿಗೆ ಸೇರಿದವರು; ನೀವು ಮಾತನಾಡಬಲ್ಲಿರಿ; ನಾನಾ ಕಡೆ ಸ್ವತಂತ್ರರಾಗಿ ತಿರುಗಬಲ್ಲಿರಿ; ಒಂದಕ್ಕೆ ನಾಲ್ಕಾಗಿ ಅಲೆಯಬಲ್ಲಿರಿ; ಕೈಲಾದಷ್ಟು ಕೆಲಸಮಾಡಿ ಕೂಲಿಯೋ.... ನಾಲಿಯೋ ಸಂಪಾದಿಸಿ ಸಂತೋಷವಾಗಿರಬಲ್ಲಿರಿ; ಧನವನ್ನು ಗಳಿಸಿ ಬೇಕಾದ್ದನ್ನು ತಿನ್ನಬಲ್ಲಿರಿ. ಭಂಗವಿಲ್ಲದೆ ನಿಮ್ಮಂತರಂಗದ ಆಶಯಗಳನ್ನು ಈಡೇರಿಸಿಕೊಳ್ಳಬಲ್ಲಿರಿ. ಆದರೆ ನನ್ನನ್ನು

ನೋಡಿ; ನನ್ನ ಕೊರಳಿಗೆ ಬಡಿದಿರುವ ಬೇಡಿ.....ಈ ಕೊರಳ ಪಟ್ಟಿ ! ಇದನ್ನು ನೋಡಿ. ಇದು ನನ್ನ ಗುಲಾಮಗಿರಿಗೆ ಗುರುತು ! ನನ್ನನ್ನು ಕಟ್ಟಿ ಹಾಕಿರುವ ಸರಪಣಿಯನ್ನು ನೋಡಿ. ಅದು ನನ್ನ ಸ್ವಾತಂತ್ರ್ಯ ನಾಶಕ್ಕೆ ಹೆಗ್ಗುರುತು ! ನನ್ನ ಸಂಕಟಕ್ಕೆ ಸಾಕ್ಷಿ ! ಇಷ್ಟಾದರೂ ನಿಮ್ಮಲ್ಲಿ ವಿವೇಕವು ಮೂಡು ವುದೇನು? ಕಲ್ಲೆದೆಯ ಕ್ರೂರಾತ್ಮನ ಕಠಿಣತೆಯು ನನ್ನನ್ನು ನೋಡಿದವರಿ ಗರಿವಾಗದೇ? ಕಪಟಿಯ ಕಾರಾಗಾರದಲ್ಲಿ ಬಿದ್ದು ಕಾಲಕ್ಕೂ ಕೊಳೆತು ನರ ಳಲು ಸಂಕಲ್ಪಗೊಂಡು ಓಡೋಡಿ ಇಲ್ಲಿಗೆ ಬಂದಿರೇನು? ವಿವೇಕದಿಂದ ಎಚ್ಚೆತ್ತುಕೊಳ್ಳಿ; ವಾಯುವೇಗದಿಂದ ಇಲ್ಲಿಂದ ಓಡಿಹೋಗಿ. ಸ್ವತಂತ್ರರಾದ ನೀವು ಇವನಲ್ಲಿ ಬಂದು ತಲೆ ತಗ್ಗಿಸುವುದರ ಅರ್ಥವಾದರೂ ಏನು? ಭೂಮಿ ಬಂಜರಾಗಿ ಹೋಗಿಲ್ಲ; ಬೆಳಸು ಕೊಟ್ಟೀತು; ಭಂಗಾರ ತಂದೀತು! ಅಗೆದು ಕಾಳು ಚೆಲ್ಲಿ; ನದಿ ನಾಲೆಗಳು ನೀರು ಕೊಟ್ಟಾವು; ನಿಮಗೆ ಕೈಕಾಲು ಗಟ್ಟಿಯಾಗಿವೆ; ಯುಕ್ತಿ ಯೋಚನೆಗಳಿವೆ; ನೋಡಿದ್ದನ್ನು–ಮಾಡಿ ದ್ದನ್ನು ಎತ್ತಿನುಡಿಯಲು ನಾಲಿಗೆ ಇದೆ; ಹೇಳಬಹುದು; ಕೇಳಬಹುದು. ದೃಢತೆಯಿಂದ ದುಡಿಯಿರಿ; ಧನವನ್ನು ಗಳಿಸಿ; ಬೇಕಾದಂತೆ ನೆರಳನ್ನು ಕಟ್ಟಿಕೊಳ್ಳಿ; ನಿಮ್ಮವರೊಂದಿಗೆ ನಯವಾಗಿ, ನೆಮ್ಮದಿಯಾಗಿ, ನ್ಯಾಯವಾಗಿ, ನೀತಿಯಿಂದ, ಪ್ರೀತಿಯಿಂದ ಬಾಳಿ; ಪರಮೇಶ್ವರನ ಪರಮಾನುಗ್ರಹಕ್ಕೆ ಪಾತ್ರರಾಗಿ. ಅದನ್ನು ಬಿಟ್ಟು ಕೊಳಕು ಕೊಚ್ಚೆಗಳನ್ನು ತುಳಿದು, ಇವನ ಬಳಿ ಸಾರಿ ಕೊಲೆ ಕಳವುಗಳಿಂದುತ್ಪನ್ನವಾದ ಕಳಂಕಮಯ ಬಾಯ್ತುಂಬು ಲಕ್ಕೆ ಕೈಯೊಡ್ಡಿ, ಅರಚಿ, ಕಿರುಚಿ, ಕೃಶರಾಗಿ ಕುಗ್ಗಿಹೋಗಬೇಡಿ. ನಾನಾ ದರೂ ನಾಯಿ! ಇವನ ಅಧೀನ. ನಾಯಾದ ನನ್ನಮೇಲೆ ಪೈಪೋಟಿ ನಡೆಸಬಯಸುವ ನೀವೂ ಮಾನವರೇ? ನಿಮ್ಮವರು ಕಟ್ಟಿದ ಕೋಟೆಗಳು; ಅಣೆಕಟ್ಟುಗಳು; ಕುಟ್ಟಿ ಕೆಡವಿದ ಬೆಟ್ಟದ ಹೆಬ್ಬಂಡೆಗಳು; ಕೊರೆದ ಸುರಂಗ ಗಳು; ನಿರ್ಮಿಸಿದ ಮನೋಹರ ಸೌಧಗಳು; ಸಮುದ್ರದ ಅಂತರಾಳವನ್ನು ಕಲಕಿ ಹೊರತಂದು ರಾಶಿರಾಶಿಯಾಗಿ ಸುರಿದ ಮುತ್ತುಗಳು; ಭೂಗರ್ಭ ವನ್ನು ಶೋಧಿಸಿ ಹೊರತೆಗೆದ ವಜ್ರ ವೈಢೂರ್ಯಗಳು; ಬೆಳೆಸಿದ ಲತಾವೃಕ್ಷ ಗಳು, ಫಲ ಪುಷ್ಪಗಳು; ತಯಾರಿಸಿದ ಮಂಗಳ ದ್ರವ್ಯಗಳು; ಅಷ್ಟೇಕೆ?

ನಿಮ್ಮ ಶಿಲ್ಪಕಲೆ, ಕುಶಲಕಲೆ, ಇಂದ್ರಜಾಲ ಮಹೇಂದ್ರಜಾಲಗಳು; ಒಂದೇ, ನೂರೇ? ಒಟ್ಟೊಟ್ಟಾಗಿ, ಬಿಡಿ ಬಿಡಿಯಾಗಿ ಅವೆಲ್ಲ—ಅನಾದಿಕಾಲದಿಂದ, ನಿಮ್ಮ ಶೌರ್ಯ ಸಾಹಸಗಳಿಗೆ ವೀರ್ಯ ವಿವೇಕಗಳಿಗೆ, ವಿಸ್ತರಿತ, ವೈಭವ ಭರಿತ ವ್ಯವಹಾರ ಕುಶಲತೆಗೆ, ವಿಶ್ವವ್ಯಾಪ್ತ ವಿಜಯಕ್ಕೆ ಅನಂತ ಸಾಕ್ಷಿಗಳಲ್ಲವೆ! ಕಾಲಚಕ್ರದಲ್ಲಿ ಐತಿಹಾಸಿಕ ಆಗುಹೋಗುಗಳ ನಿರ್ಮಾಣಕರ್ತರು ನೀವು! ನಾಡ ನಾನಾ ಭಾಗಗಳು ನಯನಾನಂದಕರವಾಗಿ ಮುಂದುವರಿದು ನಾಡೆಲ್ಲ ನಚ್ಚಿನ ನಲ್ಮೆಯಿಂದ ನಲಿದು, ಸಮೃದ್ಧಿ ಅಭಿವೃದ್ಧಿಗಳನ್ನು ಸೂಚಿಸುವ ಹೊನ್ನ ಹೊಳೆಯು ಎಲ್ಲೆಡೆಯಲ್ಲಿಯೂ ಕೋಲಾಹಲವಾಗಿ ಹರಿಯುವುದು ನಿಮ್ಮ ಅನಂತ ಪರಿಶ್ರಮದಿಂದ! ಹೋಗಿ; ಹೋಗಿ. ಬೇಡ ಬೇಡಿ; ಕಾಡಿ ದಣಿಯಬೇಡಿ; ದುಡಿಯಿರಿ; ಅಖಂಡವಾಗಿ ದುಡಿಯಿರಿ. ನಲ್ಮೆಯ ಹಾದಿಯನ್ನು ಹಿಡಿದು ನಡೆಯಿರಿ."

ಇಂತಹ ಭಾವಾವೇಶಭರಿತ ಸಂಕೇತವೇನಾದರೂ ನಾಯಿಯ ತಡೆಯಿಲ್ಲದ ಬೊಗಳುವಿಕೆಯಲ್ಲಿ ಅಡಗಿದ್ದಿರಬಹುದೇ? ಇದ್ದರೂ ಇರಬಹುದು; ಕಂಡವರಾರು? ಪ್ರತಿಯೊಂದು ಪ್ರಾಣಿಯಲ್ಲೂ ಆತ್ಮನುಂಟು; ಆ ಆತ್ಮನಿಗೆ ವಿಕಾಸವುಂಟು; ವಿವೇಕಜನಕ ವ್ಯವಹಾರವುಂಟು; ಆತ್ಮ! ಅದರೊಳಗಿನ ಆತ್ಮ! ಅದು ವ್ಯಕ್ತತೆಯನ್ನು ತಾಳಿರಬಹುದೇ? ಇರಬಹುದು; ಪ್ರಣವ ಪ್ರತಿಪಾದ್ಯನ ಪವಿತ್ರ ಸಂಕಲ್ಪದಲ್ಲಿ—ಅವನ ಅನಂತ ಲೀಲಾಜಾಲ ವಿನೋದ ಪರಂಪರೆಯಲ್ಲಿ-ಅಸಾಧ್ಯವಾದುದಿಲ್ಲ; ಅಸಂಭಾವಿತವಾದುದೂ ಇಲ್ಲ.

ಪೀಟರನು ಮೊದಲೇ ಇತ್ಯರ್ಥಮಾಡಿಕೊಂಡಿದ್ದಂತೆ ನಾಯಿಯ ಪೋಷಣ ಭಾರವು ಸ್ಯಾಮ್ಯುಯಲ್ಲನ ಕುಟುಂಬಕ್ಕೆ ಸೇರಿದಷ್ಟು ಅವನಿಗೆ ಸೇರಿರಲಿಲ್ಲ. ಹೆಸರಿಗೆ ಮಾತ್ರ ಅವನು ಅದರೊಡೆಯ. ಆದರೆ ಅದರ ರಕ್ಷಕರೇ ಬೇರೆ. ತಾನು ತಿಂದುಳಿದುದನ್ನು ಮಾತ್ರ ಅದರೆಡೆ ಎಸೆಯುತ್ತಿದ್ದನು. ಏನೆಂದರೆ, ಹಸು ಹುಲುಸಾದ ಹಿತ್ತಿಲ ಹಸಿರು ಹುಲ್ಲನ್ನು ತಿಂದು ಹೇರಳವಾಗಿ ಹಾಲು ಕರೆಯುತ್ತಿದ್ದುದರಿಂದ ಹಗಲು—ಸಂಜೆ ಹಸಿದ ನಾಯಿಗೆ ಹಾಲು ಕುಡಿಸುವಂತೆ ಅವನು ಡೇನಿಯಲ್ಲನಿಗೆ ಆಜ್ಞೆ ಮಾಡಿದ್ದನು.

ನಾಯಿಯ ವಿಚಾರವಾಗಿ ಅವನ ಶ್ರದ್ಧೆ ಶ್ರಮಗಳು ಅಷ್ಟರಲ್ಲೆ ಪರ್ಯವಸಾನ ಗೊಂಡಿದ್ದುವು. ಅದಕ್ಕೂ ಮಿಂಚಿ ಅದಕ್ಕಾವ ತಿಂಡಿಯನ್ನೂ ಪ್ರತ್ಯೇಕವಾಗಿ ತಯಾರಿಸಿ ಹಾಕಿಸಲು ಪೀಟರನು ಉತ್ಸುಕನಾಗಿರಲಿಲ್ಲ. ನಾಯಿಯೇನೋ ದಿನೇ ದಿನೇ ಬೆಳೆಯುತ್ತ ಬಂದಿತು. ಅದು ಗಾತ್ರದಲ್ಲಿ ಬೆಳದಂತೆಲ್ಲ ಅದರ ಹೊಟ್ಟೆಯೂ ದೊಡ್ಡದಾಗುತ್ತ ಬಂದಿತು. ಹೊತ್ತು ಹೊತ್ತಿಗೆ ಹಸಿವನ್ನು ತಡೆಯಲಾರದೆ ಅದು "ಕುಯಾಂ, ಕುಯಾಂ" ಎಂದು ಅರಚತೊಡಗಿತು. ಹೀಗೆ ಅತಿ ದೈನ್ಯದಿಂದ ಅರಚಿ ಅದು ಪೀಟರನಿಂದ ಪದೇ ಪದೇ ಪ್ರಹಾರ ಗಳನ್ನು ಪಡೆಯುತ್ತಿತ್ತು !

ಡೇನಿಯಲ್ಲನು ಹಿಂದೆಂದೋ ಇಂತಹುದೇ ಒಂದು ನಾಯಿಯನ್ನು ಸಾಕಿದ್ದನು. ಆದುದರಿಂದ ಅದರ ಹುಟ್ಟು ಗುಣಗಳನ್ನೆಲ್ಲ ಅವನು ಚೆನ್ನಾಗಿ ಬಲ್ಲವನಾಗಿದ್ದನು. ಆದರಿಂದಲೇ ಅವನಿಗೆ ಈ ನಾಯಿಯಲ್ಲಿ ಎಲ್ಲಿಲ್ಲದ ಕನಿಕರ. ಅದರ ವಿಚಾರದಲ್ಲಿ ಪೀಟರನು ಆಚರಿಸುತ್ತಿದ್ದ ರೀತಿ ನೀತಿಗಳನ್ನು ಡೇನಿಯಲ್ಲನು ಅನುಮೋದಿಸಲೇ ಇಲ್ಲ. ಹಸಿದ ಹೊಟ್ಟೆಗೆ ಹೊತ್ತು ಹೊತ್ತಿಗೆ ತಿಂಡಿ ತಿನ್ನಿಸದಿರುವುದು ಪ್ರಾಣಿಹಿಂಸೆಯೆಂದೂ, ತೀರ ಪಾಪಕರ ವೆಂದೂ ಡೇನಿಯಲ್ಲನು ದೃಢವಾಗಿ ನಂಬಿದನು. ಆ ಪ್ರಾಣಿಗಾಗಿ ಅವನು ಮರುಗತೊಡಗಿದನು. ಪೀಟರನಿಗರಿವಾಗದಂತೆ ಅವನು ಅದಕ್ಕೆ ಬೇಯಿಸಿದ ಮಾಂಸದ ತುಂಡುಗಳನ್ನು ಹಾಕುತ್ತ ಬಂದನು. ಆಗಾಗ ತನ್ನ ಸ್ವಂತ ಹಣದಿಂದ ರೊಟ್ಟಿಯನ್ನು ಕೊಂಡು ಅದಕ್ಕೆ ಹೊಟ್ಟೆತುಂಬ ತಿನ್ನಿಸುತ್ತಿದ್ದನು. ರಾತ್ರಿವೇಳೆ ಪೀಟರನು ಮಲಗಿದ ಮೇಲೆ ನಾಯಿಯ ಬಳಿ ಕುಳಿತುಕೊಂಡು ಅದರೊಡನೆ ಆಟವಾಡುತ್ತಿದ್ದನು. ಎತ್ತಿಟ್ಟಿದ್ದ ಹೆಚ್ಚುವರಿ ಹಾಲನ್ನು ಅದಕ್ಕೆ ಕುಡಿಸಿ ಅದನ್ನು ತೃಪ್ತಿಪಡಿಸುತ್ತಿದ್ದನು. ಈ ವಿಚಾರಗಳೇನಾದರೂ ಪೀಟರನಿಗೆ ತಿಳಿದಿದ್ದರೆ ಅವನು ಡೇನಿಯಲ್ಲನ ಮೇಲೆ ಕುಪಿತನಾಗುತ್ತಿದ್ದ ನೆನ್ನಬಹುದು.

ಅಂತೂ ಪೀಟರನ ನಾಯಿಗೆ ಹಗಲಿನಲ್ಲಿ ಬಂಧನದೊಂದಿಗೆ ಅತ್ಯಂತ ಮಿತವಾದ ತಿನಿಸು; ರಾತ್ರಿ ಉಪವಾಸ ( ? )–ಡೇನಿಯಲ್ಲನೂ ಕೈಬಿಟ್ಟಿದ್ದರೆ.

ಕತ್ತಲಾಗುವುದಕ್ಕೆ ಮುನ್ನ, ಅಥವಾ, ಪೀಟರನು ಬಂಗಲೆಯಲ್ಲಿ ಅಡಗಿ ಮರೆಯಾಗುವುದಕ್ಕೆ ಮುನ್ನ, ನಾಯಿಯನ್ನು ಬಿಚ್ಚಿಬಿಡುತ್ತಿದ್ದನು. ಹಾಗೆ ತನ್ನನ್ನು ಯಜಮಾನನು ಬಿಚ್ಚಿ ಬಿಡುವುದಕ್ಕೆ ಬಂದಾಗ ನಾಯಿಯು ಹಿಗ್ಗಿ, ಬಾಲವನ್ನು ಬರಬರನೆ ಆಡಿಸುತ್ತ, ಎದ್ದೆದ್ದು ಕುಣಿದಾಡುತ್ತಿತ್ತು. ಬಂಧನ ವಿಮೋಚನೆಗಾಗಿ ಅನುದಿನವೂ ಅದು ಪಟ್ಟ ಪಾಡು ಹೇಳತೀರದು. ಬಿಡಿಸಿ ಕೊಂಡು ಓಡಿಹೋಗುವುದಕ್ಕೆ ಅದರ ಅವಸರವೋ ಅವಸರ. ಕೊರಳ ಪಟ್ಟಿಗೆ ಬಿಗಿದಿದ್ದ ಸರಪಣಿಯನ್ನು ಬಿಚ್ಚಿಬಿಡುವುದೇ ಪ್ರತಿದಿನವೂ ಪೀಟರನಿ ಗೊಂದು ಪ್ರಯಾಸದ ಪ್ರಯತ್ನವಾಗಿತ್ತು. ಇದನ್ನು ನೋಡಿ ಅವನು 'ಅಬ್ಬಬ್ಬ! ಈ ನಾಯಿಗೆ ನನ್ನನ್ನು ಕಂಡರೆ ಎಷ್ಟೊಂದು ಪ್ರೀತಿ! ಬಿಚ್ಚಿ ಬಿಡುವುದರೊಳಗೆ ಹತ್ತಾರು ಸಲ ನನ್ನ ಮೇಲೆ ಹಾರಿ ಪರಚಿಬಿಡುತ್ತದೆ' ಎಂದು ಅಂದುಕೊಳ್ಳುತ್ತಿದ್ದನು. ನಮ್ಮ ವಿಚಾರದಲ್ಲಿ ಇತರರಿಗೆ ಇರುವ ಅಭಿಮಾನ--ಅಸೂಯೆಗಳನ್ನು, ಸದಭಿಪ್ರಾಯ--ದುರಭಿಪ್ರಾಯಗಳನ್ನು ಕಂಡುಕೊಳ್ಳುವಷ್ಟು ಪ್ರಜ್ಞೆಯೂ, ಸಾಮರ್ಥ್ಯವೂ ಇಲ್ಲದೆಯೇ ಅನೇಕಾ ನೇಕವೇಳೆ ನಾವು ಮೋಸಹೋಗುವುದು. ತನ್ನನ್ನು ಕಂಡರೆ ನಾಯಿಗೆ ಅಪಾರವಾದ ಪ್ರೀತಿ ಇತ್ತೆಂದು ಪೀಟರನು ಭಾವಿಸಿದ್ದ. ಆದರೆ ನಾಯಿಯ ಚಿತ್ತವೃತ್ತಿಯು ಬೇರೆ ತೆರನಾಗಿದ್ದಿತು. 'ಈ ಕೃಪಣನ—ನೀತಿಬಾಹಿರನ— ಪ್ರಾಣಿಹಿಂಸಕನ ಒಡೆತನಕ್ಕೆ ಸಿಲುಕಿ ನರಳುವಂತಾಯಿತೇ? ಈ ಹಾಳು ಹಗಲು ಬಂಧನದಿಂದ ಬಿಡಿಸಿಕೊಂಡು ಡೇನಿಯಲ್ಲನ ಬಳಿ ಓಡಿಹೋಗಿ ಯಾವಾಗ ರೊಟ್ಟಿಯನ್ನು ತಿಂದು ಹಾಲನ್ನು ಕುಡಿದೇನು?' ಎಂಬಂತೆಲ್ಲ ಇತ್ತು ನಾಯಿಯ ಆತುರ ಆಶಯಗಳು!

ಇತ್ತ ಡೇನಿಯಲ್ಲನ ಮನಸ್ಸಿನಲ್ಲಿ ಮೊಳೆತು ಬೆಳೆದ ವಿಚಾರವೇನು? ಧಣಿಯು ನನ್ನನ್ನು ಹೇಗೆ ಬೇಕಾದರೂ ಕಂಡುಕೊಂಡು ಹೋಗಲಿ; ನಾನು ವಯಸ್ಸಾದವನು; ಕಣ್ಣು ಸರಿಯಾಗಿ ಕಾಣಿಸದವನು; ಹೆಚ್ಚು ಜನರಿರುವ ಮನೆಯಲ್ಲಿ ಕೆಲಸಕ್ಕೆ ನಿಂತು ಸುಧಾರಿಸಲಾರದವನು; ನನಗೇನೋ ಧಣಿಯು ಬೇಕೆನ್ನುವಷ್ಟು ಅನ್ನ, ಬಟ್ಟೆ, ನೆರಳನ್ನೂ, ಕೈಗಷ್ಟು ಸಂಬಳವನ್ನೂ ಕೊಡು ತ್ತಾನೆ. ಆದರೆ ಈ ನಾಯಿ! ಮೂಗು ಪ್ರಾಣಿ! ಇದರ ಹಸಿವು ಅಡಗು

ವೆಷ್ಟು-ಉತ್ತಮ ಜಾತಿಗೆ ಸೇರಿದ ಇದರ ಬೆಳವಣಿಗೆಗೆ ಬೇಕಾದಷ್ಟು—ಇದರ ಹೊಟ್ಟೆಗೆ ಹೊತ್ತು ಹೊತ್ತಿಗೆ ಹಾಕಲಿಲ್ಲವೆಂದರೆ-ಧಣಿಯ ತಪ್ಪು-ತಾತ್ಸಾರಗಳನ್ನು ನಾನೊಪ್ಪಲಾರೆ.”

ಈ ಕಾರಣದಿಂದಲೇ ಡೇನಿಯಲ್ಲನು ಕನಿಕರದಿಂದ, ರಾತ್ರಿ ಹೊತ್ತು ಯಜಮಾನನು ಕತ್ತಲೆಯ ಕೋಣೆಯಲ್ಲಿ ಅವಿತು ಕುಳಿತ ವೇಳೆಯಲ್ಲಿ, ನಿರ್ಭಯನಾಗಿ ನಾಯಿಗೆ ಹೊಟ್ಟೆ ತುಂಬುವಷ್ಟು ತಿನ್ನಿಸಿ ತೃಪ್ತಿಪಡಿಸುವ ವ್ಯವಸ್ಥೆಮಾಡಿದ್ದನು. ಆದುದರಿಂದಲೇ ಪೀಟರನು ತನ್ನನ್ನು ಬಿಚ್ಚಿಬಿಡಲು ಬಂದಾಗ ಡೇನಿಯಲ್ಲನ ಬಳಿ ಓಡಿ ಹೋಗಲು ನಾಯಿಯು ಅಷ್ಟೊಂದು ಆತುರ ಆನಂದಗಳಿಂದ ಎಷ್ಟೆದ್ದು ಕುಣಿದಾಡುತ್ತಿತ್ತು.

ಆದರೆ ‘ಹಾಕಿದ್ದನ್ನು ಬೀದಿನಾಯಿಯಂತೆ ತಿಂದುಕೊಂಡು, ಬಂದವರನ್ನು ಹೆದರಿಸಿಕೊಂಡು, ಬಂಗಲೆ ಬಳಿ ಬಿದ್ದುಕೊಂಡಿದ್ದರೆ ಬ್ರಹ್ಮಾಂಡವಾದ ಪ್ರಯೋಜನವಾಯಿತು’ ಎಂಬುದೇ ನಾಯಿಯ ವಿಚಾರವಾಗಿ ಪೀಟರನ ಅಭಿಪ್ರಾಯ.

“ತಂದು ಹಾಕಿದ್ದನ್ನು ಹೊತ್ತು ಹೊತ್ತಿಗೆ ಮಾಡಿಹಾಕಿ ಮನೆಗೊಂಡು ಕಾವಲಾಗಿ ಬಿದ್ದುಕೊಂಡಿರು; ಇದಕ್ಕೂ ಹೆಚ್ಚಿನದು ಬೇಡ” ಎಂದು ಕೈಹಿಡಿದ ತಮ್ಮ ಮನೆಯಾಕೆಯ ವಿಚಾರವಾಗಿ ಎಷ್ಟೋ ಜನರು ಅಭಿಪ್ರಾಯ ಪಡುವುದುಂಟು. ಆದರಕ್ಕೂ ಅಭಿಮಾನಕ್ಕೂ ಪಾತ್ರರಾದ ಆಶ್ರಿತರ ವಿಚಾರದಲ್ಲಿ ಮಾನವವರ್ಗದಲ್ಲೆ ಈ ತೆರನಾದ ತಾತ್ಸಾರ ಭಾವನೆಯು ಮೂಡಿರಬೇಕಾದರೆ-ಇನ್ನು ಕೇವಲ ಒಂದು ನಾಯಿಯ ವಿಚಾರವಾಗಿ ಪೀಟರನು ತಾಳಿದ ಅಭಿಪ್ರಾಯ-ತೋರಿದ ಅಶ್ರದ್ಧೆ-ಇದರಲ್ಲಿ ಅತಿಶಯವೇನಿದ್ದೀತು?

ಕಾಲಾನುಕಾಲದಲ್ಲಿ ಪೀಟರನು ನಾಯಿಗೆ ‘ಉಲ್ಫ್’ [ Wolf ] ಎಂದು ನಾಮಕರಣ ಮಾಡಿದನು. ‘ಉಲ್ಫ್’ ಎಂದರೆ ತೋಳ. ತೋಳದ ಗುಣವು ಕ್ಷುದ್ರವಾದುದು. ಪ್ರಾಣಿಗಳ ಎದೆಯನ್ನು ಬಗಿದು ರಕ್ತವನ್ನು ಹೀರುವುದರಲ್ಲಿ ತೋಳನಿಗಿರುವ ಸಾಮರ್ಥ್ಯವು ಅಸಾಧಾರಣವಾದದ್ದು.

ತಲೆಯಲ್ಲಿ ಮುಡಿಯಲು ಯೋಗ್ಯವಾದ ' ರೋಸ್ ' ( ಗುಲಾಬಿ ) ಎಂದು ಪರಿಮಳ ಪುಷ್ಪದ ಹೆಸರನ್ನು ಆರ್ಥರನು ನಾಯಿಮರಿಗಿಟ್ಟಿದ್ದನು. ಆದರೆ ಆ ಸೌಮ್ಯವಾದ, ಸುಂದರವಾದ ' ರೋಸ್ ' ಎಂಬ ಹೆಸರು ಆ ದೇ ಕೋ ಪೀಟರನಿಗೆ ಹಿಡಿಸಲಿಲ್ಲ. ಅದಕ್ಕೆ ಬದಲಾಗಿ ಮತ್ತೊಂದು ಹೆಸರನ್ನು ಅವನು ತೀವ್ರವಾಗಿ ಯೋಚಿಸಿ, ಯೋಚಿಸಿ ' ಉಲ್ಫ್ ' ಎಂಬ ತೀರ್ಮಾನಕ್ಕೆ ಬಂದಿದ್ದನು. ಇಂತಹ ಒಂದು ಕ್ಷುದ್ರಮೃಗದ ಹೆಸರನ್ನು ತನ್ನ ನಾಯಿಗೆ ಇಡಬೇಕೆಂದು ಪೀಟರನಿಗೆ ಹೊಳೆದುದೇನೂ ಆಶ್ಚರ್ಯವಲ್ಲ; ಅ ತಿ ಶ ಯ ವೂ ಮೊದಲೇ ಅಲ್ಲ. ಅನೇಕವೇಳೆ ಮಾನವರಿಗೆ ತಮ್ಮ ಅಂತರಂಗದಲ್ಲಿ ಪ್ರಬಲವೂ, ಪ್ರಮುಖವೂ ಆಗಿರುವ ಭಾವನೆಗಳು ಅವರನ್ನು ಮಿಂಚಿ ಅವರ ಬಾ ಯಿಂ ದ ಹೊರಬೀಳಬೇಕಲ್ಲವೆ? ಇದು ಒಪ್ಪಿಕೆಯಾಗುವುದಾದರೆ ನಾಯಿಗೆ ಪೀಟರನು ' ಉಲ್ಫ್ ' ಎಂದು ಹೆಸರಿಟ್ಟುದು ಅವನ ಅಂತರಂಗದ ಪ್ರೇರಣೆಯಿಂದಲೇ ಎಂದು ಹೇಳಬೇಕು.

ನಾಯಿಗೆ ತಿಂಡಿಹಾಕುವ ವಿಚಾರ—ಹೆಸರಿಡುವ ವಿಚಾರ—ಇವುಗಳ ಪ್ರಸ್ತಾಪ ಹಾಗಿರಲಿ. ಇನ್ನು ಪೀಟರನು ನಾಯಿಯೊಂದಿಗೆ ಪಳಗಿಕೊಂಡುದೆಂತು ಎಂಬುದನ್ನು ಕುರಿತು ಪರಿಶೀಲಿಸೋಣ.

ಎಲ್ಲ ಯಜಮಾನರಂತೆ ಪೀಟರನು ತನ್ನ ನಾಯಿಯೊಡನೆ ಆಟವಾಡುತ್ತಿರಲಿಲ್ಲ. ಅದನ್ನು ನಲಿಸಿ ನಲಿಯುತ್ತಿರಲಿಲ್ಲ. ಉಲ್ಫನ್ನು ಹೊರಗೆ ಕರೆದೊಯ್ಯುತ್ತಲೂ ಇರಲಿಲ್ಲ. ಹೇಗೆ ಕರೆದೊಯ್ಯುವುದು? ತಾನಿಲ್ಲದಾಗ ಅದು ತನ್ನ ಮನೆಯನ್ನು ಕಾಯಬೇಕಲ್ಲವೆ? ತನ್ನ ನಿಧಿಗೆ ನೆ ಲ ಮಾ ಳಿ ಗೆ ಕಾವಲು; ನೆಲಮಾಳಿಗೆಗೆ ಬಂಗಲೆ ಕಾವಲು; ಬಂಗಲೆಗೆ ನಾಯಿ ಕಾವಲು. ಹೌದು; ಇಷ್ಟು ದಿನವೂ ಪೀಟರನು ಒಬ್ಬೊಂಟಿಗನಾಗಿ ತನ್ನ ಮನೆಯ ಕಾವಲು ಕೆಲಸವನ್ನು ನಡೆಸುತ್ತಿದ್ದನು. ಆದರೆ ಈಗ? ಆ ಕಾವಲುಗಾರಿಕೆ ಕೆಲಸವನ್ನು ' ಉಲ್ಫ್ ' ತ ನ್ನೊಂ ದಿ ಗೆ ಹಂಚಿಕೊಳ್ಳಬೇಕು—ಇಲ್ಲವೆ? ಹಗಲು ಹೀಗಾಯಿತು. ರಾತ್ರಿಕಾಲದಲ್ಲಂತೂ ಬಂಗಲೆಯ ಹೊರಗೆ 'ಉಲ್ಫ್' ಕಾವಲು. ಹೀಗೆಂದು ಪೀಟರನು ತೀರ್ಮಾನಿಸಿದ್ದನು.

ಆದರೆ ಒಂದು ಮಾತು. ನಾಯಿಯು ಹಣವನ್ನು ಮುಟ್ಟದು; ಮೂಸಿನೋಡದು; ತಿನ್ನುವುದಂತೂ ಮೊದಲೇ ಸಾಧ್ಯವಿಲ್ಲ. ಆದುದರಿಂದಲೇ ನಿಧಿಯನ್ನು ಕಾಯಲು ನಾಯನ್ನು ಅವನು ಅಷ್ಟೊಂದು ನಿರ್ಭಯವಾಗಿ ನಿಯಮಿಸಿದ್ದ. ರಾತ್ರಿ ಮಿತಿಮಿಂಚಿ, ಹೊತ್ತೇರಿ, ಬಂಗಲೆಯ ಬಳಿಯೇ ಮಲಗುತ್ತೇನೆಂದು ಹೇಳಿದ ಸ್ಯಾಮ್ಯುಯಲ್ಲನನ್ನು–ಧನದ ಉಪಯೋಗವನ್ನು ಬಲ್ಲ ಮಾನವ ಕೂಟಕ್ಕೆ ಕಲೆತ ಸ್ಯಾಮ್ಯುಯಲ್ಲನನ್ನು—'ಕೂಡದು; ಊರಿಗೆ ಹೋಗು' ಎಂದು ಪೀಟರನು ಹೇಳಿದ ಮಾತಿನ ಅರ್ಥವನ್ನು ಇಲ್ಲಿ ಕಂಡು ಕೊಳ್ಳಬಹುದಲ್ಲವೆ?

ಮತ್ತೊಂದು ವಿಚಾರ. ಹಾಗೂ ಪೀಟರನು ಒಪ್ಪಿದ್ದರೆ ಉಳ್ಳನ್ನು ಎಲ್ಲಿಗೆ ಕರೆದೊಯ್ಯಬಹುದಾಗಿತ್ತು? ಅವನು ಜನತೆಯನ್ನು ತೊರೆದಿದ್ದನು. ಜನತೆಗಂತೂ ಈ ಅಪಾರ ಶ್ರೀಮಂತನ ಇರುವಿಕೆಯೇ ತಿಳಿಯದಂತಾಯಿತು. ಶ್ರೀಮಂತನ ಹೆಸರು ವಿಸ್ತಾರವಾಗಿ ಪ್ರಚುರಗೊಳ್ಳಬೇಕಾದರೆ— ಧನದ ಕ್ರಮವರಿತ ಉಪಯೋಗ ಮತ್ತು ಸಾರ್ವಜನಿಕರ ಹಿತಸಾಧಕ ಯೋಜನೆಗಳಿಂದಲೇ ಅಲ್ಲವೇ? ಅವನ ಪರಿಚಿತ ವೃಂದವು ದಿನೇ ದಿನೇ ಹೆಚ್ಚುವಂತೆ ಅವನು ಯಾವ ವ್ಯವಹಾರವನ್ನೂ ಹೂಡಲಿಲ್ಲ. ಪೀಟರನ ಧನವು ಬೆಳಕನ್ನು ಕಾಣಲಿಲ್ಲ. ಅಂತೆಯೇ ಅವನ ಹೆಸರೂ ಗುಪ್ತವಾಗಿ ಉಳಿಯಿತು. ಸ್ನೇಹಿತರನ್ನು ಸಂಪಾದಿಸಿ ಉಳಿಸಿಕೊಳ್ಳುವ ಅವಕಾಶವೇ ಪೀಟರನಿಗೆ ಇಲ್ಲದಂತಾಯಿತು. ಹೀಗಿರುವಾಗ ಅವನ ಬಂಗಲೆಗೆ ಬಂದು ಹೋಗುವವರೂ ಕಡಿಮೆ ಎಂದರೆ ಕಡಿಮೆ. ಇನ್ನು ನಾಯಿಗೆ ಜನರ ಪರಿಚಯವಾಗುವ ಬಗೆಯಾದರೂ ಎಂತು? ಹೀಗಿರುವಲ್ಲಿ ಪೀಟರನೇ ಆಟವಾಡಿಸದ ಅವನ ನಾಯನ್ನು ಆಟವಾಡಿಸಬೇಕೆಂದು ಬೇರಾರಿಗಾದರೂ ಅನ್ನಿಸಬಹುದೇ? ಒಡೆಯನ ವೈರಿಗಳು ನಾಯಿಗೂ ವೈರಿಗಳೇ ಅಲ್ಲವೆ? ಒಟ್ಟಿನಲ್ಲಿ ನಾಯಿಯೂ ಏಕಾಂಗಿಯಾಗಿಯೇ ಬೆಳೆಯಿತು. ಡೇನಿಯಲ್ ಒಬ್ಬನನ್ನುಳಿದು ಮಾನವ ಜಾತಿಗೆ ಸೇರಿದ ಇತರರಾರೂ ಅದಕ್ಕೆ ಹಿಡಿಸದು ಎಂಬಂತಿತ್ತು. ಆದುದರಿಂದಲೇ ಅದು ಯಾರನ್ನು ಕಂಡರೂ ಬಿಚ್ಚಿದ ಬಾಯಿ ಮುಚ್ಚದೆ ಬೊಗಳುತ್ತಿತ್ತು. ಬೊಗಳಿ ಬೊಗಳಿ ಬಂಧನದಿಂದ

ತನಗುಂಟಾದ ಸಂತಾಪವನ್ನು ಶಮನಗೊಳಿಸಿಕೊಳ್ಳುತ್ತಿತ್ತು. ಬೊಗಳಿ ಬೊಗಳಿ ಬಿಡುಗಡೆಯ ಭ್ರಾಂತಿಯು ಕೈಗೂಡದೆ ಪ್ರಾಣವನ್ನು ಬಿಡುವುದಕ್ಕಾಗಿಯೇ ತಾನು ಹುಟ್ಟಿರುವುದಾಗಿ ಅದರ ಇಂಗಿತಕ್ಕೆ ಬೋಧೆಯಾಗಿದ್ದರೂ ಆಗಿರ ಬಹುದು. ಹೇಗೋ, ಅದು ಬೊಗಳಿದಂತೆಲ್ಲ ಪೀಟರನಿಗೆ ಹಿಡಿಸಲಾರದ ಸಂತೋಷ. ತನ್ನ ಬಂಗಲೆಯ ಬಳಿ ಯಾರೂ ಸುಳಿಯಲಾರರು—ತನ್ನನ್ನು ಕಾಡಲಾರರು ಎಂಬ ನಂಬಿಕೆ ಅವನಿಗೆ.

ಇಷ್ಟು ಹೇಳಿದಾಕ್ಷಣ ನಾಯಿಯ ದೆಸೆಯಿಂದ ಪೀಟರನು ನಿರ್ವಿಚಾರ ನಾದನೆಂದು ಹೇಳಿಬಿಡಲಾದೀತೆ? ಅವನಿಗೆ ಶಂಕೆ; ಅಪಾರವಾದ ಶಂಕೆ! ರಾತ್ರಿವೇಳೆ ಕಳ್ಳಕಾಕರರು ವಿಷಮಿಶ್ರವಾದ ರೊಟ್ಟಿಯನ್ನೋ ಮಾಂಸದ ತುಂಡುಗಳನ್ನೋ ನಾಯಿಗೆ ಹಾಕಿ ಅದನ್ನು ನರಳಿಸಿ ಸಾಯಿಸಿ ಬಿಟ್ಟರೋ? ಬಳಿಕ ಬಂಗಲೆಯನ್ನು ನಿರಾತಂಕವಾಗಿ ಹೊಕ್ಕರೋ? ಹೊಕ್ಕು ತನ್ನನ್ನು ಕೊಲೆಮಾಡಿದರೋ? ತನ್ನ ಭಂಗಾರವನ್ನೆಲ್ಲ ಹೊತ್ತುಕೊಂಡು ಹೊರಟು ಹೋದರೋ? ಇಲ್ಲಿಗೆ ಅವನ ವಿಚಾರವಾಹಿನಿಗೆ ಪೂರ್ಣವಿರಾಮ! ತಾನೂ ಸತ್ತು ತನ್ನ ಪರಮ ಪ್ರೀತಿಗೆ ಪಾತ್ರವಾದ ಧನವೊತ್ತವು ಹೋದ ಮೇಲೆ—ಯಾವುದನ್ನು ಕುರಿತು ಯಾರು ಯೋಚಿಸಬೇಕಾಗಿದೆ? ಆ ಅಪಾರ ಧನವು ತನ್ನದೇ ಆದರೂ ತಾನಳಿದ ಕ್ಷಣದಲ್ಲಿ ತಾನದರ ಸ್ವಾಮಿಯೂ ಅಲ್ಲ, ರಕ್ಷಕನೂ ಅಲ್ಲ ಎಂಬುದು ಮಾತ್ರ ಅವನಿಗೆ ಹೊಳೆಯಲೇ ಇಲ್ಲ. ಆ ಧನಕ್ಕಾಗಿ ತಾನು ಜೀವಿಸಿರಬೇಕು; ತಾನು ಜೀವಂತನಾಗಿರುವುದಕ್ಕೆ ಆ ಧನವು ಬಿದ್ದಲ್ಲಿ ಬಿದ್ದು ಮುದ್ದಾದ ಮುದ್ದೆಯಾಗಿ ಉಳಿಯಬೇಕು!

ತಾನು ಯಾರಿಗಾಗಿ ಸಂಪಾದಿಸಬೇಕು? ಯಾರಿಗಾಗಿ ಸಂಗ್ರಹಿಸ ಬೇಕು? ಯಾರ ಹಿತಕ್ಕಾಗಿ ಅದನ್ನು ಸಂರಕ್ಷಣೆ ಮಾಡಬೇಕು? ಏತಕ್ಕಾಗಿ ಸಮಾಜವನ್ನು ವಂಚಿಸಬೇಕು? ಸಹಸ್ರ ಸಹಸ್ರ ಮಾನವರನ್ನು ಅದರ ಉಪಯೋಗದಿಂದ ಹೊರಗಿರಿಸಬೇಕು? ಏತಕ್ಕಾಗಿ ಆ ಅಪಾರ ಧನರಾಶಿಯನ್ನು ಗುಪ್ತ ಕಾರಾಗಾರದಲ್ಲಿ ಬಂಧಿಸಿ ಇಟ್ಟಿರುವುದು? ತನಗೇತಕ್ಕೆ ಹೊನ್ನಿನ ಮೇಲೆ ಈ ಅಚಲವಾದ, ಅಪಾರವಾದ ಹಂಬಲ? ಎಷ್ಟಾದರೂ ಧನವು ಚಂಚಲವಲ್ಲವೇ? ನಶ್ವರವಲ್ಲವೇ?

## —ನೂತನ ಶಾಸನ—

ಪ್ರಜಾಪ್ರಭುತ್ವವು ನೆಲೆಸಿತು. ಅಧಿಕಾರವಹಿಸಿದ ಪ್ರತಿನಿಧಿಗಳು ಅನೇಕ ನೂತನ ಶಾಸನಗಳನ್ನು ಆಚರಣೆಗೆ ತಂದರು. ಅವುಗಳಲ್ಲಿ "ಸಂತಾನ-ಶೂನ್ಯರ ಸ್ವತ್ತಿನ ಸ್ವಾಧೀನ—ಸಂತಾನ ಶೂನ್ಯರ ವರಮಾನದ ಮೇಲೆ ಇಮ್ಮಡಿ ತೆರಿಗೆ." ಈ ಎರಡು ಶಾಸನಗಳ ವಿಚಾರವಾಗಿ ವಿವರಗಳನ್ನು ಪೀಟರನು ಮೊದಲೇ ಕೇಳಿ ತಿಳಿದುಕೊಂಡಿದ್ದನು. ಆಗತಾನೇ ಪ್ರಚಾರಕ್ಕೆ ಬಂದಿದ್ದ ಈ ನೂತನ ಶಾಸನಗಳ ಸಾರಾಂಶವು ಈ ರೀತಿ ಇದ್ದಿತು :—

"ಸಂತಾನಶೂನ್ಯರು ತಮ್ಮ ವರಮಾನದ ಮೇಲೆ ಒಂದಕ್ಕೆರಡಾಗಿ ಸರಕಾರಕ್ಕೆ ತೆರಿಗೆಯನ್ನು ಕೊಡಬೇಕು. ಅವರು ತಮ್ಮ ಆಸ್ತಿಪಾಸ್ತಿಗಳ ವಿವರಗಳನ್ನು ಮರೆಮಾಚದಂತೆ ತಯಾರಿಸಿ ಎರಡು ತಿಂಗಳೊಳಗಾಗಿ ಸರಕಾರಕ್ಕೆ ವರದಿ ಒಪ್ಪಿಸಬೇಕು. ತಪ್ಪಿದಲ್ಲಿ ವಿಶೇಷ ದಂಡನೆ ಶಿಕ್ಷೆಗಳಿಗೆ ಗುರಿಯಾಗುತ್ತಾರೆ. ಸಂತತಿಯಿಲ್ಲದ ಸ್ಥಿತಿವಂತರು ಮೃತರಾದನಂತರ ಅವರ ವಿಶಿಷ್ಟ ಸ್ವತ್ತುಗಳೂ ಸರಕಾರದ ಭಂಡಾರಕ್ಕೆ ಸೇರಿಸಿಕೊಳ್ಳಪ್ಪಡುವುವು. ಸರಕಾರಕ್ಕೆ ವರದಿ ಮಾಡದೆ ಯಾರಾದರೂ ತಮ್ಮ ಸ್ವತ್ತುಗಳನ್ನು ಬಚ್ಚಿಟ್ಟು ಮೃತರಾದಲ್ಲಿ ಅಂತಹ ಸ್ವತ್ತುಗಳನ್ನು ಆದಷ್ಟು ಶೀಘ್ರದಲ್ಲಿ ಕಂಡುಹಿಡಿದು ಸರಕಾರಕ್ಕೆ ಒಪ್ಪಿಸುವ ಸತ್ಯವಂತರಿಗೆ ಸ್ವತ್ತಿನಲ್ಲಿ ಕಾಲು ಭಾಗವನ್ನು ಬಹುಮಾನವಾಗಿ ಕೊಡಲಾಗುವುದು."

ಪೀಟರನಿಗ ಈ ಶಾಸನವನ್ನು ಕಂಡು ದುಃಖವು ಉಕ್ಕಿ ಬಂದಿತು. ಪ್ರಾಣಸಮಾನಳಾದ ಪತ್ನಿಯು ಅತ್ಯುಗ್ರ—ಉಪದ್ರವಕಾರಕ ಕಾಹಿಲೆಯಿಂದ ನರಳಿ ಚಿಕಿತ್ಸೆಗಳೆಲ್ಲವೂ ವಿಫಲವಾಗಿ—ಅವಳು ಮರಣೋನ್ಮುಖಳಾಗಿರುವ

ಕೆಂದು ವೈದ್ಯರು ತೀರ್ಪುಕೊಟ್ಟಾಗ ಆ ವ್ಯಾಧಿಪೀಡಿತಳ ತಲೆದಿಂಬಿನ ಬಳಿ ಕುಳಿತು ಆಶಾಭಂಗದಿಂದ ಬಿಕ್ಕಿ ಬಿಕ್ಕಿ ಅಳುವ ಪ್ರೀತಿಯ ಪ ತಿ ಯ ಂ ತೆ, ಲೇಖನಿಯನ್ನು ಹಿಡಿದು ರಾಶಿ ರಾಶಿಯಾಗಿ ಹಾಳೆಗಳಮೇಲೆ ಹಾಳೆಗಳನ್ನು ಬರೆದು ಕೆಡುವುತ್ತಿದ್ದ ಬಲಗೈ ಕತ್ತರಿಸಿಹೋಗಲು ದಾರಿಗಾಣದೆ ನಿರಾಶೆಯಿಂದ ಎದೆಬತ್ತಿ ಬೆಂಗಾಡಾಗಿ ಶೋಕಸಾಗರದಲ್ಲಿ ಮುಳುಗಿ ತೊಳಲುವ ಉತ್ತಮ ಸಾಹಿತಿಯಂತೆ, ದೀರ್ಘಕಾಲದ ಸಮುದ್ರಯಾನವನ್ನು ಮುಗಿಸಿ, ಸ್ವಗೃಹ ಸೇರಿ ಪ್ರೀತಿಯ ಸತಿಸುತರೊಂದಿಗೆ ಕಲೆತು ಸಂತಸದಿಂದ ನ ಲಿ ದಾ ಡ ಲು ನಿರೀಕ್ಷಿಸುತ್ತಿದ್ದಾಗ ತೀರಪ್ರದೇಶಕ್ಕೆ ಅನತಿದೂರದಲ್ಲಿ ಅವನಿದ್ದ ಹ ಡ ಗು ಬಂಡೆಗೆ ಬಡಿದು ತುಂಡುತುಂಡಾಗಲು, ನೀರಲ್ಲಿ ಬಿದ್ದು ಸಾಹಸದಿಂದ ಈಜುತ್ತಿದ್ದಾಗ ಅಲೆಗಳ ಪ್ರಚಂಡ ತಾಡನದಿಂದ ಹೊಡೆದುಕೊಂಡು ಬಂದು ಬಿಚ್ಚಿದ ತಿಮಿಂಗಿಲದ ಬಾಯ ಬಳಿಸೇರಿ ಭಯಾರ್ತನಾಗಿ ತತ್ತರಿಸುವ ನಾವಿಕ ನಂತೆ, ಅನೇಕ ವರ್ಷಗಳನಂತರದಲ್ಲಿ ಕಾರಾಗೃಹದಿಂದ ವಿಮುಕ್ತನಾಗಿ, ನಗರಕ್ಕೆ ಬಂದು, ಮೂರನೆಯ ಅಂತಸ್ತಿನಲ್ಲಿರುವ ತನ್ನ ಪ್ರೇಯಸಿಯನ್ನು ಮುಚ್ಚುಮರೆಯಿಂದ ಕಾಣುವುದಕ್ಕಾಗಿ ನಿಶಿರಾತ್ರಿಯಲ್ಲಿ ನೂಲೇಣಿಯನ್ನು ಹತ್ತಿ ಮೇಲಿನವರೆಗೂ ಬಂದಾಗ ವಿಜಯೋತ್ಸಾಹದಲ್ಲಿ ತಲೆ ತಿರುಗಿ ಕಾಲು ಜಾರಿ ಕೆಳಗೆ ಬೀಳುತ್ತಿರುವ, ನಿರಾಶೆಯಿಂದ ನೊಂದು, ಶೋಕಾಗ್ನಿಯಿಂದ ಬೆಂದು ನಿಮಿಷಮಾತ್ರದಲ್ಲಿ ಹಿಡಿ ಮಣ್ಣಾಗಲಿರುವ ವಿರಹಿಯಂತೆ, ಶಾಸನದ ಬಲೆಯಲ್ಲಿ ಸಿಲುಕಿ ತನ್ನ ಇಡೀ ಜೀವಮಾನ ಕಾಲದಲ್ಲಿ ಬಗೆ ಬಗೆಯ ರೀತಿ ನೀತಿಗಳಿಂದ ಶೇಖರಿಸಿ ಸಂರಕ್ಷಿಸುತ್ತ ಬಂದಿದ್ದ ಅಪಾರ ಗುಪ್ತ ನಿಧಿಯನ್ನು ಸರಕಾರಕ್ಕೆ ವಶಪಡಿಸಬೇಕಾದ ಕಾಲವು ಒ ದ ಗಿ ಬಿ ಟ್ಟಿ ತ ಲ್ಲಾ ಎಂದು ಪೀಟರನು ನೊಂದು ನಿರಾಶನಾದನು; ಧನದಾಸನಾದ ಅವನು ಅತುಳ ಶ್ರಮದಿಂದ, ಅತಿ ಕಾರ್ಪಣ್ಯದಿಂದ ಬಚ್ಚಿಟ್ಟ ಭಾಗ್ಯವನ್ನು ಬಿಚ್ಚಿಡಬೇಕಾಗಿ ಬಂದಿತಲ್ಲಾ ಎಂದು ಆಳವಿಲ್ಲದ ಅಳಲಿನ ಕಡಲಿನಲ್ಲಿ ಮುಳುಗಿ ತೊಳಲಸಾಗಿ ದನು. ಆ ಅಪಾರ ನಿಧಿಗೆ ತನ್ನ ಒಡೆತನವು ಸ್ಥಿರವಲ್ಲವೆಂದು ಸ್ಪಷ್ಟವಾಗಿ ಕಂಡುಬಂದ ಬಳಿಕ ತಾನು ಬದುಕಿದ್ದರೂ ಸತ್ತಂತೆಯೇ ಎಂದು ಅವನು ಭಾವಿಸಿದನು.

ಪೀಟರನಿಗೆ ಈಗ ಪ್ರಜಾಪ್ರಭುತ್ವ ಸರಕಾರದಮೇಲೆ ತಡೆಯಲಾರದ ಕ್ರೋಧವುಂಟಾಯಿತು. ಈ ಶಾಸನವನ್ನು ಸೂಚಿಸಿದವರ, ಮಂಡಿಸಿದವರ ಆಚರಣೆಗೆ ತರಲಿರುವವರ, ಎಲ್ಲರ ಮೇಲೆಯೂ ಅವನಿಗೆ ಅಪಾರ ಕ್ರೋಧ. ಅವರೆಲ್ಲರನ್ನೂ, ಅವರ ಹಿಂದಿನ-ಮುಂದಿನ ಹತ್ತು ಸಂತತಿಯವರನ್ನೂ, ಪೀಟರನು ಯಥೇಚ್ಛವಾಗಿ ಶಪಿಸಿದನು. ಅಷ್ಟಾದರೂ ಅವನ ಮನಸ್ಸಿಗೆ ತೃಪ್ತಿಯೂ ಶಾಂತಿಯೂ ಉಂಟಾಗಲಿಲ್ಲ. ರಾಗದ್ವೇಷಗಳ ಪರಮಾವಧಿಯಲ್ಲಿ ತೃಪ್ತಿ, ಶಾಂತಿಗಳು ಲಭಿಸಬಲ್ಲವು ಎಂದು ಎಲ್ಲಿ ಓದಿದ್ದನೋ, ಯಾರಿಂದ ಉಪದೇಶ ಹೊಂದಿದ್ದನೋ ತಿಳಿಯದು. ಅಂತು ಅವನ ಮನಸ್ಸು ಈಗ ಅಲ್ಲೋಲ ಕಲ್ಲೋಲವಾದ ಭಾವನಾತರಂಗಗಳಿಗೆ ಸಿಲುಕಿ ತತ್ತಳಿಸುವಂತಾಯಿತು.

"ಇದೊಂದು ಕರಾಳ ಶಾಸನ! ನನಗೆ ದೊರೆತ ಈ ಸುದ್ದಿಯು ಸುಳ್ಳಾಗಿರಬಾರದೆ? ನನ್ನನ್ನು ಹಂಗಿಸಲೆಂದೇ-ತೊಂದರೆಗೀಡಾಗಿಸಲೆಂದೇ-ಯಾರಾದರೂ ಹೊಟ್ಟೆಕಿಚ್ಚಿಗಾಗಿ ಹೂಡಿದ ಒಳಸಂಚಾಗಿರಬಹುದೇ?......... ಇರಬಹುದು; ಇದು ಸುಳ್ಳಾಗಿರಬಹುದು; ಇಂತಹ ವದಂತಿಗಳನ್ನು ನಂಬಬಾರದು." ಕ್ಷಣಕಾಲ ಪೀಟರನ ಮನಸ್ಸಿನಲ್ಲಿ ಆಶಾವಾದವು ಮೂಡಿತು. ಆದರೆ ಅವನು ಮತ್ತೆ ಆಲೋಚಿಸಿ ನೋಡಿದನು. ತರ್ಕದ ಅಂತ್ಯದಲ್ಲಿ ಅವನಿಗೆ ಹೊಳೆದುದೇನು? "ಇರಲಾರದು, ಸುಳ್ಳಾಗಿ ಇರಲಾರದು; ಈ ಶಾಸನವು ನನ್ನೊಬ್ಬನನ್ನೇ ಕುರಿತುದಲ್ಲ. ನನ್ನಂತೆ ಸಂತತಿಯಿಲ್ಲದ ಎಷ್ಟೋ ಸ್ಥಿತಿವಂತರು ಈ ದೇಶದಲ್ಲಿದ್ದಾರೆ. ಅವರೆಲ್ಲರಿಗೂ ಈ ಶಾಸನವು ಅನ್ವಯಿಸತಕ್ಕುದು. ಕೇವಲ ನನ್ನೊಬ್ಬನಿಗಾಗಿ ಒಂದು ಶಾಸನವು ಆಚರಣೆಗೆ ಬರಲಾರದು. ಛಿ! ಅನ್ಯಾಯ! ಪರಮ ಅನ್ಯಾಯ!"

ಮರುಕ್ಷಣದಲ್ಲಿಯೇ ಅವನಲ್ಲಿ ಮತ್ತೆ ವಿಕಲ್ಪ ಮೂಡಿತು.

"ಏನು? ಒಬ್ಬನಿಗಾಗಿ ಒಂದು ಶಾಸನವು ಆಚರಣೆಗೆ ಬರಬಾರದೇ? ಏತಕ್ಕಾಗಿ ಬರಬಾರದು? ಎಪ್ಪತ್ತು ಮಣ ಚಿನ್ನವನ್ನು ಮುಟ್ಟದೆ, ಮೂಸಿ ನೋಡದೆ, ಬೆಳಕು ಕಂಡರೆ ಬತ್ತಿಹೋಗುತ್ತದೆಂದು ನಿತ್ರಾಣ ಪ್ರಭು

ಬಚ್ಚಿಟ್ಟಿದ್ದಾನೆ? ನನ್ನ ಕುರಿತೇ ಈ ಶಾಸನ! ನನಗಾಗುವ ಶಿಕ್ಷೆ ನನ್ನಂತಹ ನನ್ನನಂತರದವರಿಗೂ ಆದೀತು. ಈಗ ತಿಳಿಯಿತು. ನನ್ನನ್ನು ಶಿಕ್ಷಿಸಿ ಇತರರನ್ನು ಎಚ್ಚರಿಸಲೆಂದೇ ಈ ಶಾಸನವು ಜನ್ಮ ತಾಳಿರಬೇಕು! ಈಗೇನು ಮಾಡಲಿ? ನಲವತ್ತು ವರ್ಷಗಳ ಕಾಲ ಇಷ್ಟೊಂದು ಸಂಪ್ರೀತಿಯಿಂದ ರಕ್ಷಿಸುತ್ತ ಬಂದ ಈ ಸಂಪತ್ತು ಇಂದು ನನ್ನ ಕೈಬಿಟ್ಟು ಸರಕಾರದ ವಶವಾಗಲು ಸನ್ನಾಹ ಮಾಡುವಂತಿದೆ. ಈ ಜಡವಸ್ತುವು ಎಷ್ಟೊಂದು ಮಮತಾವಿಹೀನವಾದುದು! ಎಷ್ಟೊಂದು ಕೃತಘ್ನವಾದುದು! ಈ ಅಪಾರ ನಿಧಿಯು—ನಾನದಕ್ಕೆ ತೋರಿಕೊಟ್ಟ ಗುಪ್ತಸ್ಥಾನದಿಂದ ಹೊರಬಿದ್ದು ಹೊರಟು ಹೋಗುವುದಾದರೆ—ಅದನ್ನೇ ನಂಬಿ ನಲಿಯುತ್ತಿದ್ದ ನನ್ನ ಪ್ರಾಣವೂ ಹೋದಂತೆಯೇ ಸರಿ. ಈಗೇನು ಮಾಡಲಿ? ಯಾರಲ್ಲಿ ಹೇಳಿಕೊಳ್ಳಲಿ? ಈ ಧನವನ್ನೇ ನಂಬಿ ಜನತೆಯನ್ನು ನಾನು ಕೈಬಿಟ್ಟಿದ್ದೆ. ಧನದಾಸನೆಂದು ಜನತೆಯು ನನ್ನನ್ನೂ ಕೈಬಿಟ್ಟಿತು. ಈ ಧನವು ನನ್ನನ್ನು ಕೈ ಬಿಟ್ಟು ನಡೆಯುವುದಾದರೆ-ಧನವಿದ್ದಾಗಲೇ ನನ್ನನ್ನು ಲಕ್ಷಿಸದ ಜನತೆಯು, ಧನವು ಕೈಬಿಟ್ಟಮೇಲೆ ನನ್ನನ್ನು ಪುರಸ್ಕರಿಸೀತೇ?"

ಪೀಟರನ ಸಮಸ್ಯೆಗೆ ಪರಿಹಾರವಿಲ್ಲದಂತಾಯಿತು. ಏನೊಂದೂ ಸ್ಪಷ್ಟವಾಗಿ ತೋಚದೆ ಅವನು ತಲೆಯಮೇಲೆ ಕೈಯಿಟ್ಟು ಕುಳಿತನು. ಏನೇನೋ ಯೋಚಿಸುತ್ತ ಎಷ್ಟೋ ಹೊತ್ತು ಅವನು ಸ್ತಬ್ಧನಾಗಿ ಕುಳಿತು ಬಿಟ್ಟಿದ್ದಾನೆ. ಅಷ್ಟರಲ್ಲಿ ಉಲ್ಫ್ ಬೊಗಳಲಾರಂಭಿಸಿತು. ಪೀಟರನು ತನ್ನ ಭಾವ ಸಮಾಧಿಯಿಂದ ಎಚ್ಚೆತ್ತು ಮೇಲೆದ್ದು ನೋಡಿದನು. ಹೆಬ್ಬಾಗಿಲಲ್ಲಿ ಸರಕಾರಿ ಅಧಿಕಾರಿಯು ತನ್ನನ್ನೇ ಕುರಿತು ಬಂಗಲೆಯ ಹಜಾರದ ಬಳಿ ಬರುತ್ತಿದ್ದಾನೆ. ಅವನ ಉಡುಪನ್ನು ನೋಡಿದಾಕ್ಷಣ ಅವನು ತೆರಿಗೆ ಇಲಾಖೆಗೆ ಸೇರಿದವನೆಂದು ಪೀಟರನಿಗೆ ಗೊತ್ತಾಗಿ ಹೋಯಿತು. ವಿಧಿಯಿಲ್ಲದೆ ನಾಯಿ ಬಾಯನ್ನು ಮುಚ್ಚಿಸಿ ಅಧಿಕಾರಿಯನ್ನು ಸ್ವಾಗತಿಸಲು ಪೀಟರನು ಮುಂದೆಬಂದನು.

ಆತನು ಪೀಟರನನ್ನು ಕಂಡು "ನಾನು ತೆರಿಗೆ ಇಲಾಖೆಯ ಅಧಿಕಾರಿ;

ನನ್ನ ಹೆಸರು 'ಜೇಮ್ಸ್' ಎಂದು. ತಮ್ಮನ್ನು ಕಾಣಲು ಬಂದಿದ್ದೇನೆ" ಎಂದು ಹೇಳಿದನು. ಪೀಟರನು ಕೆಂಡದ ಗಟ್ಟಿಗಳನ್ನು ನುಂಗುವಂತೆ ಅಧಿಕಾರಿಯ ಮಾತುಗಳನ್ನು ನುಂಗಿಕೊಂಡನು. ಎಷ್ಟೊಂದು ಅತುಳ ಶ್ರೀಮಂತನಾದರೇನು? ಮನಸ್ಸಾಕ್ಷಿಯನ್ನು ಚೆಲ್ಲಿಗೊಟ್ಟು ಅಧಿಕಾರಿಯ ಹಿಡಿತದಲ್ಲಿ ಸಿಲುಕಿ ಬಿದ್ದಾಗ ಆರಡಿ ಎತ್ತರದವನೂ ಮೂರಡಿಗೆ ತಗ್ಗಿ ಕುಗ್ಗಿ ನಡೆಯಬೇಕಾಗುವದು.

ಜೇಮ್ಸ್ ಎಂಬ ಆ ಅಧಿಕಾರಿಯನ್ನು ಮರ್ಯಾದೆಯಿಂದ ಕರೆತಂದು ಪೀಟರನು ಹಜಾರದಲ್ಲಿ ಕುರ್ಚಿಯಲ್ಲಿ ಕುಳ್ಳಿರಿಸಿದನು. ಒಳಗೆ ಹೋಗಿ ಎರಡು ಗೊಂಚಲು ದ್ರಾಕ್ಷಿಯನ್ನೂ ನಾಲ್ಕು ಸೇಬುಗಳನ್ನೂ ತಂದು ಅಧಿಕಾರಿಯ ಮುಂದಿದ್ದ ಮೇಜಿನ ಮೇಲಿರಿಸಿದನು.

"ಇವನ್ನು ಸ್ವೀಕರಿಸಿ; ದಣಿದು ಬಂದಿದ್ದೀರಿ." ಎಂದ ಪೀಟರ್ ತನಗೂ ತಿಳಿಯದೆ.

ಅಧಿಕಾರಿಯು ಯಾವ ಕಾರ್ಯಾರ್ಥವಾಗಿ ತನ್ನಲ್ಲಿಗೆ ಬಂದಿರುವನೆಂದು ಪೀಟರನಿಗೆ ಮೊದಲೇ ಗೊತ್ತಿದ್ದಿತು. ಈಗೊಂದು ಆರಕ್ಷಣದ ಮುಂದೆ ಅವನು ಶಪಿಸುತ್ತಿದ್ದ ನರಶ್ರೇಣಿಯಲ್ಲಿ ಜೇಮ್ಸನೂ ಒಬ್ಬನಾಗಿದ್ದನು. ಜನರು ಬೆನ್ನುಹಿಂದೆ ನಲವತ್ತು ಬಗೆಯಾಗಿ ಮಾತನಾಡಬಹುದು. ಆದರೆ ಅವರ ಮುಂದೆ ನಿಂತು ಒಂದೇ ಮಾತನ್ನು ಆಡಲು ಹತ್ತಾರು ಸಲ ಯೋಚಿಸಬೇಕಾದೀತು. ಪೀಟರನ ಪರಿಸ್ಥಿತಿಯು ಹೀಗಾಯಿತು. ಅಧಿಕಾರಯುತನಾಗಿ ಬಂದಿದ್ದ ಜೇಮ್ಸನನ್ನು ಎಲ್ಲರೊಂದಿಗೆ ಸೇರಿಸಿ ಬೆನ್ನಹಿಂದೆ ಬೇಕಾದಷ್ಟು ಬೈದು ಶಪಿಸಿದ್ದರೂ ಅವನೇ ಎದುರಿಗೆ ಮೂರ್ತಿವತ್ತಾಗಿ ಬಂದು ನಿಂತಾಗ ಅವನನ್ನು ಏನನ್ನಲೂ ಪೀಟರನಿಗೆ ಸಾಧ್ಯವಾಗಲಿಲ್ಲ. ಬದಲಾಗಿ ಬಂಗಲೆಯ ಬಾಗಿಲಿಗೆ ಬಂದ ಒಡನೆಯೇ ಅವನನ್ನು ಆದರದಿಂದ ಬರಮಾಡಿಕೊಂಡು ಪುರಸ್ಕಾರದಿಂದ ಸತ್ಕರಿಸಬೇಕಾಯಿತು. ರಾಗದ್ವೇಷಗಳ ಪರಿವರ್ತನಕ್ಕೆ ಇದೊಂದು ಉತ್ತಮ ನಿದರ್ಶನ. ಅಧಿಕಾರಿಯೊಂದಿಗೆ ಹೊಂದಿಕೊಂಡು

ಹೋಗುವುದು ಒಳಿತೆಂದು ಅವನು ಅರಿತುಕೊಂಡು ಅವನನ್ನು ನಯ ವಿನಯ ನಮ್ರತೆಗಳಿಂದ ವಶಪಡಿಸಿಕೊಂಡು ತನ್ನ ಕೆಲಸವನ್ನು ಆಗುಮಾಡಿಸಿಕೊಳ್ಳ ಬೇಕೆಂಬ ಪ್ರೇರೇಪಣೆಯೂ ಅವನಿಗುಂಟಾಯಿತು.

ಅಂದು ಬೆಳಗಿನಿಂದ ಅಧಿಕಾರಿ ಜೇವ್ಸ್‌ನು ಸುತ್ತಿ ಸುತ್ತಿ ದಣಿದು ಬಂದಿದ್ದನು. ಪೀಟರನು ತಂದಿರಿಸಿದ ಸೇಬನ್ನು ಕುರ್ರ್ರು ಗಬಗಬನೆ ತಿಂದು ತೀರಿಸಿದನು. ದ್ರಾಕ್ಷಿಯ ಎರಡು ಗೊಂಚಲುಗಳನ್ನೂ ಬಿಡಿಸಿ ಚಪ್ಪರಿಸಿ ಬಿಟ್ಟನು. ಇದನ್ನು ನೋಡಿದ ಪೀಟರನಿಗೆ ಆನಂದವಾಯಿತು.

'ಈ ಅಧಿಕಾರಿಯಿಂದ ನನಗೆ ಅನುಕೂಲವೇ ಆದೀತು' ಎಂದು ಅವನು ಅಂದುಕೊಂಡನು.

ಬಳಿಕ ಅಧಿಕಾರಿಯು ಮೇಜಿನ ಮೇಲೆ ತಾನು ತಂದಿರಿಸಿದ್ದ ಕಾಗದದ ಕಡತದಿಂದ ಒಂದನ್ನು ಹೊರತೆಗೆದು ಕೈಯಲ್ಲಿ ಹಿಡಿದು ನಗುತ್ತ ಪೀಟರನಿಗೆ ಹೇಳಿದ :

"ತಮಗೆ ತೊಂದರೆ ಕೊಡಬೇಕಾಗಿರುವುದರಿಂದ ಮನ್ನಿಸಬೇಕು."

"ತೊಂದರೆಯೆಂತಹುದು ?" ಉಗುಳು ನುಂಗುತ್ತ ಪೀಟರನು ಪ್ರತ್ಯುತ್ತರವಿತ್ತನು.

"ನೂತನ ಶಾಸನದ ನಿಬಂಧನೆಗಳಿಗನುಸಾರವಾಗಿ ಈಗ ನಿಮಗೆ ಸೂಚನೆ ಕೊಡಬೇಕಾಗಿದೆ. ನೀವು ಶಾಸನಕ್ರಮಗಳಿಗೆ ಒಳಪಡುತ್ತೀರಿ. ಇಗೋ, ಶಾಸನದ ಈ ನಕಲು ಪ್ರತಿಯನ್ನು ಸ್ವೀಕರಿಸಿ; ಅದು ನಿಮಗೆ ಸಂದಾಯವಾದುದಕ್ಕೆ ಇಲ್ಲಿ ಸಹಿ ಮಾಡಿರಿ."

"ಶಾಸನದ ನಕಲು ಪ್ರತಿಯನ್ನು ಹಾಗೆಯೇ ಕೊಟ್ಟು ಹೋಗಿ. ಸಹಿ ಮಾಡಿಯೇ ಅದನ್ನು ತೆಗೆದುಕೊಳ್ಳಬೇಕೆ? ಹಾಗೆಯೇ ಓದಿನೋಡಿ ಕೊಂಡರಾಗದೇ ?

ಪೀಟರನು ಅಧಿಕಾರಿಯನ್ನು ಕೇಳಿದನು.

"ಕೂಡದು; ಸಹಿಮಾಡಿ ತೆಗೆದುಕೊಳ್ಳಬೇಕು."

"ಇಲ್ಲದಿದ್ದರೆ?"

"ಶಾಸನಗಳನ್ನು ಉಲ್ಲಂಘನೆ ಮಾಡಿದ ತಪ್ಪಿಗೆ ಶಿಕ್ಷೆಯಾದೀತು."

"ಈಗ ನಾನು ಯಾವ ತಪ್ಪು ಮಾಡಲಿಲ್ಲವಲ್ಲ."

"ನಕಲು ಪ್ರತಿಯನ್ನು ತೆಗೆದುಕೊಳ್ಳಲು ಒಪ್ಪದಿರುವುದೇ ತಪ್ಪು. ಆ ತಪ್ಪಿಗೆ ಶಿಕ್ಷೆಯು ತಪ್ಪದು."

"ಬೇಡ, ಬೇಡ;" ಪೀಟರನು ಹೇಳಿದನು. "ಆ ನಕಲನ್ನು ಕೊಡಿ ಇಲ್ಲಿ. ಸಹಿಮಾಡುತ್ತೇನೆ. ಆದರೆ ಅದರಿಂದೇನೂ ಬಾಧಕವಿಲ್ಲವೇ?"

"ಶಾಸನದ ನಕಲಿನ ಅಡಿಯಲ್ಲಿ ಸೂಚನೆ ಇದೆ. ಸಹಿಮಾಡಿ ತೆಗೆದುಕೊಂಡು ಅದನ್ನು ಓದಿನೋಡಿ."

ಪೀಟರನು ನಡುಗುವ ಕೈಯಲ್ಲಿ ಸಹಿಮಾಡಿದನು.

"ಸಹಿಮಾಡುವಾಗ ನಿಮ್ಮ ಕೈನಡಗುತ್ತದೇತಕ್ಕೆ?" ಅಧಿಕಾರಿ ಕೇಳಿದನು.

ಈ ಪ್ರಶ್ನೆಯನ್ನು ಪೀಟರನು ಎದಿರು ನೋಡಿರಲಿಲ್ಲ. ಆದರೂ ಚತುರತೆಯಿಂದ ಅವನು ಹೇಳಿದನು:

"ಎಪ್ಪತ್ತು ವಯಸ್ಸನ್ನು ಸಮೀಪಿಸುತ್ತಿರುವ ನನಗೆ ಚೈತನ್ಯವೆಲ್ಲಿಂದ ಬರಬೇಕು? ಇಂದೋ ನಾಳೆಯೋ ಸಾಯತಕ್ಕವನು ನಾನು. ನನ್ನಲ್ಲಿ ಯಾವ ಹಣವಿದೆ? ನನಗಾವ ಹಂಬಲವಿದೆ? ಈ ಇಳಿವಯಸ್ಸಿನಲ್ಲಿ ಕೈನಡುಗದೆ ಏನು ಮಾಡೀತು?"

ಪೀಟರನು ಅಧಿಕಾರಿಯಲ್ಲಿ ಹೀಗೆ ಹೊಂದಿಸಿಕೊಂಡು ನುಡಿದರೂ

ಅವನ ಅಂತಃಕರಣದಲ್ಲಿ ಉಂಟಾದ ಭಾವನೆಯೇನು ?

"ಇಷ್ಟು ದಿನವೂ ಮಮತೆಯಿಂದ ಗುಪ್ತವಾಗಿ ಶೇಖರಿಸಿಟ್ಟ ನಿಧಿಯನ್ನು ಇಂದು ಒಂದೇ ಒಂದು ಪುಟ್ಟ ಸಹಿಯಿಂದ ಸರಕಾರಕ್ಕೆ ಸಮರ್ಪಿಸಿ ಬಿಡಬೇಕಲ್ಲವೆ? "

ಇಂತಹ ಭಾವನೆಯುಂಟಾದಾಗ ಅವನ ಕೈ ನಡುಗಿದುದೇನಾಶ್ಚರ್ಯ? ಸಹಿಮಾಡಿ ನಕಲನ್ನು ಕೈಗೆ ತೆಗೆದುಕೊಂಡು ಪೀಟರನು ಅದನ್ನು ಓದಿ ನೋಡಿದನು. ಮತ್ತೆ ಮತ್ತೆ ಓದಿ ನೋಡಿದನು. ಅವನ ಮುಖವು ವಿವರ್ಣವಾಯಿತು. ಅವನು ನಿಟ್ಟುಸಿರನ್ನು ಬಿಟ್ಟನು.

ಅಷ್ಟರಲ್ಲಿ ತಾನು ಬಂದ ಕೆಲಸವು ಮುಗಿಯಿತೆಂದು ಅಧಿಕಾರಿಯು ಹೊರಡುವುದಕ್ಕಾಗಿ ಅಲ್ಲಿಂದ ಮೇಲೆದ್ದನು. ಆದರೆ ಅವನನ್ನು ಅಷ್ಟು ಸುಲಭವಾಗಿ ಹೋಗಗೊಡಲು ಪೀಟರನ ಮನಸ್ಸು ಒಪ್ಪಲಿಲ್ಲ.

"ಎದ್ದಿರಲ್ಲ; ಹೊರಟು ನಿಂತಿರುವಿರೇನು ? ಕುಳಿತುಕೊಳ್ಳಿ," ಎನ್ನುತ್ತ ಪೀಟರನು ಒಳಗೆ ಹೋಗಿ ಮತ್ತೆರಡು ಗೊಂಚಲು ದ್ರಾಕ್ಷಿಯನ್ನು ತಂದು ಅವನ ಮುಂದಿರಿಸಿದನು. ಅಧಿಕಾರಿಯು ದ್ರಾಕ್ಷಿಹಣ್ಣನ್ನು ಚಪ್ಪರಿಸುತ್ತಿದ್ದನು. ಪೀಟರನು ಅವನನ್ನು ಕುರಿತು ಕೇಳಿದನು :

"ಇಂತಹ ಶಾಸನಗಳು ಏತಕ್ಕಾಗಿ? "

"ಜನರ ಕ್ಷೇಮಕ್ಕಾಗಿ;" ಅಧಿಕಾರಿಯು ಹೇಳಿದನು. "ಒಳ್ಳೆಯ ಶಾಸನಗಳೂ ಒಳ್ಳೆಯ ಮನುಷ್ಯರೂ ನಾಗರಿಕ ನಾಡಿಗೆ ಆಧಾರಸ್ತಂಭಗಳಿದ್ದಂತೆ."

"ಅವರವರಿಗೆ ಬೇಕಾದಷ್ಟು ದ್ರವ್ಯವನ್ನು ಅವರವರು ದುಡಿದು ಸಂಪಾದಿಸಿಕೊಳ್ಳಬಾರದೇ ? ಚೈತನ್ಯವಿದ್ದಷ್ಟು ಕೂಡಿಸಿಕೊಳ್ಳಬಾರದೇ ? "

ಪೀಟರನು ಕೇಳಿದನು.

" ಸಂಪಾದಿಸಬಹುದು ; ಕೂಡಿಸಿ ಇಡಲೂ ಬಹುದು.........ಆದರೆ....?

" ಆದರೆ ? "

" ಆದರೆ ಒಬ್ಬೊಬ್ಬರಿಗೂ ಒಂದೊಂದು ಅಂತಸ್ತು ಇದೆ. ಆಯಾ ಅಂತಸ್ತಿಗೆ ತಕ್ಕಂತೆ ಸುಖಜೀವನವನ್ನು ನಡೆಸಲು ಎಷ್ಟು ಹಣವು ಬೇಕಾದೀತೆಂಬುದನ್ನು ಸರಕಾರವು ಬಲ್ಲುದು. ಅದಕ್ಕೂ ಹೆಚ್ಚಿನದನ್ನು ತೆರಿಗೆ ಕೊಡದೆ ಇಟ್ಟುಕೊಳ್ಳುವುದಕ್ಕಾಗಲಿ, ಬಚ್ಚಿಡುವುದಕ್ಕಾಗಲಿ ಯಾವ ಪ್ರಜೆಗೂ ಅಧಿಕಾರವಿಲ್ಲ-ಅದು ಉಚಿತವೂ ಅಲ್ಲ. ಅದರಿಂದ ಇತರ ಪ್ರಜೆಗಳಿಗೆ ಹಾನಿಯುಂಟಾಗುವುದರಿಂದ ...... ...... .... "

" ಆದುದರಿಂದ ಅದನ್ನು ಸರಕಾರದ ಬೊಕ್ಕಸಕ್ಕೆ ತುಂಬಿಕೊಳ್ಳಬೇಕಲ್ಲವೇ ? "

" ಬೊಕ್ಕಸಕ್ಕೆ ತುಂಬಿಕೊಳ್ಳುವುದೆಂದಲ್ಲ. "

" ಹಾಗಾದರೆ ? "

"ಅದರಿಂದ ಬಡಜನರ ಉದ್ಧಾರಕ್ಕೆ ನೆರವಾಗುವ ಎಷ್ಟೋ ಸಾರ್ವಜನಿಕ ಕಾರ್ಯಗಳು ರೂಪುಗೊಂಡು ಮುಂದುವರಿಯಬಲ್ಲವು. ಧನಿಕ ಪ್ರಜೆಗಳ ಬಳಿ ಇರುವ ಹೆಚ್ಚು ಹಣವನ್ನು ಸರಕಾರವು ಸಾಲವಾಗಿ ಪಡೆಯಬಹುದು ; ಅಥವಾ, ಅವರು ಒಪ್ಪಿದರೆ ಸಹಾಯವಾಗಿ ಪಡೆಯಬಹುದು. ದೇಶದಲ್ಲಿರುವ ಹೆಚ್ಚುವರಿ ನಿಧಿಯನ್ನು ಆಕರ್ಷಿಸಿ, ಉತ್ತಮವೂ, ಉಪಯೋಗಕರವೂ, ಔದ್ಯೋಗಿಕವೂ ಆದ ವಿಧಾನಗಳಲ್ಲಿ ಪಳಗಿಸಿ ಜನೋಪಕಾರಿಯಾದ ಅಭಿವೃದ್ಧಿಕಾರ್ಯಗಳನ್ನು ಕೈಗೊಳ್ಳುವುದು ಸರಕಾರದ ನೀತಿ; ಅದರ ಉದಾತ್ತ ಧ್ಯೇಯ. "

'' ಹಾಗೆಂದು ಈ ನಕಲು ಪ್ರತಿಯಲ್ಲಿ ಕಾಣಿಸಲಿಲ್ಲವಲ್ಲ " ಪೀಟರನು ಕೇಳಿದನು.

"ನಮ್ಮದು ಶಾಸನವನ್ನು ಆಚರಣೆಗೆ ತರುವ ಇಲಾಖೆ. ಶಾಸನದ ನಿಬಂಧನೆಗಳಿಗೆ ಒಳಪಡುವವರ ಬಳಿ ತೆರಿಗೆಯನ್ನು ತೆಗೆದುಕೊಳ್ಳುವುದು ; ಸಂತಾನಶೂನ್ಯರ ಸ್ವತ್ತನ್ನು ಸ್ವಾಧೀನಪಡಿಸಿಕೊಂಡು ಸರಕಾರದ ಭಂಡಾರಕ್ಕೆ ಸೇರಿಸುವುದು ಮತ್ತೊಂದು ಇಲಾಖೆಯ ಕೆಲಸ; ಹಾಗೆ ಉತ್ಪನ್ನವಾದ ನಿಧಿಮೊತ್ತದ ನಾನಾ ವಿಭಾಗಗಳನ್ನು ನಾನಾ ವಿಧಾನಗಳಲ್ಲಿ ಪಳಗಿಸಿ ಜನಕ್ಷೇಮವನ್ನು ಸಾಧಿಸುವ ಇಲಾಖೆಯೇ ಬೇರೆ. ಈ ವಿಚಾರಗಳನ್ನೆಲ್ಲ ಈಗಲೇ ಈ ನಕಲು ಪ್ರತಿಯಲ್ಲಿ ಕಾಣಿಸಬೇಕೆಂಬ ನಿಯಮವಿಲ್ಲ. ಕಾಣಿಸದಿರುವುದರಿಂದ ಶಾಸನಕ್ಕೆ ಬೆಲೆಯಿಲ್ಲವೆಂದಲ್ಲ. ಶಾಸನವನ್ನು ಆಚರಣೆಗೆ ತರುವುದು ಶಾಸನ ಸಭೆಯ ಉದ್ದೇಶ. ಕಾಲಾನುಗುಣ್ಯವಾಗಿ ಸರಕಾರವು ಆಚರಿಸಬೇಕೆಂದಿರುವ ರೀತಿನೀತಿಗಳು ಹೊರಬಿದ್ದೇ ಬೀಳುವುವು. ಆದರೆ ಹೀಗೆ ಉತ್ಪನ್ನಗೊಂಡ ನಿಧಿಯನ್ನು ಪ್ರಜಾಪ್ರಭುತ್ವವು ವಿತರಣೆಯಿಂದಲೂ ವಿಚಕ್ಷಣೆಯಿಂದಲೂ ವಿನಿಯೋಗಿಸಲು ಸೂಕ್ತ ವಿಧಾನಗಳನ್ನು ಪರಿಶೀಲಿಸುತ್ತಿರುವುದು. ಏತನ್ಮಧ್ಯೆ ಪ್ರಜಾಕ್ಷೇಮವನ್ನು ಅನುಸರಿಸಿ ತಮ್ಮ ಪ್ರತಿನಿಧಿಗಳು ಆಚರಣೆಗೆ ತಂದ ಎಲ್ಲ ಶಾಸನಗಳಿಗೂ ಪ್ರಜೆಗಳು ಮನ್ನಣೆಯನ್ನು ನೀಡತಕ್ಕದು ಅವರ ಆದ್ಯ ಕರ್ತವ್ಯವಾಗಿದೆ."

"ಎಂದಮೇಲೆ ಸರಕಾರದ ಆಚರಣೆಯನ್ನು ಒಪ್ಪಿಕೊಳ್ಳಲೇ ಬೇಕು?"

"ಅಕ್ಷರಶಃ ಒಪ್ಪಬೇಕು." ಮುಂದುವರಿಯುತ್ತ ಅಧಿಕಾರಿಯು ಹೇಳಿದನು. "ಪ್ರಜೆಗಳ ಕ್ಷೇಮವನ್ನು ಸಾಧಿಸುವುದಕ್ಕಾಗಿ ಸರಕಾರವು ಬೇಕಾದ್ದನ್ನು ಮಾಡಬಹುದು. ತತ್ರಾಪಿ ಈಗ ನಡೆಯುತ್ತಿರುವುದು ಪ್ರಜಾಪ್ರಭುತ್ವ. ಪ್ರಜೆಗಳಿಂದ ಆರಿಸಿ ಬಂದ ಪ್ರತಿನಿಧಿಗಳೇ ಸರಕಾರದ ಸೂತ್ರಗಳನ್ನು ವಹಿಸುತ್ತಾರೆ. ಅವರು ಅಚರಣೆಗೆ ತರುವ ಶಾಸನಗಳು ಸ್ವಾರ್ಥರಹಿತವಾದುವು. ಅವು ಜನಸಾಮಾನ್ಯದ ಆಜನ್ಮಸಿದ್ಧವಾದ ಹಕ್ಕುಬಾಧ್ಯತೆಗಳನ್ನು ತುಳಿಯದಂತೆ ಅವರು ನೋಡಿಕೊಳ್ಳುತ್ತಾರೆ. ಯಾವುದಾದರೊಂದು ಶಾಸನವು ನೂರು, ಅಲ್ಲ ಸಾವಿರ ಜನ ಶ್ರೀಮಂತರಿಗೆ ಅಪ್ರಿಯವಾಗಿರಬಹುದು. ಆದರೆ ಲಕ್ಷೋಪಲಕ್ಷ ಜನರಿಗೆ ಪ್ರಿಯವಾದ--ಅವರ ಹಿತವನ್ನು ಮುಂದುವರಿಸುವ

ಶಾಸನವನ್ನು ಆಚರಣೆಗೆ ತರುವುದರಿಂದ ನೊಂದ ಜನಸಂಕುಲಕ್ಕೆ ಅವರು ವಂದನೀಯರಾಗುತ್ತಾರೆ. ”

ಅಧಿಕಾರಿಯ ಈ ಮಾತಿಗೆ ಪೀಟರನು ಯಾವ ಪ್ರತ್ಯುತ್ತರವನ್ನೂ ಹೇಳಲಾರದೆ ಹೋದನು. ಬದಲಾಗಿ ಅವನು ಶಾಸನದ ಮಾತನ್ನು ಅಷ್ಟಕ್ಕೇ ನಿಲ್ಲಿಸಿದನು. ಈಗ ತನ್ನ ಸ್ವಂತ ವಿಚಾರವನ್ನು ಕುರಿತು ಅವನಲ್ಲಿ ತರ್ಕಿಸಲು ಯತ್ನಿಸಿದನು.

“ ಈ ತೆರಿಗೆ ಒಂದಕ್ಕೆರಡಾಯಿತಲ್ಲ ? ”

“ ಅಹುದು ; ” ಅಧಿಕಾರಿ ಹೇಳಿದನು ; “ ಅದು ನಿಜ ; ಮಕ್ಕಳಿಲ್ಲದವರು ತಮ್ಮ ನಿಧಿಯಲ್ಲಿ ಎಷ್ಟನ್ನು ತಂದು ತೀರಿಸಬಲ್ಲರು ? ”

“ ನನಗೆ ಮಕ್ಕಳಿಲ್ಲ ; ನಿಜ ; ಹೆಂಡತಿಯೂ ಇಲ್ಲ. ನಾನು ಏಕಾಂಗಿ ; ಒಪ್ಪಿಕೊಳ್ಳುತ್ತೇನೆ. ”

“ ಕೈ ಹುಣ್ಣಿಗೆ ಕನ್ನಡಿ ಹಿಡಿಯುವುದು ಬೇಡ. ಅದೆಲ್ಲ ತಿಳಿದೇ ನಿಮಗೆ ಶಾಸನದ ನಕಲನ್ನು ಕೊಟ್ಟಿರುವುದು. ”

ಅಧಿಕಾರಿಯ ಮಾತನ್ನು ಕೇಳಿ ಪೀಟರನು ಪರಾಜಿತನಾಗಲಿಲ್ಲ.

“ ಆದರೆ ಅಧಿಕಾರಿಗಳೇ ! ನನಗೆ ಅಂತಹ ಅಪಾರವಾದ ಆಸ್ತಿಪಾಸ್ತಿಗಳೇನಿವೆ ? ”

ಅ : ನಾನೇನು ಬಲ್ಲೆ ?

ಪೀ : ಈ ಬಂಗಲೆಯೊಂದನ್ನು ಕೊಂಡಿದ್ದೇನೆ.

ಅ : ಇರಬಹುದು.

ಪೀ : ಇದಕ್ಕೆ ಸೇರಿದಂತೆ ಹಲವು ಎಕರೆ ನೆಲವಿದೆ.

ಅ : ಇಲ್ಲಿ ಬರುವಾಗ ಕಂಡಿತು.

ಪೀ : ಆದರಲ್ಲಿ ಬರುವ ಬೆಳಸಿನ ಬೆಲೆಗಿಂತ ಬೆಳೆಯುವ ಕೂಲಿಯೇ ಹೆಚ್ಚಾಗಿದೆ.

ಅ : ನಾನು ವ್ಯಾಪಾರಿಯೂ ಅಲ್ಲ ; ವ್ಯವಸಾಯಿಯೂ ಅಲ್ಲ.

ಪೀ : ಈ ಬಂಗಲೆ ಭೂಮಿಗಳನ್ನುಳಿದು ನನಗೆ ಬೇರೇನಿದೆ ?

ಅ : ಅದನ್ನೇ ಸರಕಾರವು ಕೇಳುತ್ತಿರುವುದು. ಏನಿದೆ-ಏನಿಲ್ಲ ಎಂಬ ವಿಚಾರವನ್ನು ಚರ್ಚಿಸುವುದಕ್ಕಾಗಿ ನಾನಿಲ್ಲಿಗೆ ಬಂದವನಲ್ಲ.

ಪೀ : ಹಾಗಾದರೆ ?

ಅ : ನೀವು ಸಂತಾನಶೂನ್ಯರೆಂದು ಸರಕಾರಕ್ಕೆ ವರದಿಯಾಗಿದೆ.

ಪೀ : ಅದು ನಿಜ.

ಅ : ಶಾಸನದ ನಕಲನ್ನು ನಿಮಗೆ ಕೊಟ್ಟು ಅದು ನಿಮ್ಮ ಕರಗತವಾಯಿತೆಂಬುದನ್ನು ಸೂಚಿಸಲು ನಿಮ್ಮ ಸಹಿ ಪಡೆಯುವುದು ನನ್ನ ಕರ್ತವ್ಯ. ಅದಕ್ಕಾಗಿಯೇ ನಾನಿಲ್ಲಿಗೆ ಬಂದೆ. ನನ್ನ ಕೆಲಸವು ಮುಗಿಯಿತು. ನಾನಿನ್ನು ಹೊರಡುತ್ತೇನೆ.

ಹೀಗೆಂದು ಹೇಳಿ ಅಧಿಕಾರಿಯು ಮೇಲೆದ್ದನು. ಆದರೆ ಪೀಟರನಿಗೆ ಇದು ಒಪ್ಪಿಗೆಯಾಗಲಿಲ್ಲ. ಅವನು ಅಧಿಕಾರಿಯನ್ನು ಕುರಿತು ಕೈಜೋಡಿಸಿ ಬೇಡಿದನು :

"ಕುಳಿತುಕೊಳ್ಳಿ ; ಹೋಗುವಿರಂತೆ. ಈಗೇನು ಮಾಡುವುದು ?"

ಅ : ಮಾಡುವುದೇನು ? ನಿಮ್ಮ ವಿಶಿಷ್ಟ ಚರಸ್ಥಿರ ಸ್ವತ್ತುಗಳು ಏನಿವೆ ಅವುಗಳ ವಿವರಗಳನ್ನೊಳಗೊಂಡ ವರದಿಯೊಂದನ್ನು ತಯಾರಿಸಿ ಅದನ್ನು ಸರಕಾರಕ್ಕೆ ಒಪ್ಪಿಸಿ. ಪ್ರಭುತ್ವದ ಕೋರಿಕೆಯು ಅಲ್ಲಿಗೆ ನೆರವೇರಿದಂತಾಗುತ್ತದೆ.

ಪೀ : ಹಾಗೆ ಮಾಡಿದರೆ ?

ಅ : ಶಾಸನವು ಕೋರುವಂತೆ ನಿಮ್ಮ ಕರ್ತವ್ಯವನ್ನು ನೀವು ಮಾಡಿದಂತಾಗುತ್ತದೆ. ಆದರೆ ಗಮನದಲ್ಲಿರಲಿ; ವರದಿಯನ್ನು ಒಪ್ಪಿಸುವುದಕ್ಕೆ ಇಂದಿನಿಂದ ಎರಡು ತಿಂಗಳು ವಾಯಿದೆ ಮಾತ್ರ ಉಂಟು.

ಪೀ ಒಪ್ಪಿಸಲೇ ಬೇಕೆ ?

ಅ : ಹೌದು ; ಇಲ್ಲದಿದ್ದರೆ..........

ಪೀ : ಇಲ್ಲದಿದ್ದರೆ ?

ಅ : ನಿಯಮಗಳಿಗನುಸಾರವಾಗಿ ಅಪರಾಧಿಗಳಾಗಿ ಶಿಕ್ಷೆಗೆ ಒಳಗಾಗುತ್ತೀರಿ.

ಪೀ : ಸಂತಾನಶೂನ್ಯರು ಸತ್ತನಂತರ ಅವರ ಆಸ್ತಿಪಾಸ್ತಿಗಳು ಸರಕಾರಕ್ಕೆ ಸೇರತಕ್ಕುದು ಎಂದು ಕಾಣಿಸಿದೆಯಲ್ಲ. ಏತಕ್ಕೆ ?

ಅ : ಮೊದಲೇ ಹೇಳಲಿಲ್ಲವೆ ? ಜನಸಾಮಾನ್ಯದ ನೆಮ್ಮದಿಯನ್ನು ಸಾಧಿಸುವುದಕ್ಕೆ.

ಪೀ : ನಾನು ಈ ವೇಳೆಗೆ ಬೇಕಾದಷ್ಟು ಧರ್ಮ ಮಾಡಿದ್ದೇನೆ.

ಅ : ಇರಬಹುದು ; ಅದನ್ನು ಮನುಷ್ಯರು ಮರೆತರೂ ದಯಾಮಯನಾದ ದೇವರು ಮರೆಯುವಂತಿಲ್ಲ. ಅದಿರಲಿ ; ನೀವು ವ್ಯಯಮಾಡಿದ ಹಣದ ವಿಚಾರ ಸರಕಾರಕ್ಕೆ ಅನಾವಶ್ಯಕ. ನಿಮಗುಳಿದಿರುವ ಸ್ವತ್ತಿನ ವಿಚಾರವನ್ನೇ ಅವರೀಗ ಕೇಳುತ್ತಿರುವುದು.

ಪೀ : ಧರ್ಮ ಮಾಡಿದರೆ ?

ಅ : ಆನಂದದಿಂದ ಮಾಡಿ ; ಇಂದೇ ಮಾಡಿ ; ಈ ಘಳಿಗೆಯಲ್ಲಿ ಮಾಡಿ ; ನಿಮ್ಮ ಉಳಿದೆಲ್ಲ ಸ್ವತ್ತುಗಳನ್ನೂ ಇಂದೇ ಬಡಬಗ್ಗರಿಗೆ ದಾನ ಮಾಡಿಬಿಡಿ. ಬೇಡವೆಂದವರಾರು ? ಆಗ ಸ್ವತ್ತಿಲ್ಲದ ನಿಮಗೆ ತೆರಿಗೆಯ

ಕಾನೂನು ಅನ್ವಯಿಸಲಾರದು. ಆ ಮಾತು ಬೇರೆ. ಈಗ ನೋಡಿ ; ನೀವು ಜೀವಂತರಾಗಿರುವಾಗ ನಿಮ್ಮ ಆಸ್ತಿಯು ನಿಮ್ಮ ಅಧೀನದಲ್ಲಿ ಉಳಿಯುವುದು. ಅದನ್ನು ನೀವು ಹೇಗೆ ಬೇಕಾದರೂ ವ್ಯಯಮಾಡಬಹುದು. ಆದರೆ ತೆರಿಗೆಯು ಮಾತ್ರ ಒಂದಕ್ಕೆ ಎರಡಾಗಿರುತ್ತದೆ. ಧನದಮೇಲಿನ ನಿಮ್ಮ ಒಡೆತನವು ಎಷ್ಟು ಕಡಿಮೆಯಾದರೆ ಅಷ್ಟಕ್ಕಷ್ಟು ನೀವು ತೆರಬೇಕಾದ ತೆರಿಗೆಯೂ ಕಡಿಮೆ. ಅತಿ ಮುಖ್ಯವಾದ ವಿಚಾರವೆಂದರೆ ನಿಮ್ಮನಂತರ ನಿಮ್ಮ ಸ್ವತ್ತುಗಳೆಲ್ಲವೂ ಸರಕಾರದ ಬೊಕ್ಕಸಕ್ಕೆ ಸೇರತಕ್ಕವು.

ಪೀ : ನನ್ನಲ್ಲಿ ಈ ಬಂಗಲೆಯನ್ನುಳಿದು ಬೇರಾವ ಆಸ್ತಿಯೂ ಇಲ್ಲ.

ಅ : ಅದನ್ನು ನನ್ನ ಮುಂದೆ ಹೇಳಿ ಪ್ರಯೋಜನವೇನು ?

ಪೀ : ಮತ್ತಾರಲ್ಲಿ ಹೇಳಿಕೊಳ್ಳಲಿ ?

ಅ : ಹಾಗೆಂದು ಸರಕಾರಕ್ಕೆ ಮನವಿ ಮಾಡಿಕೊಳ್ಳಿ.

ಪೀ : ಮನವಿ ಮಾಡಿಕೊಂಡಾಕ್ಷಣಕ್ಕೆ ಅದು ಸರಿಯೆಂದು ಸರಕಾರವು ಒಪ್ಪಿಕೊಳ್ಳುತ್ತದೆಯೋ ?

ಅ : ಅದನ್ನು ನಾನು ಹೇಗೆ ಹೇಳಲಿ ?

ಪೀ : ಹೇಳುವುದಾದರೆ ಹೇಳಿ. ಕೇಳಲು ಕುತೂಹಲನಾಗಿದ್ದೇನೆ.

ಅ : ನೀವು ಕಳುಹಿಸುವ ವರದಿಯು ಸತ್ಯವೆಂದು ಕಂಡುಬಂದರೆ ಒಪ್ಪಿಕೊಳ್ಳುತ್ತಾರೆ.

ಪೀ : ನಾನು ಹೇಳುವುದು ಸತ್ಯ.

ಅ : ಸತ್ಯವಾಗಿದ್ದಲ್ಲಿ ಇಷ್ಟೊಂದು ಹೆದರಬೇಕಾದ ಪ್ರಮೇಯವಿಲ್ಲ.

ಪೀ : ನಾನು ಹೆದರಲಿಲ್ಲ.

ಅ : ಆದರೆ ಹೆದರಿದಂತೆ ಮಾತಾಡುತ್ತಿದ್ದೀರಿ.

ಪೀ : ಸತ್ಯವಾಗಿಯೂ ಹೆದರುವ ಪ್ರಮೇಯವಿಲ್ಲ.

ಅ : ಸತ್ಯಾಸತ್ಯಗಳನ್ನು ವಿಮರ್ಶಿಸುವುದಕ್ಕಾಗಿಯೇ ಕೆಲವರು ನಿಯಮಿತರಾಗಿದ್ದಾರೆ. ನಿಮ್ಮ ವರದಿಯು ಕೈಸೇರಿದೊಡನೆಯೇ ಅವರು ನಿಮ್ಮ ಬಳಿ ಬರುತ್ತಾರೆ. ನೀವು ಕಳುಹಿಸಿರುವ ವರದಿಯನ್ನು ನೋಡಿ ನಿಮ್ಮ ಚರಸ್ಥಿರ ಸ್ವತ್ತುಗಳನ್ನು ಅವರು ಪರೀಕ್ಷಿಸುತ್ತಾರೆ. ವರದಿಯಲ್ಲಿ ಕಾಣಿಸಿರುವುದೆಲ್ಲವೂ ನಿಜವಾಗಿದ್ದರೆ ಸರಿ ಎಂದು ಒಪ್ಪಿಕೊಳ್ಳುತ್ತಾರೆ. ಸುಳ್ಳಾಗಿದ್ದಲ್ಲಿ- ಶಿಕ್ಷಿಸುತ್ತಾರೆ-ಮಾತ್ರವಲ್ಲ; ಸುಳ್ಳು ವರದಿ ಮಾಡಿದವರ ಆಸ್ತಿಯೆಲ್ಲವನ್ನೂ ಸರಕಾರದವರು ತಕ್ಷಣವೇ ಕಿತ್ತುಕೊಳ್ಳಬಹುದು. ಅಷ್ಟಕ್ಕೇ ನಿಲ್ಲದೆ ಸರಕಾರಕ್ಕೆ ಮೋಸಮಾಡಿದ ಅಪಾದನೆಗೆ ಗುರಿಯಾಗಿ ಅಂತಹವರು ಕಠಿಣ ಶಿಕ್ಷೆಯನ್ನೂ ಅನುಭವಿಸಬೇಕಾದೀತು.

ಇದನ್ನು ಕೇಳಿ ಪೀಟರನ ಎದೆಗೆ ಸಿಡಿಲು ಬಡಿದಂತಾಯಿತು. ಅಧಿಕಾರಿಯನ್ನು ಕುರಿತು ಅವನು ಮತ್ತೆ ಕೇಳಿದನು :

ಪೀ : ಯಾರಾದರೂ ಹೊಟ್ಟೆಕಿಚ್ಚಿಗಾಗಿ ಇಲ್ಲದುದನ್ನು ಇದೆಯೆಂದು ನನ್ನ ಮೇಲೆ ಸುಳ್ಳು ಚಾಡಿ ಹೇಳಿದರೆ?

ಅ : ನಿಮ್ಮ ವೈರಿಗಳನ್ನು ನೀವೇ ಬಲ್ಲಿರಿ. ಶ್ರೀಮಂತರಿಗೆ ಗುಪ್ತವೈರಿಗಳು ಹೆಚ್ಚು ಎಂದು ನಾನು ಕೇಳಿ ಬಲ್ಲೆ.

ಪೀ : ನಾನು ಶ್ರೀಮಂತನಲ್ಲ. ಧನವನ್ನು ಗುಪ್ತವಾಗಿರಿಸಿಲ್ಲ. ಇದು ಸತ್ಯ.

ಅ : 'ಸತ್ಯವನ್ನು ನುಡಿ; ಸತ್ಯವನ್ನು ನೋಡು; ಸತ್ಯದಿಂದ ಮಾಡು' ಎಂದು ಬಲ್ಲವರು ಹೇಳುತ್ತಾರೆ. ಸತ್ಯವನ್ನೇ ನುಡಿಯುವವರೆಗೂ ನಿಮಗೆ ಯಾವ ಭಯವೂ ಇಲ್ಲ.

ಪೀ : ಸತ್ಯವಾಗಿ ನನ್ನಲ್ಲಿ ಏನೂ ಇಲ್ಲ.

ಅ: ಹಾಗೆಂದು ಸರಕಾರಕ್ಕೆ ಬರೆಯಿರಿ. ನೂರು ಸಲ ಬಾಯಲ್ಲಿ ಇಲ್ಲ ಎನ್ನುವುದಕ್ಕಿಂತ ಸೂಕ್ತಸಾಕ್ಷಿಗಳಿಂದ ಸತ್ಯಾಂಶವನ್ನು ಬರವಣಿಗೆಯಲ್ಲಿ ಸೂಚಿಸಿದರೆ ಎಷ್ಟೋ ಸುಧಾರಿಸಿದಂತಾಗುತ್ತದೆ. ಹಾಗೆ ಮಾಡುವುದು ಮೇಲಲ್ಲವೆ?

ಪೀ : ನಾನೇನೂ ಬಚ್ಚಿಟ್ಟಿಲ್ಲ.

ಅ : ನಿಮಗೆ ಬುದ್ಧಿ ಭ್ರಮಿಸಿರಲಾರದಲ್ಲವೆ?

ಪೀ : ಏತಕ್ಕೆ ಹಾಗೆ ಕೇಳುವಿರಿ?

ಅ : ಕೇಳುವಂತೆ ಮಾಡುತ್ತಿರುವಿರಿ. ಒಳ್ಳೆಯದು; ಬಚ್ಚಿಡದ ಭಾಗ್ಯವು ಬಿಚ್ಚಿಟ್ಟಂತೆ ಇರಬೇಕು. ಬಚ್ಚಿಡಬಾರದು; ಬಡವರ ಉಪಯೋಗಕ್ಕೆ ಒದಗಬೇಕು. ಅದೇ ಶಾಸನದ ಉದ್ದೇಶ. ಹಾಗೂ ಬಚ್ಚಿಟ್ಟರೆ ಅದು ಕಾಲಾನುಗುಣ್ಯವಾಗಿ ಬಯಲಾದೀತು.

ಪೀ : ಬಚ್ಚಿಟ್ಟರಲ್ಲವೆ ಆ ಮಾತು. ಅಷ್ಟಕ್ಕೂ ಹಣವಿದ್ದರಲ್ಲವೆ ಬಚ್ಚಿಡುವುದು?

ಅ : ಹಣವಿದ್ದವರು ಬಚ್ಚಿಡಬಹುದು; ಆದರೆ ಸತ್ಯವನ್ನು ಬಚ್ಚಿಡಲು ಸಾಧ್ಯವಾಗಲಾರದು.

ಪೀ : ಹಾಗಾದರೆ ?

ಅ : ಹಾಗಾದರೆ ಸತ್ಯವನ್ನು ಹೇಳಿ; ತಪ್ಪನ್ನು ಮಾಡಬೇಡಿ. ಕೈತಪ್ಪಿ ತಪ್ಪುಮಾಡಿದರೆ ಮಾಡಿದ ತಪ್ಪನ್ನು ಒಪ್ಪಿಕೊಳ್ಳಿ. ತಪ್ಪನ್ನು ಒಪ್ಪಿಕೊಳ್ಳದಿದ್ದರೆ ಇನ್ನೂ ಹೆಚ್ಚಿನ ತಪ್ಪನ್ನು ಮಾಡಿದಂತಾಗುತ್ತದೆ. ಅಸತ್ಯವನ್ನು ಅಸಹ್ಯದಿಂದ ಕಾಣುವುದು ಸತ್ಯವಂತರ ಲಕ್ಷಣ.

ಹೀಗೆನ್ನುತ್ತ ಅಧಿಕಾರಿಯು ಎದ್ದು ಹೊರಟನು. ಪೀಟರನಿಗೆ ಮಂಕು ಮುಚ್ಚಿದಂತಾಯಿತು. ಅವನು ತಟಸ್ಥನಾಗಿ ಪ್ರತಿಮೆಯಂತೆ ನಿಂತುಬಿಟ್ಟನು.



ಪ್ರಕರಣ ೧೧.

# ಮುಂದೇನು ? .... ? .... ?

ಮುಂದೇನು ? ಪೀಟರನಿಗೆ ಏನೊಂದೂ ತೋರದಂತಾಯಿತು.

"ಅಯ್ಯೋ ! ಅಧಿಕಾರಿಯು ಹೊರಟೇ ಹೋದನಲ್ಲ, ಅವನಿಗೆ ಏನನ್ನಾದರೂ ತೆತ್ತು ನನ್ನಲ್ಲೇನೂ ಇಲ್ಲವೆಂದು ಎನ್ನಿಸಿಬಿಡಬಹುದಾಗಿತ್ತಲ್ಲ."

ಅವನು ಕೊರಗಸಾಗಿದನು. ಹುಚ್ಚನಂತೆ ಹಜಾರದಲ್ಲಿ ಹಾರಾಡಿದನು. ಅಷ್ಟರಲ್ಲಿ ಏನೋ ನೆನಪು ಮೂಡಿಕೊಂಡಂತೆ ಅವನು ಕೊಠಡಿಯೊಳಗೆ ಹೋದನು. ತನ್ನ ಹಾಸಿಗೆಯ ಬಲ ಗೋಡೆಯಲ್ಲಿ ಒಂದು ಗೂಡಿದ್ದಿತು. ಅದರಲ್ಲಿದ್ದ ಪುಸ್ತಕವೊಂದು ಅವನ ಕಣ್ಣಿಗೆ ಬಿದ್ದಿತು. ಹುಚ್ಚನಂತೆ ಅವನು ಅದನ್ನು ಕೈಗೆ ತೆಗೆದುಕೊಂಡನು. ಪು ಸ್ತಕದಲ್ಲಿ ಯಾವುದೋ ಒಂದು ಹಾಳೆಯನ್ನು ತೆರೆದನು; ಆಕಸ್ಮಿಕವಾಗಿ ತೆರೆದ ಆ ಹಾಳೆಯಲ್ಲಿದ್ದುದೇನು ?

"...... ...... ...... ಮಾನವ ಗಣದಲ್ಲಿ ಅವನಿಗೆ ಪ್ರೇಮವು ಅಳಿಸಿಹೋಗಿದ್ದಿತು. ...... ...... ಅವನೊಬ್ಬ ಹದಗೆಟ್ಟ ಹುಚ್ಚು ಮಾನವ .......... ಹೆಜ್ಜೆ ಹೆಜ್ಜೆಗೂ ತಪ್ಪನ್ನು ಹೆಚ್ಚಿಸಿ, ಬಿರಿತನವನ್ನೂ—ಸಿರಿವಂತಿಕೆಯನ್ನೂ ಕೊಚ್ಚಿಕೊಳ್ಳುವ ನೀಚ ಮಾನವ ..........ಅವನು. ಇರಲಿ ; ಅವನು ಮಾಡುತ್ತಿದ್ದುದೇನು ? ಬಡವರನ್ನು ಬಡಿದು ಹೊಟ್ಟೆ ತುಂಬಿಸಿಕೊಳ್ಳುವುದು ...... ...... ಇದು ಕಳುವಲ್ಲವೆ ? ತನ್ನದುದಲ್ಲದನ್ನು ತನ್ನದೆಂದೇ ಹೇಳಿಕೊಳ್ಳುವುದು ಕಳುವಲ್ಲದೆ ಮತ್ತೇನು ? ಅವನು ಕ್ರೂರಿ ; ಕೊಲೆಗಾರ ; ಕದಿಯುವುದಕ್ಕೆ ಅವನು ಹೇಸಿದವನೇ ಅಲ್ಲ ...... ...... ಪರರ ಸ್ವತ್ತುಗಳನ್ನು ಅಪಹರಿಸಿ, ಅಪಹರಿಸಿ ರಾಶಿಕೂಡಿಸುವುದರಲ್ಲಿಯೇ ಅವನ ಜೀವಮಾನವೆಲ್ಲವೂ ಕಳೆದುಹೋಯಿತು. ತಾನು ಮಾಡುವುದು ಅನ್ಯಾಯ—ಅಪಹಾರ—ಅನುಚಿತ—ಅಯೋಗ್ಯ ಎಂದು

ಅವನಿಗೆ ಅರಿವಾಗಲೇ ಇಲ್ಲ ..... ತಾನು ಮಾನವರನ್ನು ವಂಚಿಸಬಹುದು; ತನ್ನನ್ನೂ ವಂಚಿಸಿಕೊಳ್ಳಬಹುದು; ಆದರೆ ದೈವವನ್ನು ವಂಚಿಸಲಾಗದೆಂದು ಈ ಮೂಢ ಮಾನವನು ಕಂಡುಕೊಂಡನೇ? .... ..... ..... ಆ ಕಲ್ಲೆದೆಯ ಕ್ರೂರಾತ್ಮನೇನು ಬಲ್ಲ ಪರರ ಕಷ್ಟನಷ್ಟಗಳನ್ನು? ದುರ್ಗುಣಗಳೆಲ್ಲವೂ ಅವನೆದೆಯಲ್ಲಿ ಮನೆಮಾಡಿಕೊಂಡಿದ್ದುವು. ಅವನು ಕೃಪಣ..... ..... ಸ್ವಾರ್ಥಿ ..... .... ದುರಾಚಾರಿ ..... ..... ದುಷ್ಟ ..... ..... ಧೂರ್ತ ..... ..... ಅವಿನೀತ ..... ಅಲ್ಪ ..... ಅಯೋಗ್ಯ .... ಅರಸಿಕ ..... ವಂಚಕರಲ್ಲಿ ಅಗ್ರಗಣ್ಯ!"

"..... ..... ಧನವೇ ಅವನ ಸರ್ವಸ್ವ! ಅವನು ಅದರ ದಾಸ! ಅವನು ಬಹುಭಕ್ಷಕ ..... ..... ಅವಿಶ್ವಾಸಿ. ಅನೀತಿ-ವಿಷಯಗಳೇ ಅವನ ಒಡನಾಡಿಗಳು. ಧನವೊಂದನ್ನುಳಿದು ಮತ್ತಾವುದನ್ನೂ ಅವನು ಲಕ್ಷಿಸುತ್ತಿರಲಿಲ್ಲ. ಧನಕ್ಕಾಗಿ ಅವನು ದೈವದ್ರೋಹಿಯಾಗಲು ಹಿಂಜರಿಯಲಿಲ್ಲ; ಮಾನವಕಂಟಕನಾಗಲು ನಾಚಿಕೊಳ್ಳಲಿಲ್ಲ.

"ಪರಮಾತ್ಮನು ಎಚ್ಚೆತ್ತು ಎಲ್ಲಕಾಲದಲ್ಲಿಯೂ-ಎಲ್ಲ ಮಾನವರನ್ನೂ ಎಲ್ಲ ಪ್ರಾಣಿಗಳನ್ನೂ ತನ್ನ ಅಖಂಡ ಕರುಣಾದೃಷ್ಟಿಯಿಂದ ನೋಡುತ್ತಿದ್ದಾನೆ. ಸೃಷ್ಟಿಯೇ ಅವನದು: ಅದರಲ್ಲೇ ಅವನು ಅಡಗಿ ಕುಳಿತಿದ್ದಾನೆ. ಅವನಿಚ್ಛೆಯಿಲ್ಲದೆ ಒಂದು ಹುಲ್ಲು ಸರಿವಿಯೂ ಅಲ್ಲಾಡದು.

"..... ..... ಈ ನೀಚ ಮಾನವನು ಅವನನ್ನು ನೋಡಲಾರನು. ಆದರೆ ಪರಮಾತ್ಮನು ಅವನನ್ನು ನೋಡದೆ ಇರುವನೇ? ಅವನ ದೃಷ್ಟಿಯಿಂದ ಇವನು ಮರೆಯಾಗಿರಬಲ್ಲನೇ? ತನ್ನ ಅನ್ಯಾಯಕ್ಕೆ ತಾನು ಶಿಕ್ಷೆ ಹೊಂದದಿರುವನೇ?

"..... ..... ಮಾನವರಲ್ಲಿಯೂ ..... .... ಪ್ರಾಣಿವರ್ಗದಲ್ಲಿಯೂ ಅನುರಾಗವಿಲ್ಲದ ಇವನು ದೈವಕೃಪೆಯನ್ನು ಒಂದು ದಿನವಾದರೂ ಎದಿರು ನೋಡಿದವನಲ್ಲ. ಇವನಿಗಾಗಲಿ—ಬಾಯಿಬಡಿದು ಇವನು ಸಂಪಾದಿಸಿ ಗುಡ್ಡೆ ಕೂಡಿಸಿದ ಧನಕ್ಕಾಗಲಿ ಬೆಳಕನ್ನು ಕಂಡರಾಗದು. ಇವನು ತಾಮಸಿ;

...... ...... ಕಡುದುಷ್ಟ ...... ...... ಕಪಟಿ ... .. .... ದೇಶದ್ರೋಹಿ! ಮೂ ಢ! ಪರಮ ಮೂಢ! ..... ......"

ಪೀಟರನು ಓದಿದನು; ಮತ್ತೆ ಮತ್ತೆ ಓದಿದನು. ಅವನಿಗೆ ಪಿತ್ತ ವಿಕಾರವುಂಟಾಯಿತು. ಕ್ಷಣಕಾಲ ಅವನು ಭಯಾನ್ವಿತನಾದನು. ತಾನು ತನ್ನ ಜೀವಮಾನಕಾಲದಲ್ಲಿ ಮಾಡಿದ ದುಷ್ಕೃತ್ಯಗಳೆಲ್ಲವೂ ಒಂದೊಂದಾಗಿ ಅವನ ಕಣ್ಣುಮುಂದೆ ಬಂದು ನಿಂತುವು; ರುದ್ರ ನೃತ್ಯಮಾಡಿದುವು; ಹಂಗಿ ಸುತ್ತ ಹಾದು ಹೋದುವು. ಈಗೊಂದು ಕ್ಷಣಕ್ಕೆ ಮುನ್ನ ಅವನು ಅಧಿಕಾರಿ ಯಲ್ಲಿ ಅಷ್ಟೊಂದು ಆಸಕ್ತಿಯಿಂದ ಅಸತ್ಯವನ್ನು ನುಡಿದುದೂ ಪೀಟರನ ಸ್ಮರಣೆಗೆ ಬಂದಿತು. ಆದರೇನು? ಪೀಟರನು ತನ್ನ ಮನಸ್ಸಿನಲ್ಲೆ ಯೋಚಿಸಿ ಕೊಂಡನು :

"ಇದು ನನ್ನ ಹಣ; ನಾನು ಸಂಪಾದಿಸಿದುದು; ಐವತ್ತು ವರುಷಗಳ ಅಖಂಡ ದುಡಿತದ, ಅದ್ಭುತ ಜಾಣ್ಮೆಯ, ಮಿತಿ ಮಿಂಚಿದ ಮಿತವ್ಯಯದ ಪ್ರತ್ಯಕ್ಷ ಫಲವಿದು! ಇದು ಸರ್ವಪ್ರಕಾರದಿಂದಲೂ ನನಗೇ ಸೇರಿದುದು. ಇದರ ಮೇಲೆ ಮತ್ತೊಬ್ಬರಿಗೇನು ಅಧಿಕಾರ? ಸರಕಾರ! ಸರಕಾರದವರು ಬೇಕಾದರೆ ತೆರಿಗೆಯನ್ನು ತೆಗೆದುಕೊಳ್ಳಲಿ–ಬೇಡವೆಂದವರು ಯಾರು? ಆದರೆ ನನ್ನ ಆಸ್ತಿಯನ್ನು ನನ್ನ ಅನಂತರ ವಶಪಡಿಸಿಕೊಂಡು ಭಂಡಾರಕ್ಕೆ ಸೇರಿಸಿಕೊಳ್ಳಲು ಅವರಿಗೇನು ಅಧಿಕಾರ? ಒಲ್ಲೆ; ನಾನು ಕೊಡಲೊಲ್ಲೆ. ಖಂಡಿತವಾಗಿಯೂ ಕೊಡಲೊಲ್ಲೆ; ಪ್ರಾಣ ಹೋದರೂ ಕೊಡಲೊಲ್ಲೆ. ಬೇಕಾದರೆ ನಾನೇ ಧರ್ಮ ಮಾಡುತ್ತೇನೆ. ...... ...... ಹು ...... ಧರ್ಮ! ಯಾರಿಗೆ ಧರ್ಮ? ಸೋಮಾರಿಗಳಿಗೆ ಧರ್ಮ; ಒಲ್ಲೆ; ದುಡಿದು ಸಂಪಾದಿ ಸಲಿ; ಬೇಕಾದ ಹಾಗೆ ಸಂಪಾದಿಸಲಿ. ನಾನೇಕೆ ಧರ್ಮ ಮಾಡಲಿ? ...... ಪರಮಾತ್ಮ! ಸುಳ್ಳು; ಅದೆಲ್ಲ ಶುದ್ಧ ಸುಳ್ಳು. ಪರಮಾತ್ಮನನ್ನು ಕಂಡವ ರಾರು? ಧನಕ್ಕೆ ಮಿಂಚಿದ ದೇವರಿಲ್ಲ. ಧನವಿದ್ದದ್ದರಿಂದಲ್ಲವೇ ಪ್ರಭುತ್ವವೂ ನನ್ನ ಬಾಗಿಲನ್ನು ಅರಸಿ ಬಂದದ್ದು? ಧನಬಲಕ್ಕೆ ಮಿಂಚಿದ ಬಲವಿಲ್ಲ. ನಾನು ಸತ್ತರೂ ಇಷ್ಟು ಮಹತ್ತರ ಧನರಾಶಿಗೆ ಒಡೆಯನಾಗಿಯೇ ಸಾಯುತ್ತೇನೆ.

ಪರಮಾತ್ಮ! ಪರಮಾತ್ಮನೇನು ನನ್ನ ಧನವನ್ನು ರಕ್ಷಿಸುವುದು? ನನ್ನ ಧನವನ್ನು ನಾನೇ ರಕ್ಷಿಸಿಕೊಳ್ಳಬಲ್ಲೆ ............ ಅದನ್ನು ನನ್ನಿಷ್ಟಬಂದ ಕಡೆ ಭದ್ರವಾಗಿ ಇಡುತ್ತೇನೆ ...... ... ಇರಲಿ ..... ಹಾಂ! ಎಲ್ಲಿ ಇಡಲಿ? ಇದಿಷ್ಟು ಧನವನ್ನು ಎಲ್ಲಿ ಸುರಕ್ಷಿತವಾಗಿ ಇಡಲಿ? ಕಳ್ಳಕಾಕರರು ಅಪಹರಿಸಿದರೆ? .... ಅಥವಾ ಧನಕ್ಕಾಗಿ ಯಾರಾದರೂ ನನ್ನನ್ನು ಕೃತ್ರಿಮದಿಂದ ಕೊಲೆ ಮಾಡಿದರೆ? .... ...... ಛೀ! ಹಾಗಾದರೆ ಪ್ರಾಣವೂ ಹೋಗಿ ......... ಇಲ್ಲ, ಇಲ್ಲ; ಹಣವೂ ಹೋಗಿ ಪ್ರಾಣವೂ ಹೋಗುತ್ತದೆ. ಹಾಗೂ ಹಣವು ಹೋಗಿ ಪ್ರಾಣವು ಉಳಿದರೆ ಏನು ಪ್ರಯೋಜನವಾದಂತಾಯಿತು?"

ಎಂದು ಮುಂತಾಗಿ ದಿಕ್ಕುತೋರದೆ ಗೊಣಗುಟ್ಟುತ್ತ, ಪಿಸುಗುಟ್ಟುತ್ತ, ತಲೆಕೆಳಕಾಗಿ ಕೆಳಗೆ ಬಿದ್ದು ಥರಥರನೆ ನರಳುವ ಜಿರಳೆಯಂತೆ ಪೀಟರನು ಮನೆಯಲ್ಲೆಲ್ಲ ಬಿದ್ದು ಬಿದ್ದು ಹೊರಳಾಡಿದನು. ಇದ್ದಕ್ಕಿದ್ದಂತೆ ಅವನಿಗೊಂದು ಯೋಚನೆಯು ಹೊಳೆಯಿತು. ಸರಕ್ಕೆಂದು ಅವನು ಮೇಲಕ್ಕೆದ್ದನು....

"ನೆ ..... ಲ ..... ಮಾ .... ಳಿ ..... ಗೆ!" ಎಂದು ಒದರುತ್ತ ಅವನು ಸಂತೋಷದಿಂದ ಕುಣಿದಾಡಿದನು.



ಪ್ರಕರಣ ೧೨.

# ....ನೆ ಲ ಮಾ ಳಿ ಗೆ....

ಹಿಂದಿನ ಪ್ರಕರಣದಲ್ಲಿ ಉಲ್ಲೇಖಿಸಿದಂತೆ ಅಧಿಕಾರಿ ಜೇಮ್ಸ್‌ನು ಹೊರಟುಹೋದ ಬಳಿಕ ಪೀಟರನ ಮನಸ್ಸಿನಲ್ಲಿ ಅಲ್ಲೋಲ ಕಲ್ಲೋಲವನ್ನು ಎಬ್ಬಿಸುವ ಒಂದು ಹಿರಿಯ ಹೋರಾಟವು ನಡೆಯಿತು. ಅವನು ಮೂರ್ಖರಲ್ಲಿಯೂ ಅತಿ ಮೂರ್ಖ. ತಾನು ಹಿಡಿದ ಮೊಲಕ್ಕೆ ಮೂರೇ ಕಾಲು ಎಂದು ಸಾಧಿಸುವ ಸ್ವಭಾವದವನು. ಅಳತೆಕೊಟ್ಟು ಹೇಳಿ ಮಾಡಿಸಿದ ಉಂಗುರವು ಬೆರಳಿಗೆ ಹಿಡಿಸುವಂತೆ ಅವನ ಮನಸ್ಸಿಗೆ ಮೂರ್ಖತನವು ಒಪ್ಪವಾಗಿ ಹಿಡಿಸಿತ್ತು.

ತನಗೆ ಅನ್ವಯಿಸುವಷ್ಟರಮಟ್ಟಿಗೆ ಸರಕಾರದ ಶಾಸನವನ್ನು ಮುರಿದೇ ಬಿಡಬೇಕೆಂದು ಅವನು ತೀರ್ಮಾನಿಸಿದನು. ತನ್ನಲ್ಲಿ ಏನೂ ಇಲ್ಲ; ತನಗೆ ಇರುವುದು ಬಂಗಲೆಯೊಂದು; ಬಂಗಲೆಗೆ ಸೇರಿದ ತೋಟವೊಂದು; ಇದನ್ನುಳಿದು ಬೇರಾವ ಸ್ವತ್ತೂ ಇಲ್ಲ. ಹೀಗೆಂದು ತಾನು ಅಡಿಗಡಿಗೆ ಅಧಿಕಾರಿಯೊಂದಿಗೆ ಹೇಳಿದ್ದು; ಅವನು ಅದನ್ನು ನಂಬದೆ ಹೋದದ್ದು; ಬದಲಾಗಿ ಹೊರಟು ಹೋಗುವಾಗ ಸತ್ಯವನ್ನು ಮುಚ್ಚಿಡಲು ಸಾಧ್ಯವಿಲ್ಲ ಎಂದು ಹೇಳಿದುದು ; ಇವೆಲ್ಲ ವಿಚಾರಗಳೂ ಪೀಟರನ ಸ್ಮರಣೆಗೆ ಬಂದುವು.

ಅಧಿಕಾರಿಯ ಬಳಿ ತಾನು ಮೂರ್ಖತನದಿಂದ, ಮುತ್ಸಾಳನಾಗಿ ಮಾತನಾಡಿ ದುದಾಗಿಯೂ ಅವನು ಸ್ಪಷ್ಟವಾಗಿ ಮನಗಂಡನು. ಅಧಿಕಾರಿಗೆ ತನ್ನ ನಿಜ ಸ್ಥಿತಿಯು ಮನವರಿಕೆಯಾಗಿದ್ದಿತು; ಅವನದನ್ನು ಸರಕಾರಕ್ಕೆ ವರದಿ ಮಾಡಿ ಯಾನು; ತನಗೆ ಹೇರಳವಾದ ಧನವಿದೆಯೆಂದು ಅವನು ಸರಕಾರವನ್ನು ಎಚ್ಚರಿಸಿಯಾನು; ಅದರ ಪರಿಣಾಮವಾಗಿ ತನ್ನ ಬಂಗಲೆಯನ್ನು ಶೋಧಿಸು ವುದಕ್ಕಾಗಿ ಅಧಿಕಾರಿಗಳು ಬಂದೇ ಬಂದಾರು; ತನ್ನನ್ನು ಮುಟ್ಟುಗೋಲು ಹಾಕಿಯಾರು; ಎಂದು ಮುಂತಾಗಿ ಅವನು ಚಿಂತಿಸಿದನು. ಹಾಗೆ ಅವರು ಬಂದರೆ? .... .... ಬಂದರೆ?

ಪೀಟರನಿಗೆ ಈಗ ಅಧಿಕಾರಿಗಳ ವಿಚಾರವಾಗಿ ಭಯವು ಅಧಿಕರಿಸಿತು. ಅವನ ಮನಸ್ಸಾಕ್ಷಿಯು ಅವನ ಮೂರ್ಖತನವನ್ನು ಒಪ್ಪಲಿಲ್ಲ.. ಏನು ಮಾಡುವುದೆಂದು ಅವನು ಒಂದೇ ಸವನೆ ಒದ್ದಾಡಿದನು. ಹೋರಾಡಿ ಹೋರಾಡಿ ಅವನು ಕೊನೆಗೊಂದು ತೀರ್ಮಾನಕ್ಕೆ ಬಂದನು. ಪೀಟರನು ತನ್ನ ವಿಶಿಷ್ಟ ಯುಕ್ತಿಚಾತುರ್ಯಗಳನ್ನು ಪ್ರಯೋಗಿಸಿ ನೆಲಮಾಳಿಗೆಯನ್ನು ಕಟ್ಟಿಸಿ ತನ್ನೆಲ್ಲ ಧನವನ್ನೂ ಅದರಲ್ಲಿ ಗುಪ್ತವಾಗಿರಿಸಬೇಕೆಂದು ನಿರ್ಧರಿಸಿದನು. ಅವನ ಆಲೋಚನೆಗಳು ಒಂದು ಬಗೆಯ ಪರಿಪಕ್ವಸ್ಥಿತಿಗೆ ಬಂದಂತಾಮವು.

"ಆಗಲಿ; ವ್ಯಕ್ತಿಯ ಪ್ರಭಾವ ದೊಡ್ಡದೋ—ಪ್ರಭುತ್ವದ ಶಕ್ತಿ ದೊಡ್ಡದೋ? ತನ್ನ ಯೋಚನೆಯ ಚಮತ್ಕಾರದಿಂದ ಅವರ ಯೋಜನೆಯ ಬಲಾತ್ಕಾರವನ್ನು ಮುರಿದೇ ಬಿಡುವೆನು. ಇರಲಿ; ನೋಡಿಯೇ ಬಿಡೋಣ ವಂತೆ! ಸರಕಾರ! ಇಂತಹ ಸರಕಾರಕ್ಕೆ ನಲವತ್ತು ವರ್ಷಗಳಿಗೆ ಮುನ್ನವೇ ನಾನು ಮಣ್ಣು ಮುಕ್ಕಿಸಿದ್ದೇನೆ. ಇಂದು ಈ ಸರಕಾರಕ್ಕೆ ಹೆದರುತ್ತೇನೆಯೋ? ಭಂಗಾರದ ಒಡೆಯ ನಾನು! ಮಿಂಚಿ ಬಂದರೆ ಈ ಸಣ್ಣ ಪುಟ್ಟ ಅಧಿಕಾರಿ ಗಳನ್ನು ಕೊಳ್ಳುವುದು ಎಷ್ಟರಲ್ಲಿದೆ? ಮುಖಕ್ಕೆ ಮಸಿ ಬಳಿದು ಕಳುಹಿಸುವುದ ರಲ್ಲಿ ನನಗಿರುವ ಸಾಮರ್ಥ್ಯವನ್ನು ಇವರೇನು ಬಲ್ಲರು? ಭ್ರಾಂತಿ! ಅವರದು ಬರಿಯ ಬಯಲು ಭ್ರಾಂತಿ! ಈ ಧನ! ನೆತ್ತಿಯ ಜನರನ್ನು ಸುರಿಸಿ ಸಂಪಾದಿ ಸಿದ್ದು ಇದು. ಹೊಟ್ಟೆ ಬಟ್ಟೆಗಳನ್ನು ಕಟ್ಟಿ ಹೆಚ್ಚಾಗಿಸಿ ಬಚ್ಚಿಟ್ಟ

ಭಾಗ್ಯವಿದು ! ಈ ಮಣಗಟ್ಟಲೆ ಭಂಗಾರವನ್ನು ಸರಕಾರಕ್ಕೆ ಪುಕ್ಕಟೆಯಾಗಿ ಕೊಟ್ಟುಬಿಟ್ಟೇನೇ ? ನನ್ನ ಧನ ಸರಕಾರಕ್ಕೆ ! ನಾನೊಪ್ಪಲಾರೆ ; ನಾನು ಸಹಿಸಲಾರೆ ; ಜೀವದೊಂದಿಗೆ ನಾನದನ್ನು ಬಿಟ್ಟುಕೊಡಲಾರೆ. ನಾ ನೇ ಅನುಭವಿಸದ ರಾಶಿ ಹೊನ್ನನ್ನು ಸರಕಾರವೇನಂತೆ ವಶಪಡಿಸಿಕೊಳ್ಳುವುದು ? ನನ್ನ ಕೊನೆಯುಸಿರು ಹಾರಿ ಹೋಗುವಾಗಲೂ ಸರಕಾರವಾಗಲಿ, ಸಾರ್ವ ಜನಿಕರಾಗಲಿ, ನನ್ನ ಹೊನ್ನಿನಲ್ಲಿ ಒಂದೇ ಒಂದು ಸಣ್ಣ ನಾಣ್ಯವನ್ನೂ ನಾನು ಮುಟ್ಟಗೊಡಿಸೆನು. ಸತ್ತರೆ ನನ್ನ ಹೊನ್ನಿನ ರಾಶಿಯನ್ನು ತಬ್ಬಿಕೊಂಡು ನಾನು ಸತ್ತೇನೇ ಹೊರತು ಅದು ಸರಕಾರದ ಕೈಗೆ ಸಿಕ್ಕುವಂತೆ ಮಾಡುವುದು ಸುಳ್ಳು.

" ಹೌದು ; ಸುಮ್ಮನೆ ಕುಳಿತಿದ್ದರೆ ? ಮಾಡಬೇಕಾದುದು ಬಹಳವಿದೆ ; ಆಡತಕ್ಕುದೇನಿದೆ ? ನೆಲಮಾಳಿಗೆ—ಸ್ಪ್ರಿಂಗ್‌ಕದ—ತೋಟದ ಅಂಚಿನಲ್ಲಿ ! ಇದೇ ನನ್ನ ಇತ್ಯರ್ಥ ! ನನ್ನ ಹಣ ನನ್ನಲ್ಲಿ ; ನನ್ನ ಕಣ್ಣೆದುರಿನಲ್ಲಿ ; ಅದು ಸರಕಾರಕ್ಕೂ ಇಲ್ಲ ; ಸಾರ್ವಜನಿಕರಿಗೂ ಇಲ್ಲ. ಬೇಕಾದ ಅಧಿಕಾರಿಗಳು ಬರಲಿ ; ಬಂಗಲೆಯನ್ನೆಲ್ಲ ಬಲೆಬೀಸಿ ಶೋಧಿಸಲಿ. ಅವರಿಗೊಂದು ಬಿಡಿಹೊನ್ನು ಸಹ ಸಿಕ್ಕಬಾರದು ; ಅಷ್ಟೇಕೆ ? ಒಂದು ಕುರುಡು ಕವಡೆ ಯನ್ನೂ ಅವರು ಕಂಡುಹಿಡಿದು ಕೊಂಡುಹೋಗಲಾರರು. ಪೀಟರನ ಮುಂಚಿನ ಅವತಾರವನ್ನು ಅವರೇನು ಬಲ್ಲರು ? ಪೀಟರನ ಬಳಿ ಈ ಪುಕ್ಕಲು ಜನರ ಆಟವೇನೂ ನಡೆಯುವಂತಿಲ್ಲ. "

ಪೀಟರನು ಹಿಗ್ಗಿಗ್ಗಿ ಹಿಗ್ಗಿದ್ದ. ಅವನಲ್ಲಿದ್ದ ಒಟ್ಟು ಹಣವು ಮತ್ತೆ ಯಾರಲ್ಲಿಯಾದರೂ ಇದ್ದಿದ್ದರೆ—ಅದನ್ನೆಲ್ಲ ಬಡಬಗ್ಗರಿಗೆ ದಾನಮಾಡಿದ್ದರೆ —ಅವರಿಗುಂಟಾಗಬಹುದಾಗಿದ್ದ ಆ ಅತುಳಾನಂದವನ್ನೆಲ್ಲ ಮಿಂಚಿತ್ತು— ಅದನ್ನೆಲ್ಲ ಬಚ್ಚಿಡಲು ನಿರ್ಧರಿಸಿದ ಪೀಟರನಿಗೆ ! ಅಲ್ಲವೆ ಮತ್ತೆ ? ಕಷ್ಟದಲ್ಲಿದ್ದವರಿಗೆ ಎಷ್ಟನ್ನಾದರೂ ಕನಿಕರದಿಂದ ಕೊಟ್ಟು ಅವರನ್ನು ಸಂತಸ ಗೊಳಿಸಿ ತಾನೂ ಸಂತಸಗೊಳ್ಳುವ ವಿಧಾನವನ್ನು ಅವನು ಎಂದಾದರೂ ಅನುಸರಿಸಿದ್ದನಲ್ಲವೆ ?

ನೆ .... ಲ ......ಮಾ....ಳಿ .... ಗೆ; ತೋಟದಲ್ಲೊಂದು ನೂತನ ನೆಲಮಾಳಿಗೆ! ಧನರಾಶಿಯ ಬಂಧನಕ್ಕೊಂದು ಗುಪ್ತ ಕಾರಾಗಾರ! ಅದರ ವಿಚಾರವನ್ನು ಕುರಿತು ಅಧಿಕಾರಿಯು ಬಂದು ಹೋದ ಬಳಿಕ ಪೀಟರನು ಹಗಲಿರುಳೂ ಪರಿಪರಿಯಾಗಿ ಪರ್ಯಾಲೋಚಿಸತೊಡಗಿದನು.

ನೆಲದ ಮೇಲೆ ನಡೆಯುವವನಿಗೆ ಬೀಳುವ ಸಂಭವ ಕಡಿಮೆ. ಆದರೆ ಮಾನವನು ನೆಲದಿಂದ ಮೇಲಕ್ಕೆ ಹಾರಲೆತ್ನಿಸಿದಷ್ಟೂ ಕೆಳಗೆ ಉರುಳಿ ಬೀಳುವ —ಬಿದ್ದು ಮೂಳೆಗಳನ್ನು ಮುರಿದುಕೊಳ್ಳುವ ಸಂಭವವು ಹೆಚ್ಚು. ಅಂತೆಯೇ ನೆಲಮಟ್ಟದಿಂದ ಕೆಳಗಿಳಿದು ಹೋದಂತೆಲ್ಲ ಮೇಲೆ ಹತ್ತಿ ಬರುವ ಶ್ರಮವೂ ಹೆಚ್ಚುತ್ತದೆ. ಆ ಶ್ರಮದೊಂದಿಗೆ ಅಪಾಯವೂ ಕಲೆತಿರುತ್ತದೆ. ಹಾರುವ ಹಕ್ಕಿಗೆ ರೆಕ್ಕೆಯು ಮುರಿದುಹೋಗಿ ಅದು ಕೆಳಕ್ಕುರುಳಿದರೆ ಹೊಂಚುಹಾಕುತ್ತ ಕುಳಿತಿರುವ ಬೆಕ್ಕಿಗೆ ತುತ್ತಾಗಿಹೋಗುವಂತೆ ಅಪಾಯ ರಹಿತ ನೆಲಮಟ್ಟವನ್ನು ಬಿಟ್ಟು ನೆಲಮಾಳಿಗೆಯ ಪ್ರವೇಶವನ್ನು ಬಯಸಿದ ಪೀಟರನು ಅಲ್ಲಿಯ ನೀರು ಗಾಳಿಗಳ ಅಭಾವ — ಆ ಅಂಧಕಾರ — ಆ ಶೂನ್ಯಮಯ ವಾತಾವರಣ — ಇವುಗಳನ್ನು ಕುರಿತು ಯೋಚಿಸಿರಲಾರ. ಪಾಪಿಗಳಿಗೆ ಒಂದೊಂದು ಕೂಪವೆಂಬುದನ್ನು ಅವನೇನಾದರೂ ಮರೆತಿರಬಹುದೇ? ಸಾರೋದ್ಧಾರವಾದ ವಾಯುಜಲಗಳನ್ನು ತೊರೆದು ಇಕ್ಕಟ್ಟಿನ, ಆ ಅಂಧಕಾರದ, ಉಸಿರಾಡದ ನೆಲಮಾಳಿಗೆಯ ನಿರ್ಮಾಣದಲ್ಲಿ ಅವನು ನಿರತನಾದುದೇತರಿಂದ? ಅವರವರು ಅರಸಿ ಅಪ್ಪಿಕೊಳ್ಳುವ ಕರ್ಮಕ್ಕೆ ಹೆರವರೇನು ಮಾಡಲಾದೀತು?

ನೆಲಮಾಳಿಗೆಯ ಯೋಜನೆಯನ್ನು ಪೀಟರನು ತನ್ನ ಮನಸ್ಸಿನಲ್ಲಿ ಚೆನ್ನಾಗಿ ನಿರ್ಧರಿಸಿಕೊಂಡನು. ಅದರ ವಿವರಗಳನ್ನು ಕುರಿತು ಪದೇ ಪದೇ ಯೋಚಿಸಿ ಅದರ ರಚನಾಕ್ರಮಗಳನ್ನು ನಿಷ್ಕರ್ಷೆ ಮಾಡಿಕೊಂಡನು. ಆದರೆ ಅದನ್ನು ಕಟ್ಟುವುದಕ್ಕೆ ನಂಬಿಕಸ್ಥರಾದ ಜನರು ಬೇಕಲ್ಲ. "ಯಾರನ್ನು ಕರೆಸುವುದು? ಯಾರ ಮೂಲಕ ಕರೆಸುವುದು?" ಇದ್ದಕ್ಕಿದ್ದಂತೆ ಅವನಿಗೆ ಹೊಳೆಯಿತು :

" ಹೌದು ; ಈ ಕೆಲಸಕ್ಕೆ ಸತ್ಯತೆಯಿಂದ ನೆರವಾಗಬಲ್ಲವನೆಂದರೆ ಒಬ್ಬನೇ ಒಬ್ಬ — ಅವನೇ ಸ್ಯಾಮ್ಯುಯಲ್ ! ನೆಲಮಾಳಿಗೆ ಕಟ್ಟುವ ಕೆಲಸಗಾರರನ್ನು ಕರೆತರುವಂತೆ ಅವನಿಗೇ ಹೇಳಬೇಕು ? " ಹೀಗೆಂದು ಪೀಟರನು ಇತ್ಯರ್ಥಮಾಡಿಕೊಂಡನು.

ನೆಲಮಾಳಿಗೆಯ ಕೆಲಸವನ್ನು ನಿಧಾನ ಮಾಡುವಂತಿಲ್ಲ. ಕೆಲಸವು ಬೇಗ ಪೂರೈಸಬೇಕು ; ನಿಧಿನೊತ್ತವು ನೆಲಮಾಳಿಗೆಯನ್ನು ಸೇರಬೇಕು. ಅಧಿಕಾರಿಗಳ ಕಣ್ಣಿಗೆ ಮಣ್ಣೆರಚಬೇಕು ! ಮೂರ್ಖಮಾನವರಿಗೆ ಏನಾದರೊಂದು ಮನಸ್ಸಿಗೆ ಬಂದುಬಿಟ್ಟರೆ ತೀರಿತು; ಅದನ್ನುಮಾಡಿ ಮುಗಿಸುವವರೆಗೂ ಅವರ ಮನಸ್ಸಿಗೆ ನೆಮ್ಮದಿಯಿರದು. ಮರುದಿನವೇ ಪೀಟರನು ಸ್ಯಾಮ್ಯುಯಲ್ಲನಿಗೆ ಆಜ್ಞೆಮಾಡಿದನು :

" ಸ್ಯಾಮ್ಯುಯಲ್ ! ಮೊನ್ನೆಯೇ ಹೇಳಬೇಕೆಂದಿದ್ದೆ ; ಮರೆತೆ. ನಿನ್ನಿಂದ ಒಂದು ಅವಸರದ ಕೆಲಸವಾಗಬೇಕಾಗಿದೆಯಯ್ಯಾ ! ಅದನ್ನು ರಹಸ್ಯದಿಂದ ನಡೆಸಿಕೊಡಬೇಕು. ಏನು ಹೇಳುತ್ತಿ ? "

" ಧಣಿಯ ಅಪ್ಪಣೆ ; ನಡೆಸಿಕೊಡದಿದ್ದರೆ ? "

" ನಡೆಸಿಕೊಡುವುದು ಮಾತ್ರವಲ್ಲ. ರಹಸ್ಯವಾಗಿ ನಡೆಸಿಕೊಡಬೇಕು ಎಂದೆನಲ್ಲ. ಇದು ಸಹಸ್ರಾರು ಬಡವರ ಮೇಲ್ಮೆಗೆ ಸಂಬಂಧಿಸಿದ ಮಾತು !"

" ಬಡವರ ಉದ್ಧಾರಕ್ಕೆ ಧಣಿಗಳು ಕಾತುರಗೊಂಡಿರುವಾಗ ನನ್ನ ಕೈಲಾದುದನ್ನು ನಾನೂ ಮಾಡುವುದು ನ್ಯಾಯವೇ ಅಲ್ಲವೆ ? ಅದೇನೇ ಇರಲಿ ; ಹೇಳಿ ಧಣಿಗಳೇ ! ವಂಚನೆಯಿಲ್ಲದೆ ಮಾಡಿಕೊಡುತ್ತೇನೆ. "

ತೋಟದಲ್ಲಿ ನೆಲಮಾಳಿಗೆಕಟ್ಟಡದ ಮೇಲ್ವಿಚಾರಣೆ ಸ್ಯಾಮ್ಯುಯಲ್ಲನಿಗೆ ಒಪ್ಪಿಸಲ್ಪಟ್ಟಿತು. ಅವನು ಕಾಲವಿಳಂಬವಿಲ್ಲದೆ ಹತ್ತೆಂಟು ಕೆಲಸಗಾರರನ್ನು ಕರೆತಂದನು. ನೆಲಮಾಳಿಗೆಯನ್ನು ಕಟ್ಟುವುದಕ್ಕೆ ಬೇಕಾದ ಕಲ್ಲು, ಇಟ್ಟಿಗೆ, ಮರಳು, ಸುಣ್ಣ, ಎಲ್ಲ ಬಂದು ಬಿದ್ದವು. ಬಂಗಲೆಯ ವಾಯುವ್ಯ

ಭಾಗದಲ್ಲಿ—ತೋಟದ ಅಂಚಿನಲ್ಲಿ-ದೊಡ್ಡದೊಂದು ಮರವಿದ್ದಿತು. ಬಂಗಲೆಯಿಂದ ಆ ಮರವಿದ್ದ ಪ್ರದೇಶವು ಸುಮಾರು ಐನೂರು ಗಜದಷ್ಟು ದೂರವಿದ್ದಿತು. ಆ ವಿಶಾಲವಾದ ಮರದಮರೆಯಲ್ಲಿ ಪೀಟರನು ತೀರ್ಮಾನಿಸಿದ್ದಂತೆ ನೆಲಮಾಳಿಗೆಯ ಕೆಲಸವು ಪ್ರಾರಂಭಿಸಿತು. ಕೆಲಸಗಾರರನ್ನೂ, ಕಟ್ಟಡಕ್ಕೆ ಬೇಕಾದ ಸಾಮಾನುಗಳನ್ನು ಕಂಡು ಆ ಸಮಯದಲ್ಲಿ, ಸುರಕ್ಷಿತವಾದ ಆ ನೆಲಮಾಳಿಗೆಯ ಕೆಲಸದ ಆರಂಭದಲ್ಲಿ ಪೀಟರನಿಗೆ ಅದೇನೋ ಅವನೂ ಅರಿಯದಂತೆ ಒಂದು ತೆರನಾದ ಅಪೂರ್ವ ಆನಂದವುಂಟಾಯಿತು. ಎಷ್ಟು ಹೊತ್ತೂ ಇಲ್ಲ; ಕ್ಷಣಕಾಲ. ಇದ್ದಕ್ಕಿದ್ದಂತೆಯೇ ಅವನ ಮನಸ್ಸು ಧಿಕ್ ಎಂದಿತು. ಏಕೆ? ಪೀಟರನಿಗೇನಾಯಿತು? ಸರಕಾರದವರು ಬಂದು ತನ್ನನ್ನು ಕಂಡುಹಿಡಿದಾರು ಎಂದೆ? ಅಥವಾ, ಅದರಲ್ಲಿ ಅರಿಯಲಾರದ, ಅನುಭವಿಸಲಾರದ, ಯಾವುದಾದರೊಂದು ಅಪಾಯವು ಅಡಗಿದ್ದಿತೆಂದೇ? ಹೇಗಿರಬಹುದೋ? ಮರುನಿಮಿಷದಲ್ಲೇ ಅವನು ಆನಂದಗೊಂಡನು.

ತನ್ನ ಇಡೀ ಜೀವಮಾನದಲ್ಲಿ ತಾನು ಹಿಂದೆಂದೂ ಆಚರಿಸದ ಒಂದು ನೀತಿಯನ್ನು ಪೀಟರನು ಅಂದು ಆಚರಿಸಿದನು. ಅದನ್ನು ಕಂಡು ಸ್ಯಾಮ್ಯುಯಲ್ಲನಿಗೆ ಆಶ್ಚರ್ಯವಾಯಿತು. ನೆಲಮಾಳಿಗೆಯ ಕೆಲಸಗಾರರು ಒಬ್ಬೊಬ್ಬರಿಗೂ ಪೀಟರನು ಒಂದೊಂದು ಹೊನ್ನನ್ನು ಬಹುಮಾನವಾಗಿ ಕೊಟ್ಟನು. ಕೊಟ್ಟವನೇ “ಈ ಕೆಲಸವನ್ನು ಬೇಗಮಾಡಿ ಮುಗಿಸಿ; ಹತ್ತೇ ದಿವಸಗಳಲ್ಲಿ ಮುಗಿಸಿದರೆ ನಿಮ್ಮೊಬ್ಬೊಬ್ಬರಿಗೂ ಇನ್ನೂ ಎರಡೆರಡು ಹೊನ್ನು ಬಹುಮಾನ” ಎಂದು ಅವರನ್ನು ಪ್ರೋತ್ಸಾಹಿಸಿದನು. ಹಿಂದೆ ಕೆಲಸಮಾಡಿಸಿಕೊಂಡೂ ಕೂಲಿಕೊಡದೆ ಅಲೆಸುತ್ತಿದ್ದ ಪೀಟರನು ಇಂದು ಕೆಲಸಕ್ಕೆ ಮುನ್ನ ಒಂದೊಂದು ಹೊನ್ನು ಬಹುಮಾನ ಕೊಟ್ಟುದು — ಕೆಲಸ ಮುಗಿದೊಡನೆ ಎರಡೆರಡು ಹೊನ್ನು ಕೊಡುತ್ತೇನೆಂದುದು — ಇದು ಅತ್ಯತಿಶಯದ ಆಶ್ಚರ್ಯವೇ ಸರಿ. ಅಷ್ಟಕ್ಕೆ ನಿಲ್ಲದೆ ಪೀಟರನು ಕೆಲಸಗಾರರಿದ್ದೆಡೆಯಿಂದ ಸ್ಯಾಮ್ಯುಯಲ್ಲನನ್ನು ದೂರವಾಗಿ ಕರೆದುಕೊಂಡು ಹೋಗಿ ಅವನಿಗೆ ಏಕಾಂತವಾಗಿ ಹೇಳಿದನು :

“ಸ್ಯಾಮ್ಯುಯಲ್!”

" ಏನು ಧಣಿಗಳೇ ? "

" ಈಗ ಕಟ್ಟಿಸುತ್ತಿರುವ ನೆಲವಾಳಿಗೆ ಏತಕ್ಕೆ ಬಲ್ಲಿಯಾ ? "

" ಪ್ರಭುಗಳ ಮನಸ್ಸಿನಲ್ಲಿರುವುದನ್ನು ನಾನೇನು ಬಲ್ಲೆ ? "

" ಹಾಗಾದರೆ ಕೇಳು ಸ್ಯಾಮ್ಯುಯಲ್. ಈ ಸಲ ಕ್ರಿಸ್‌ಮಸ್ ಹಬ್ಬಕ್ಕೆ ಸರಿಯಾಗಿ ನನಗೆ ಎಪ್ಪತ್ತನೆಯ ವಯಸ್ಸು ತುಂಬುತ್ತದೆ. ಕ್ರಿಸ್ತದೇವನು ಮಾನವರ ಉದ್ಧಾರಕ್ಕಾಗಿ—ಅದರಲ್ಲಿಯೂ ದೀನ–ದಲಿತರ ಉದ್ಧಾರಕ್ಕಾಗಿ ಬಾಳಿ, ಬಳಲಿ ಶಿಲುಬೆಗೆ ಏರಿದನೆಂದು ನೀನು ಬಲ್ಲೆಯಷ್ಟೆ ? "

" ಚೆನ್ನಾಗಿ ಬಲ್ಲೆ ಧಣಿಗಳೇ ! "

" ಆದುದರಿಂದ ಇಷ್ಟು ದಿವಸ ನನ್ನನ್ನು ಕಾಪಾಡಿಕೊಂಡು ಬಂದ ಆ ದಯಾಮಯನ ಸ್ಮರಣೆಗಾಗಿ, ನನ್ನ ಒಡನಾಡಿಗಳ ಸೇವೆ ಮಾಡಲು ನಾನೂ ನಿಶ್ಚಯಿಸಿದ್ದೇನೆ. ಈ ಸಲ ಕ್ರಿಸ್‌ಮಸ್ ಹಬ್ಬದ ವೇಳೆಗೆ ಈ ನೆಲವಾಳಿಗೆಯಲ್ಲಿ ಪತ್ತಿಪ್ಪತ್ತು ಸಾವಿರ ಬುಷೆಲ್ ಗೋಧಿಯನ್ನು ತುಂಬಿ ಬಡ ಬಗ್ಗರಿಗೆ ದಾನಮಾಡಬೇಕೆಂದು ನಿಶ್ಚಯಿಸಿದ್ದೇನೆ. ಹೀಗೆಯೇ ನಾನು ಸಾಯುವ ವರೆಗೂ ಪ್ರತಿವರ್ಷವೂ ಕ್ರಿಸ್‌ಮಸ್ ಕಾಲದಲ್ಲಿ ಬಡವರಿಗೆ ಗೋಧಿ ಹಂಚಬೇಕೆಂದಿದ್ದೇನೆ. ಈ ನೆಲವಾಳಿಗೆಯ ಕೆಲಸವನ್ನು ಕೆಳಗಿನಿಂದ ಮೇಲ್ವಾಗದ ವರೆಗೂ ನೀನು ಎದುರಿಗಿದ್ದು ನೋಡಿಕೊಳ್ಳಬೇಕು .... ...... ಕಂಡೆಯಾ ? "

" ಆಗಬಹುದು ಧಣಿಗಳೇ ! "

" ನೀನೇನೂ ಪುಕ್ಕಟೆ ಮಾಡುವುದು ಬೇಡ ಸ್ಯಾಮ್ಯುಯಲ್ ! "

" ಧಣಿಗಳ ಚಿತ್ತ ; ಹಾಗೂ ಧಣಿಗಳು ಧರ್ಮದ ಕಾರ್ಯವನ್ನು ಮಾಡುತ್ತಿರುವಾಗ ನನ್ನ ಕೆಲಸವೇನು ಲೆಕ್ಕಕ್ಕೆ ಬಂದುದೇ ? "

" ಹಾಗಲ್ಲ ಸ್ಯಾಮ್ಯುಯಲ್ ! ನೀನು ಬಡವ. ನಿನ್ನ ಕೆಲಸಕ್ಕೆ ಇದೋ ಹಿಡಿ—ಪತ್ತು ಹೊನ್ನುಗಳು ! "

" ಇಷ್ಟೇಕೆ ಧಣಿಗಳೇ ? "

" ಹಿಡಿ, ಸ್ಯಾಮ್ಯುಯಲ್! ಇರಲಿ, ತೆಗೆದುಕೋ. ಆದರೆ ಈ ನೆಲ ಮಾಳಿಗೆಯ ವಿಚಾರ ಮಾತ್ರ ರಹಸ್ಯವಾಗಿರಲಿ; ಕೆಲಸಗಾರರಿಗೂ ಹೇಳು— ಇದರ ರಹಸ್ಯವನ್ನು ಕಾಪಾಡಬೇಕೆಂದು."

" ಹೇಳುತ್ತೇನೆ ಧಣಿಗಳೇ!"

" ಏತಕ್ಕೆ ಗೊತ್ತೇ?

" ಗೊತ್ತು ಧಣಿಗಳೇ! ಇದು ಧರ್ಮಕಾರ್ಯಕ್ಕಾಗಿ ಕಟ್ಟಿಸುವ ಕಣಜ. ಇದರಲ್ಲಿ ಇಡುವುದು ಬಡವರಿಗೆ ದಾನಮಾಡಲಿರುವ ಧಾನ್ಯ. ಅವರ ವಿಚಾರ ತಿಳಿದರೆ ದರೋಡೆಕೋರರು ಧಾನ್ಯವನ್ನೆಲ್ಲ ರಾತ್ರಿಯೋ ರಾತ್ರಿ ಹೊತ್ತುಹಾಕಿಯಾರು—ಕಣಜವು ಬರಿದಾದೀತು—ಎಂದಲ್ಲವೆ ಪ್ರಭು?"

" ಭೇಷ್! ನೀನು ತಿಳಿದವನು ಸ್ಯಾಮ್ಯುಯಲ್! ಸರಿಯಾಗಿ ಕಂಡು ಹಿಡಿದೆ."

" ನನಗೆ ಗೊತ್ತು ಧಣಿಗಳೇ! ನಮ್ಮ ಹಳ್ಳಿಗಳಲ್ಲೂ ಎಷ್ಟೋ ವೇಳೆ ಕೊಳ್ಳೆಗಾರರು ಕಣಜಗಳನ್ನು ಲೂಟಿ ಹೊಡೆದಿದ್ದಾರೆ."

" ಸರಿ, ಹಾಗಿದ್ದಮೇಲೆ. ಸ್ಯಾಮ್ಯುಯಲ್! ಕೆಲಸವನ್ನು ಎಚ್ಚರಿಕೆಯಿಂದ ನಡೆಸು; ತಿಳಿಯಿತೇ?"

" ಆಗಬಹುದು ಧಣಿಗಳೇ!"

ಇಷ್ಟು ಹೊತ್ತೂ ಅವರಿಬ್ಬರಿಗೂ ನಡೆದ ಸಂವಾದವು ಒಂದು ತೆರನಾಗಿದ್ದಿತು. ಆದರೆ ಇದ್ದಕ್ಕಿದ್ದಂತೆ ಸ್ಯಾಮ್ಯುಯಲ್ಲನು ತಲೆಕೆರೆದುಕೊಳ್ಳಲಾರಂಭಿಸಿದನು.

" ಏನು ನಿನ್ನ ಯೋಚನೆ?" ಪೀಟರನು ಕಾತುರತೆಯಿಂದ ಕೇಳಿದ.

" ಏನಿಲ್ಲ ಧಣಿಗಳೇ! ಎಂದರೆ ನಾನು ಹೇಳುತ್ತೇನೆಂದು ಕೋಪಗೊಳ್ಳಬಾರದು; ನಾನು ಎಷ್ಟಾದರೂ ಬಡವ."

" ಇರಲಿ ಹೇಳು."

" ಪ್ರಭು ! ಈ ನೆಲಮಾಳಿಗೆಯನ್ನು ಇಷ್ಟು ದೂರದಲ್ಲಿ, ಈ ತೋಟದ ಅಂಚಿನಲ್ಲಿ ಕಟ್ಟಿಸುತ್ತಿದ್ದೀರಲ್ಲ ? "

" ಏಕೆ ! ಆಗಬಾರದೇನು ? ಅದರಿಂದೇನು ಬಾಧಕ ? "

" ಬಂಗಲೆ ಬಳಿ ................ ಬಂಗಲೆಯೊಳಗೇ ಇದ್ದಿದ್ದರೆ...... ....ದವಸ ರಾಶಿಯು ಸುಭದ್ರವಾಗಿರುತ್ತಿತ್ತಲ್ಲವೇ? ಬೇಕಾದರೆ ರಾಕೇಲ್ ಮತ್ತು ಸಿಡ್ನಿ ಇವರನ್ನು ಕಾವಲಿಗೆ ಕೊಡುತ್ತಿದ್ದೆ. ಅವರು ಸಭ್ಯರು ; ಸತ್ಯದಿಂದ ನಡೆಯ ತಕ್ಕವರು. "

ಸ್ಯಾಮ್ಯುಯಲ್ಲನ ಸಲಹೆಯನ್ನು ಕೇಳಿ ಪೀಟರನ ಎದೆಗೆ ಸಿಡಿಲು ಬಡಿದಂತಾಯಿತು. ಅವನ ಆ ಸಲಹೆಯು ಹೊಸದೊಂದು ಸಮಸ್ಯೆಯನ್ನೇ ಎಬ್ಬಿಸಿದಂತಾಯಿತು. ಸಾಧಾರಣ ಸಂದರ್ಭದಲ್ಲಿ, ದ ವ ಸ ಶೇಖರಣೆಯ ನಿಮಿತ್ತವು ನಿಜವಾಗಿದ್ದಲ್ಲಿ, ಸ್ಯಾಮ್ಯುಯಲ್ಲನ ಸಲಹೆಯು ಅತ್ಯಂತ ಸಮಂಜಸ ವಾದದ್ದೇ. ಆ ದ ರೆ ಈ ಗ ... .. ..... ? ತನ್ನ ಅಂತರ್ಯದಲ್ಲಿರುವುದನ್ನು ಸ್ಯಾಮ್ಯುಯಲ್ಲನಲ್ಲಿ ಅವನು ಬಿಚ್ಚಿ ಹೇಳಬಲ್ಲವನಾಗಿದ್ದನೇ ? ಸತ್ಯವನ್ನು ಮುಚ್ಚಿಡುವುದು ಎ ಷ್ಟೊ ಂ ದು ಕಷ್ಟದ ಕೆಲಸ ? ಅದು ಅಸತ್ಯಗಾರನನ್ನು ಅ ಡಿ ಗ ಡಿ ಗೂ ಎಡವುವಂತೆ ಮಾಡುತ್ತದಲ್ಲವೆ? ಪೀಟರನು ಯೋಚಿಸಿ ದನು. ಬಳಿಕ ಅವನು ಹೇಳಿದನು :

" ಸ್ಯಾಮ್ಯುಯಲ್ ! ಬಂಗಲೆಯಲ್ಲಿ ಕಣಜ ! ಏನು ಹೇಳಿದೆ? ಕಣ್ಣು ಮುಚ್ಚಿ ತೆರೆಯುವುದರೊಳಗೆ ಆ ಕಣಜದಲ್ಲಿ ಇಲಿಗಳ ಸಂತೆ ಸೇರಿಬಿಡುತ್ತದೆ. ಮನೆಯಲ್ಲೆಲ್ಲ ಹೆಗ್ಗಣದ ಹಾರಾಟವಾಗಿ ನಿಲ್ಲುವ ನೆರಳೂ ನರಕವಾದೀತು ಬಲ್ಲೆಯಾ ? "

" ತೋಟದ ಬಳಿ ಇಲಿಗಳು ಇನ್ನೂ ಹೆಚ್ಚು ಧಣಿಗಳೇ ! ನೆಲದಲ್ಲೇ ಇಲಿಯ ಬಿಲಗಳು ! ಕಣಜದ ಬಾಗಿಲನ್ನು ತೆಗೆದಾಗ ಒಳಗೆ ದೂರಿಬಿಟ್ಟಾವು ; ನಾವು ಹಳ್ಳಿಗರು ; ಈ ತೆರನಾದ ಕ ಷ್ಟ ಗ ಳ ನ್ನು ಬೇ ಕಾ ದ ಷ್ಟು ಅನುಭವಿಸಿದ್ದೇವೆ. "

ಪೀಟರನು ನಿರುತ್ತರನಾದನು. ಯಾವುದೋ ನೆಪವನ್ನು ಹೂಡಿ ಸಾಮ್ಯುಯಲ್ಲನನ್ನು ಕೆಲಸಗಾರರ ಬಳಿ ಕಳುಹಿಸಿ ತನ್ನಲ್ಲೆ ಯೋಚಿಸಿದ :

" ಇವನ ಮಾತು ನಿಜವೇ? ಸಂಶಯ ಪಿಶಾಚಿಯು ಹುಟ್ಟಿಬಿಟ್ಟಿದೆ. ಇದನ್ನು ಮರ್ದನ ಮಾಡುವುದು ಹೇಗೆ? ........ ಹೇಗೆ? ........ ಹೇಗೆ? "

ನೆಲಮಾಳಿಗೆಯ ಕೆಲಸವು ಆರಂಭಿಸಿತು. ಅದರ ಉದ್ದ ಹನ್ನೆರಡಡಿ ; ಅಗಲ ಹತ್ತಡಿ ; ಕೆಳಗಿಂದ ಮೇಲಿನವರೆಗೆ ಎತ್ತರ ಒಂಭತ್ತಡಿ. ಗುಂಡಿ ತೋಡಿದ ಮಣ್ಣು ಒಂದು ದೊಡ್ಡ ರಾಶಿಯಾಯಿತು. ಮಳೆಯ ನೀರು ಒಳಗೆ ಇಳಿಯದಂತೆ ತೋಡಿದ ಆ ಮಣ್ಣನ್ನು ನೆಲಮಾಳಿಗೆಯ ಸುತ್ತಲೂ ಎತ್ತರವಾಗಿ ಹಾಕಿ ಘಟ್ಟಣೆ ಮಾಡಿಸಿದ್ದಾಯಿತು. ಒಳಗಡೆ ಸುತ್ತಲೂ ಇಟ್ಟಿಗೆಯ ಗೋಡೆಗಳು ಕಟ್ಟಲ್ಪಟ್ಟುವು. ನೆಲಕ್ಕೆ ಎರಡಡಿ ಮಂದ ಜಲ್ಲಿಯನ್ನು ಸುರಿಸಿ ಸುಣ್ಣಗಾರೆಗಳಿಂದ ಮಟ್ಟಸಮಾಡಲಾಯಿತು. ಹತ್ತೇ ದಿವಸಗಳಲ್ಲಿ ನೆಲಮಾಳಿಗೆಯ ಕೆಲಸವು ಮೇಲ್ಮಟ್ಟದವರೆಗೂ ಪೂರೈಸಿತು. ಮೇಲ್ಗಡೆ ಬಾಯಿ ಕಿರಿದುಮಾಡಿ ಸುಮಾರು ಎರಡಡಿ ಉದ್ದ—ಅಗಲದ ಚೌಕಟ್ಟನ್ನು ಮಾಡಿಸಿ ಇಡಿಸಲಾಯಿತು. ಆ ಚೌಕಟ್ಟಿನಲ್ಲಿ ಮಂದವಾದ ತಗಡಿನಿಂದ ಮಾಡಲ್ಪಟ್ಟ ಉಕ್ಕಿನ ಕದವನ್ನು ಜೋಡಿಸಲಾಯಿತು. ಕದವನ್ನು ಬಿಟ್ಟೊಡನೆಯೆ ಅದು ಚೌಕಟ್ಟಿನಲ್ಲಿ 'ಢಮಾರ್' ಎಂದು ಬಿದ್ದು ಸ್ಪ್ರಿಂಗಿನ ಸಹಾಯದಿಂದ ಸ್ವತೀವ ಮುಚ್ಚಿ ಬೀಗ ಹಾಕಿಕೊಳ್ಳುತ್ತಿತ್ತು. ಬಾಗಿಲ ಬೀಗವನ್ನು ಹೊರಗಿನಿಂದಲೂ, ಒಳಗಿನಿಂದಲೂ ತೆಗೆಯಬಹುದಾಗಿದ್ದಿತು. ನೆಲಮಾಳಿಗೆಯೊಳಗಿಳಿದು ಹೋಗಲು ಹದಿನೈದು ಮೆಟ್ಟಲುಗಳುಳ್ಳ ಒಂದು ಕಡಿದಾದ ಕಂಬಿಯ ಏಣಿಯನ್ನೂ ಮಾಡಿಸಿ ನಿಲ್ಲಿಸಲಾಯಿತು. ಎಲ್ಲ ಕೆಲಸಗಳೂ ಸಮರ್ಪಕವಾಗಿ ಮುಗಿದುಹೋದುವು.

ಧನರಕ್ಷಣೆಗಾಗಿ ಕಟ್ಟಿಸುತ್ತಿದ್ದ ಈ ಗುಪ್ತ ಕಾರಾಗಾರದ ಕೆಲಸವು ನಡೆಯುತ್ತಿದ್ದ ಕಾಲದಲ್ಲಿ ಪೀಟರನಿಗೆ ಹೊಸದೊಂದು ಸಮಸ್ಯೆಯು ತಲೆದೋರಿತು :

" ನಾನು ಈ ಕೆಲಸದ ಮೇಲ್ವಿಚಾರಣೆಯನ್ನು ಇಲ್ಲಿ ನಡೆಸುತ್ತಿರುವಾಗ

ಬಂಗಲೆಯೊಳಗೆ ಯಾರಾದರೂ ನುಗ್ಗಿದರೆ? ...... ...... ನೆಲಮಾಳಿಗೆ ಕಟ್ಟಿ ಮುಗಿಯುವುದರೊಳಗೆ ತಂದಿರಿಸಬೇಕೆಂದಿರುವ ಧನವನ್ನೆಲ್ಲ ಯಾರಾದರೂ ಎಗರಿಸಿಬಿಟ್ಟರೆ? ........ ಅಥವಾ, ಸರಕಾರದ ಅಧಿಕಾರಿಗಳೇ ಬಂದು ಬಂಗಲೆಯೊಳಗಿನ ನೆಲಮಾಳಿಗೆಯನ್ನು ಶೋಧಿಸಿ ನನ್ನ ಗುಪ್ತನಿಧಿಯನ್ನು ಹೊರತೆಗೆದು ಚಿಲ್ಲಾಪಿಲಿಯಾಗಿ ಚೆಲ್ಲಾಡಿದರೆ?......ಭ್ರಮೆ! ಉಲ್ಫ್ ಇಲ್ಲವೆ ಬಂಗಲೆಯ ಬಾಗಿಲಲ್ಲಿ? ...... ...... ಹಾಂ! ಇನ್ನೊಂದು ಮಾತು! ಉಲ್ಫ್‌ಗೆ ಯಾರಾದರೂ ವಿಷವನ್ನುಣಿಸಿ ಒಳಗೆ ನುಗ್ಗಿದರೋ? ...... ......ಥೂ! ಏನೇನೋ ಹಾಳು ಯೋಚನೆಗಳು! ಕೊನೆಮೊದಲಿಲ್ಲದ ಭೀತಿ! ಇರಲಿ; ಅಷ್ಟಕ್ಕೂ ನಾನಿನ್ನೂ ವರದಿಯನ್ನೇ ಕಳುಹಿಸಲಿಲ್ಲ. ಧನವನ್ನು ತಂದು ನೆಲಮಾಳಿಗೆಯಲ್ಲಿ ಭದ್ರಪಡಿಸಿ ಅದರನಂತರವೇ ನಾನು ವರದಿಯನ್ನು ಮುಟ್ಟಿಸುತ್ತೇನೆ. ಆಮೇಲಲ್ಲವೆ ಸರಕಾರದ ಅಧಿಕಾರಿಗಳು ನನ್ನ ವರದಿಯ ನಿಜಾಂಶವನ್ನು ಕಂಡುಹಿಡಿಯಲು ಬರಬೇಕಾದರೆ? ಬರಲಿ; ಬೇಕಾದಷ್ಟು ಬರಲಿ. ಅವರು ಬಂದ ಮೇಲೆ ಬಂಗಲೆಯ ಬಳಿ ಯಾವ ಕೋಟೆಯನ್ನು ಕಟ್ಟಿ, ಕೆಡವಿ, ವಿಜಯಧ್ವಜವನ್ನು ಹಾರಿಸುತ್ತಾರೋ ನೋಡೋಣ. ಹಾಗೂ ನೂತನ ನೆಲಮಾಳಿಗೆಯ ಸುಳಿವು ಅವರಿಗೇನಾದರೂ ತಿಳಿಯಿತೆನ್ನೋಣ. ಆಗ ಗೊತ್ತೇ ಇದೆ .... ...... ನೆಲದಮೇಲೆ ಧನದ ಚೀಲಗಳು .........ಅವುಗಳ ಮೇಲೆ ಹತ್ತಿಪ್ಪತ್ತು .... ...... ಏಕೆ? ಬೇಕಾದರೆ ಐವತ್ತು ಮೂಟೆ ಗೋಧಿಯನ್ನೇ ಆ ಥೈಲಿಗಳ ಮೇಲೆ ಸುರಿದುಬಿಟ್ಟರಾಯಿತು! ನೋಡಿಕೊಳ್ಳಲಿ; 'ಗೋಧಿಯ ಕಣಜ' ಎಂದರೆ ತೀರಿತು..... ಆದರೆ? ಆದರೆ ..... ? ಹಣದ ಥೈಲಿಗಳಮೇಲೆ ಮೂಟೆ ಮೂಟೆ ಗೋಧಿಯನ್ನು ತಂದು ಸುರಿಯಲು ನನ್ನಂತಹ ಮುದುಕನಿಗೆ ಸಾಧ್ಯವೇ? ಎಂದಮೇಲೆ ನನ್ನನ್ನು ಬಿಟ್ಟು ಬೇರೆ ಯಾರಾದರೂ ಹಣದ ಚೀಲಗಳ ಮೇಲೆ ಗೋಧಿಯನ್ನು ಸುರಿಯಬೇಕು ...... ...... ಯಾರು ಸುರಿಯುವವರು? ...... ...... ಯಾರು? ಆಗ ರಹಸ್ಯವು ಬಯಲಾಗದೆ? ಛೇ! ಈ ಸಂಶಯ ಸಂತಾನ! ಬಗೆಹರಿಯದ ಈ ಹಾಳು ಸಮಸ್ಯೆಗಳು! ಏನು ಮಾಡಲಿ? ...... ...... ಹುಂ! ಇರಲಿ; ಆದದ್ದಾಯಿತು. ಇದುವರೆಗೆ ಎಲ್ಲವೂ ಜಯವೇ! ಅದರಂತೆಯೇ

ಇನ್ನು ಮುಂದೆಯೂ!"

ಹೇಗೂ ಜೇಮ್ಸ್ ಎಂಬ ಅಧಿಕಾರಿಯು ತನ್ನಲ್ಲಿ ಬಂದುಹೋದ ಮುವ್ವತ್ತು ದಿನಗಳೊಳಗೆ ಪೀಟರನು ನೆಲಮಾಳಿಗೆಯನ್ನು ಕಟ್ಟಿಸಿಯೇ ಬಿಟ್ಟನು. ನೆಲಮಾಳಿಗೆಗೆ ಹಾಕಿಸಿದ ಉಕ್ಕಿನ ಕದ—ಅದಕ್ಕೆ ಹಾಕಿದ ಸ್ಪ್ರಿಂಗ್—ಮತ್ತು ಸ್ವತೇವ ಬೀಳುವ ಬೀಗ—ಇವುಗಳ ರಹಸ್ಯವನ್ನು ತಿಳಿದಿದ್ದವರು ಇಬ್ಬರು—ಮಾಡಿಸಿದ ಪೀಟರ್; ಮಾಡಿಕೊಟ್ಟ ಕಮ್ಮಾರ! ಆದರೂ ಪೀಟರನಲ್ಲಿ ಈಗ ಹೊಸದೊಂದು ಸಂದೇಹವು ಅಂಕುರಿಸಿತು. ಎರಡು ಬೀಗದ ಕೈಗಳನ್ನು ತನಗೆ ಮಾಡಿಕೊಟ್ಟ ಕಮ್ಮಾರನು ಅಂತಹುದೇ ಮೂರನೆಯ ಬೀಗದ ಕೈಯೊಂದನ್ನು ಮಾಡಿ ತನ್ನಲ್ಲಿ ಉಳಿಸಿಕೊಂಡಿದ್ದರೆ? ಅದರ ಸಹಾಯದಿಂದ ನೆಲಮಾಳಿಗೆಯನ್ನು ಹೊಕ್ಕು ಹೊನ್ನನ್ನೆಲ್ಲ ಹೊತ್ತು ಹಾಕಿದರೆ? ಅಥವಾ, ಯಾರಾದರೂ ದರೋಡೆಕಾರರೊಂದಿಗೆ ಅವನು ಒಳಸಂಚನ್ನು ನಡೆಸಿ ಹೆಚ್ಚಿನ ಪ್ರತಿಫಲದ ಆಸೆಯಿಂದ ಅವರಿಗೇ ಮೂರನೆಯ ಬೀಗದ ಕೈಯನ್ನು ಮಾರಿದರೆ? ಆಗ ದೂರನ್ನು ಕೊಡಲಾಗದೆ? ..... ..... ಥೂ! ಹೇಗೆ ದೂರು ಕೊಡುವುದು! ಯಾರಿಗೆ ಕೊಡುವುದು? ..... ..... ಸರಕಾರಕ್ಕೆ! ನನ್ನಲ್ಲಿ ಏನೂ ಇಲ್ಲವೆಂದು ನಾನಿಷ್ಟು ಹೆಣಗಾಡಿ ಸಾಯುತ್ತಿದ್ದೇನೆ. ದೂರು ಕೊಟ್ಟರೆ ಇದೆಯೆಂದು ನಾನಾಗಿ ಸರಕಾರಕ್ಕೆ ನಿರೂಪಿಸಿಕೊಟ್ಟಂತಾಗುವುದಿಲ್ಲವೆ? ಏನು ಮಾಡಲಿ? ಸುಳ್ಳು..........ಸುಳ್ಳು! ಈ ಸುಳ್ಳನ್ನು ಆಡಿ .......... ಸುಳ್ಳನ್ನು ಮುಚ್ಚುವುದರಲ್ಲೆ ನಾನು ಬೆಂದು ಬಡವಾಗಿ ಹೋದೆ..... ..... "

ಅವನಿಗೀಗ ಹುಚ್ಚು ಹಿಡಿಯುವುದೊಂದೇ ಬಾಕಿ. ಹೊನ್ನಿನ ಹಂಬಲ! ಹಣದ ರಕ್ಷಣೆ! ಎಷ್ಟೆಷ್ಟು ಯೋಚಿಸಿದರೂ..........ಏನೇನು ಮಾಡಿದರೂ ಮತ್ತೆ ಮತ್ತೆ ಹೊಸ ಹೊಸ ಸಮಸ್ಯೆಗಳು!

"ಹಾಂ! ನನ್ನ ಬುದ್ಧಿಗೂ ಕೇಡುಗಾಲ ಬಂದು ಬಿಟ್ಟಿದೆ. ಏನು ಈ ಬಯಲು ಭ್ರಾಂತಿ? ಈಗ ನನ್ನ ನೆನಪಿಗೆ ಬಂದಿತು. ಈ ನೆಲಮಾಳಿಗೆ ಗೋಧಿಯ ಕಣಜ .... ಇದರಲ್ಲಿ ಬಡವರಿಗೆ ದಾನಮಾಡುವುದಕ್ಕಾಗಿ ಗೋಧಿ

ಯನ್ನು ತುಂಬುತ್ತೇನೆ ಎಂದು ಹೇಳಿಯೇ ಇದ್ದೇನೆ. 'ಬಡವರಲ್ಲಿ ಕನಿಕರ ಗೊಂಡ ನೀವು ಪುಣ್ಯಾತ್ಮರೇ!' ಎಂದು ಕಮ್ಮಾರನೇ ನನ್ನನ್ನು ಬಾಯಿತುಂಬ ಹೊಗಳಿದನಲ್ಲವೆ?"

ನೆಲಮಾಳಿಗೆಯೊಳಗೆ ಇಳಿಯಬೇಕಾದರೆ ಬೀಗದ ಕೈಯ ಸಹಾಯ ದಿಂದ ಬಾಗಿಲನ್ನು ತೆಗೆಯಬೇಕು. ಬಾಗಿಲನ್ನು ತೆಗೆದನಂತರ ಬೀಗದ ಕೈಯನ್ನು ಭದ್ರಪಡಿಸಿಕೊಂಡು ಏಣಿಯ ಮೆಟ್ಟಿಲುಗಳ ಮೇಲೆ ಇಳಿದು ನಿಂತು ಒಳಗಡೆಯಿಂದ ಉಕ್ಕಿನ ಕದವನ್ನು ಕೆಳಕ್ಕೆಳೆದರೆ ಸಾಕು. ಅದು 'ಢವಾರ್' ಎಂದು ಬಿದ್ದು ಚೌಕಟ್ಟಿನಲ್ಲಿ ಮುಚ್ಚಿಕೊಂಡು ತಾನಾಗಿಯೇ ಬೀಗಹಾಕಿ ಕೊಳ್ಳುತ್ತಿತ್ತು. ಮತ್ತೆ ಮೇಲೇರಿ ಬರುವಾಗ ಒಳಗಿರತಕ್ಕವರು ತಮ್ಮ ಕೈಲಿರುವ ಕೀಲಿಯಿಂದ ಬೀಗವನ್ನು ತೆಗೆದು ಕದವನ್ನು ಮೇಲಕ್ಕೆ ತಳ್ಳಬೇಕಾ ಗಿತ್ತು. ಈ 'ಸ್ಪ್ರಿಂಗ್' ಬೀಗದ ಒಂದು ವೈಶಿಷ್ಟ್ಯವೆಂದರೆ ಬಾಗಿಲನ್ನು ಹಾಕುವುದಕ್ಕೆ ಬೀಗದ ಕೈ ಬೇಕಿರಲಿಲ್ಲ. ತೆರೆಯುವುದಕ್ಕೆ ಮಾತ್ರ ಅದು ಇದ್ದೇ ಇರಬೇಕು. ಒಳಗಿಳಿದವನು ಬೀಗದಕೈಯನ್ನು ಮೇಲೆಯೇ ಮರೆತು ಬಂದರೆ ಆಗವನ 'ಸಮಾಧಿ' ಖಂಡಿತ! ಅವನರಚಿದರೂ ಅವನ ಧ್ವನಿಯು ಉಕ್ಕಿನ ಕದವನ್ನು ಭೇದಿಸಿಕೊಂಡು ಹೊರಗೆ ಬರುವಂತಿರಲಿಲ್ಲ. ನೆಲಮಾಳಿ ಗೆಯ ರಚನೆಯು ಅಷ್ಟು ವಿಚಿತ್ರವಾಗಿದ್ದಿತು. ತನ್ನ ರಹಸ್ಯವು ಮತ್ತಾರಿಗೂ ಅರಿವಾಗಬಾರದೆಂಬುದೇ ಪೀಟರನ ಅಭಿಮತ.

ನೆಲಮಾಳಿಗೆಯೊಳಗೆ ಗೆದ್ದಲು, ಹುಳ ಹುಟ್ಟೆ ಇವುಗಳಿಗೆ ಅವಕಾಶವಿರ ಲಿಲ್ಲ. ಅದರೊಳಗೆ ನೀರೂ ಇಳಿಯುವಂತಿರಲಿಲ್ಲ. ಬಾಗಿಲು ತೆರೆದಿಟ್ಟಾಗ ಅದರೊಳಗೆ ಗಾಳಿ ಬೆಳಕುಗಳ ಪ್ರವೇಶ. ಮುಚ್ಚಿದಾಗ ಒಳಗೆ ಯಾರಾದರೂ ಸಿಕ್ಕಿಹಾಕಿಕೊಂಡರೆ ಉಸಿರಾಟಕ್ಕೆ ಭಂಗ; ಅಂತಹವರು ಮೃತ್ಯು ದೇವತೆಯ ಮಡಲಲ್ಲಿ ಮಲಗಿ ದೀರ್ಘನಿದ್ರೆ ಮಾಡಬೇಕಿದ್ದಿತು ಇಂತಹ ನೆಲಮಾಳಿಗೆ ಯೊಳಗೆ ಯಾರೂ ಪ್ರವೇಶಮಾಡಲಾರರು—ಮಾಡಕೂಡದು ಎಂಬುದು ಪೀಟರನ ಸಂಕಲ್ಪ. ಹಾಗೂ 'ಯಾರಾದರೂ ಅತಿಕ್ರಮ ಪ್ರವೇಶಮಾಡಿದರೆ ಉಸಿರು ಕಟ್ಟಿ ಸಾಯಲಿ' ಎಂಬುದು ಅವನ ಅಭಿಮತ.

ತಾನು ನೆಲಮಾಳಿಗೆಯ ರಚನೆಯಲ್ಲಿ ತೋರಿದ ಕುಶಲತೆಯನ್ನು ಕಂಡು ಪೀಟರನು ಬಹುವಾಗಿ ಹಿಗ್ಗಿದನು. ಹೊನ್ನಿನ ಹಂಬಲದಲ್ಲಿ, ಅದರ ಆರಾಧನೆಯಲ್ಲಿ ತಮಗೂ ತಿಳಿಯದೆ ಮಾನವರು ಹಿಂಸಕ ಮನೋವೃತ್ತಿಯನ್ನು ಆಚರಿಸಬೇಕಾದೀತು ಎಂದು ಅವನಿಗರಿವಾಗಲಿಲ್ಲ. ಏನೇ ಆಗಲಿ; ತಾನು ಬಯಸಿದ್ದು ಸಿದ್ಧಿಸಲೇಬೇಕು. ಆ ಸಿದ್ಧಿಯನ್ನು ಪಡೆಯಲು ಯಾವ ಕಾರ್ಯಕ್ರಮವನ್ನು ಆಚರಿಸುವುದಕ್ಕೂ ಅವನು ಹೆದರಿ ಹಿಂಜರಿಯುತ್ತಿರಲಿಲ್ಲ. ಹಾಗೂ ಅವನು ಯೋಚಿಸಿದನು :

" ನಾನು ಕೈಕೊಂಡ ಕಾರ್ಯವು ಕೆಡುಕಾಗಿದ್ದರೆ ನೆಲಮಾಳಿಗೆಯ ಕೆಲಸವು ಇಷ್ಟು ಶೀಘ್ರವಾಗಿ, ಇಷ್ಟು ಸುಸೂತ್ರವಾಗಿ, ಇಷ್ಟು ಸಮರ್ಪಕವಾಗಿ ಸಂಪೂರ್ಣಗೊಳ್ಳುತ್ತಿತ್ತೆ ? "

ತನ್ನ ಈ ನಂಬಿಕೆಯನ್ನು ಸ್ಥಿರಗೊಳಿಸಿಕೊಳ್ಳುವುದಕ್ಕಾಗಿ ಪೀಟರನು ನೆಲಮಾಳಿಗೆಯಲ್ಲಿ ನಾಲ್ಕು ದಿವಸ ದಿನಕ್ಕೆ ನಾಲ್ಕಾವರ್ತಿಯಂತೆ ಕೆಳಗಿಳಿದು ಮೇಲೆ ಹತ್ತಿ, ಪರೀಕ್ಷೆಮಾಡಿ, ತೃಪ್ತಿಗೊಂಡಿದ್ದನು. ಅದು ಅತ್ಯಂತ ಭದ್ರವಾದುದೆಂದು ಅವನಿಗೆ ಬೋಧೆಯಾಯಿತು.

ಹೇಗೋ ಪೀಟರನ ಆಲೋಚನೆಯು ಅದೊಂದು ಬಗೆಯ ನಿರ್ದಿಷ್ಟ ಪರಿಣಾಮವನ್ನು ಕಂಡಂತಾಯಿತು. ಅವನ ಸರ್ವಸ್ವವಾದ ಸ್ವರ್ಣರಾಶಿಗೆ ಆಗ ನೆಲಮಾಳಿಗೆಯು ಗುಪ್ತ ಕಾರಾಗಾರವಾಯಿತು. ಅವನು ಹಿಗ್ಗಿದ; ಹಿಗ್ಗುತ್ತ ತನಲ್ಲೆ ಹೇಳಿಕೊಂಡ :

" ನನ್ನ ಭಾಗ್ಯವನ್ನೆಲ್ಲ ಈ ರಹಸ್ಯಸ್ಥಾನದಲ್ಲಿ ಬಚ್ಚಿಡುತ್ತೇನೆ. ಅದನ್ನು ನನ್ನಿಂದ ಕಸಿದುಕೊಳ್ಳಬಲ್ಲವರಾರು ? ಹ ಹ್ಹ ಹ್ಹ ! "

ಕ್ಷಣಕಾಲದಲ್ಲಿ ಪೀಟರನು ಸ್ವರ್ಗಸಮಾನವಾದ ಸುಖವನ್ನು ಅನುಭವಿಸಿದನು.



ಪ್ರಕರಣ ೧೩.

# ಬಂಗಲೆಯಿಂದ ಭಂಗಾರದ ಪ್ರಯಾಣ....

"ವರದಿಯನ್ನು ಒಪ್ಪಿಸುವುದಕ್ಕೆ ಇಂದಿನಿಂದ 'ಎರಡು ತಿಂಗಳು ವಾಯಿದೆ' ಎಂದಿಪ್ಪ ಅಧಿಕಾರಿ. ನಕಲನ್ನು ಸಹಿ ಮಾಡಿ ನಾನು ಕೈಗೆ ತೆಗೆದುಕೊಂಡು ಇಂದಿಗೆ ತಿಂಗಳ ಮೇಲೆ ಮೂರು ದಿನಗಳಾದುವು. ಆದಷ್ಟು ಬೇಗ ನನ್ನ ಹೊನ್ನಿನ ಚೀಲಗಳನ್ನು ನೆಲಮಾಳಿಗೆಯೊಳಗಿರಿಸಿ ಭದ್ರ ಮಾಡಬೇಕು. ಅದಾದನಂತರ ಈ ಬಂಗಲೆಯನ್ನುಳಿದು ನನ್ನಲ್ಲಿ ಮತ್ತಾವ ಸ್ವತ್ತೂ ಇಲ್ಲ ಎಂದು ಸರಕಾರಕ್ಕೆ ವರದಿ ಕಳುಹಿಸಬೇಕು."

ನೋಲ್ಕಂಡ ರೀತಿಯಲ್ಲಿ ಪೀಟರನು ನೂತನವಾಗಿ ನಿರ್ಧರಿಸಿಕೊಂಡನು. ಅಂದಿನ ರಾತ್ರಿಯಿಂದಲೇ ಅವನು ಬಂಗಲೆಯಲ್ಲಿದ್ದ ತನ್ನ ನೆಲಮಾಳಿಗೆಯಲ್ಲಿ ಕೆಲಸ ಮಾಡತೊಡಗಿದನು. ತನ್ನ ಸ್ವರ್ಣವನ್ನೆಲ್ಲ ನೆಲದ ಮೇಲೆ ಒಂದು ರಾಶಿಯಾಗಿ ಸುರಿಯುವುದು; ನಗನಾಣ್ಯಗಳನ್ನು ತುಲನ ಮಾಡಿ ಮಾಡಿ ಒಂದೊಂದು ಮಣ ಚಿನ್ನವನ್ನು ಒಂದೊಂದು ಥೈಲಿಗೆ ತುಂಬುವುದು; ಮೊಹರು ಮಾಡುವುದು; ಥೈಲಿಗಳ ಮೇಲೆ ಒಂದು, ಎರಡು, ಮೂರು, ಎಂದು ಮುಂತಾಗಿ ಕ್ರಮಪ್ರಕಾರ ಅಂಕಿಗಳನ್ನು ಗುರುತಿಸುವುದು; ಸಿದ್ಧಗೊಂಡ ಆ ಥೈಲಿಗಳ ಸಾಗಾಟದ ವ್ಯವಸ್ಥೆ ಮಾಡುವುದು; ಹೀಗೆ ಹತ್ತು ದಿವಸಗಳು ಬೆಳಕು ಹರಿಯುವ ಮುನ್ನ—ಕತ್ತಲಾದ ಮೇಲೆ—ಎರಡು ಪಾಳಿಗಳೂ ಕೂಡಿ, ಅರುವತ್ತು ಹೊನ್ನಿನ ಚೀಲಗಳನ್ನು ಯಾರೂ ಕಾಣದಂತೆ, ತೋಟದ ನೆಲಮಾಳಿಗೆಯೊಳಗೆ ಸೇರಿಸಿದ್ದನು. ಅಲ್ಲಿಗೆ ವರದಿಯನ್ನು ಒಪ್ಪಿಸಿ

ಬಿಡಲು ನಿಯಮಿತವಾಗಿದ್ದ ಕಾಲದಲ್ಲಿ ಇನ್ನೂ ಹದಿನೇಳು ದಿವಸಗಳು ಮಾತ್ರ ಉಳಿದುವು. ಮತ್ತೆ ಏಳು ದಿನಗಳಲ್ಲಿ ಮೂರು ಹೊನ್ನಿನ ಚೀಲಗಳನ್ನು ನೆಲಮಾಳಿಗೆಯೊಳಗೆ ಪೀಟರನು ಭದ್ರಪಡಿಸಿದನು.

ಈ ಅರುವತ್ತು ಮೂರು ಭಾರವಾದ ಚೀಲಗಳನ್ನು ಆ ಇಳಿ ವಯಸ್ಸಿನಲ್ಲಿ ಒಂದೊಂದನ್ನಾಗಿ ಯಾರೂ ಅರಿಯದಂತೆ ಕೊಂಡುಹೋಗಿ ನೆಲಮಾಳಿಗೆಯಲ್ಲಿಟ್ಟು ಭದ್ರಪಡಿಸಿದ ತನ್ನ ಸಾಮರ್ಥ್ಯವನ್ನು ಕುರಿತು ಪೀಟರನು ಹೆಮ್ಮೆಗೊಂಡನು. ಆದರೆ ಚೀಲಗಳನ್ನು ಹೊತ್ತು ಹೊತ್ತು, ಅವನ ರಟ್ಟೆಗಳು ಮುರಿದಂತಾದುವು. ನೆಲಮಾಳಿಗೆಯಲ್ಲಿ ಕಬ್ಬಿಣದ ಏಣಿಯ ಕಂಬಿಯ ಮೆಟ್ಟಿಲುಗಳ ಮೇಲೆ ಹತ್ತಿ ಇಳಿಯುವುದರಲ್ಲಿ ಅವನ ಕಾಲುಗಳು ನೊಂದುವು. ಅವನು ಮಾಡುವ ಕೆಲಸವು ಅಷ್ಟೊಂದು ಪರಮ ರಹಸ್ಯವಲ್ಲದಿದ್ದರೆ ಅದನ್ನು ಅವನು ಕೂಲಿ ಕೊಟ್ಟು ಮತ್ತಾರ ಕೈಯ್ಯಲ್ಲಾದರೂ ಮಾಡಿಸಬಹುದಾಗಿತ್ತು. ಅದು ಒಂದೆಡೆಯಿರಲಿ. ಎಲ್ಲ ಚೀಲಗಳೂ ನೆಲಮಾಳಿಗೆಯೊಳಗೆ ಇಳಿಯುವ ವೇಳೆಗೆ ಅವನ ಕೈಯಲ್ಲಿದ್ದ ಕಿರುಹಣತೆಯು ಆರಿಹೋದುದೆಷ್ಟು ಬಾರಿ? ಬೀಗದ ಕೈ ಮರೆತು ಹೋದೀತೆಂದು ಒಳಗಿಳಿಯುವ ಮುನ್ನ ಕಿಸೆಯನ್ನು ಮುಟ್ಟಿ ನೋಡಿಕೊಂಡುದೆಷ್ಟು ಬಾರಿ? ತನ್ನ ಹಿಂದೆ ಹಿಂಬಾಲಿಸಿ ಬಂದ ಉಲ್ಫ್ ಬೊಗಳಿ ಯಾರನ್ನಾದರೂ ಎಬ್ಬಿಸಿ ರಹಸ್ಯವನ್ನು ಬಯಲು ಮಾಡೀತೆಂದು ಭ್ರಮೆಗೊಂಡುದೆಷ್ಟು ಬಾರಿ? ಹಣದ ಚೀಲಗಳನ್ನು ಹೊತ್ತು ತರುವಾಗ ಕತ್ತಲಲ್ಲಿ ತನ್ನನ್ನು ಯಾರಾದರೂ ಕಳ್ಳರು ಹಿಂಬಾಲಿಸುತ್ತಿರಬಹುದೇ ಎಂದು ಬೆಚ್ಚಿಬಿದ್ದು ಭಯಗೊಂಡುದೆಷ್ಟು ಬಾರಿ? ಈ ಹಣವೂ ಸಾಕು; ಇದರ ಹಂಬಲವೂ ಸಾಕು; ಇದನ್ನು ಕಾಪಾಡುವ ಹಂಚಿಕೆಯೂ ಸಾಕು; ಈ ಹಾಳು ಹಣಕ್ಕಾಗಿ ನಾನೆಷ್ಟು ಬಾರಿ ಕಳ್ಳನಂತೆ ಈ ಕತ್ತಲಲ್ಲಿ ಓಡಾಡಿ ಪ್ರಾಣಬಿಡುವುದು — ಎಂದು ಮುಂತಾಗಿ ಬೇಸರಗೊಂಡುದೆಷ್ಟು ಬಾರಿ?

ಆದರೂ ಒಮ್ಮೆಯಾದರೂ 'ಯಾರಿಗಾಗಿ ಈ ಅಪಾರ ಹಣವನ್ನು ರಕ್ಷಿಸುತ್ತಿದ್ದೇನೆ? ಮನೆಯ ನೆಲಮಾಳಿಗೆಯಲ್ಲಿ ಸುಭದ್ರವಾಗಿದ್ದ ಇದನ್ನು

ತೋಟದ ನೆಲಮಾಳಿಗೆಗೆ ಸಾಗಿಸುತ್ತಿರುವುದೇತಕ್ಕೆ ? ' ಎಂದು ಆವನಿಗನ್ನಿಸಿದಂತೆ ಕಾಣಲಿಲ್ಲ. " ನನ್ನಲ್ಲಿರುವ ಈ ಒಟ್ಟು ಧನವು ನನ್ನನಂತರ ಸರಕಾರವನ್ನು ಸೇರೀತೆಂದು ಇಟ್ಟುಕೊಳ್ಳೋಣ ; ಆದರೆ ನನ್ನ ಜೀವಿತ ಕಾಲದಲ್ಲಿ ಇದೆಲ್ಲದರ ಮೇಲೆ ನಾನು ಇಷ್ಟುಡಿ ತೆರಿಗೆಯನ್ನು ತೆರುತ್ತಲೇ ಬರಬೇಕು. ಹಣದ ಪ್ರಮಾಣವು ಹೆಚ್ಚಿದಂತೆಲ್ಲ ತೆರಿಗೆಯ ಹಣವೂ ಹೆಚ್ಚುತ್ತದೆ. ಅಲ್ಲಿಗೆ ನಾನು ನಾಲ್ಕಾರು ವರ್ಷಗಳು ಜೀವಿಸಿದ್ದರೆ ತೆರಿಗೆ ತೆತ್ತುತೆತ್ತೇ ಇದರಲ್ಲಿ ಅರ್ಧ ಕರಗಿ ಹೋಗುವುದರಲ್ಲಿ ಅಡ್ಡಿಯಿರದು. ಹಣವನ್ನು ಬೆಳಸಿ ವರಮಾನವನ್ನು ತೋರಿಸುವುದು — ಅದಕ್ಕೆ ತೆರಿಗೆಯನ್ನು ಕೊಡುವುದು – ಅದೊಂದು ನಮೂನೆ. ಆದರೆ ಬಳಸದ ಈ ಅಪಾರ ಹಣದಲ್ಲಿ ವಿಶೇಷ ಭಾಗವನ್ನು ಸರಕಾರದವರು ಈಗಲೇ ಕಿತ್ತುಕೊಂಡಾರು. ಮೇಲಾಗಿ ಇಷ್ಟೊಂದು ಹಣವು ನನ್ನ ಕೈಸೇರಿದ ಬಗೆ ಹೇಗೆ? ಯಾವ ಯಾವಾಗ, ಯಾವ ಯಾವ ಕಾರಣದಿಂದ ಹಣವು ಕೈಸೇರಿತು ? ಎಂದೆಲ್ಲ ಸಕಲು ಪ್ರತಿ ಪ್ರಶ್ನಿಸುತ್ತದೆ ? ಅದನ್ನೆಲ್ಲ ಹೇಳುವುದು ಹೇಗೆ ? ನನ್ನ ನಲವತ್ತು ವರ್ಷಗಳ ರಹಸ್ಯವನ್ನು ಬಯಲಿಗೆಳೆದು ಅನಂತರ ನನ್ನನ್ನು ಕಾರಾಗೃಹಕ್ಕೆ ಕೂಡುವ ಯೋಜನೆಯದು. ಬೇಡ ; ಬೇಡ ; ನಾನು ಕತ್ತಲಲ್ಲಿ ಓಡಾಡುತ್ತ ಬಂದಂತೆ ನನ್ನ ಧನವೂ ಕತ್ತಲ ಕಾರಾಗೃಹದಲ್ಲಿ ನಿದ್ರಿಸಲಿ. ನನ್ನ ಹಣವನ್ನು ಹೊರ ತೆಗೆದರೆ ನಾನು ಬಂಧನವನ್ನು ಒಪ್ಪಿಕೊಳ್ಳಬೇಕು ; ನಾನು ಹೊರಗಿರ 'ಬೇಕಾದರೆ ನನ್ನ ಹಣವು ಬಂಧನದಲ್ಲಿರಬೇಕು ! ಯಾವುದು ಒಳಿತು ? ನಾನೇಕೆ ಬಂಧನದಲ್ಲಿರಲಿ ? ನನ್ನ ಧನವೇ ಕತ್ತಲಲ್ಲಿ ಅಗೋಚರವಾಗಿರಲಿ!"

ಈ ನೂತನ ಸಮಸ್ಯೆಗಳು ಮತ್ತೆ ಅವನ ಮನಸ್ಸಿನಲ್ಲಿ ಮೊಳೆತು ಚಿಗುರಿದವು. ನಾಲ್ಕು ಜನರಲ್ಲಿ ಆಡಬೇಕಾದ ಮಾತುಗಳನ್ನು—ಹಂಚಿಕೊಳ್ಳಬಹುದಾದ ವಿಚಾರಗಳನ್ನು—ಆಡದಂತೆ, ಹಂಚಿಕೊಳ್ಳದಂತೆ ಪಂಚಿಕೆಯನ್ನು ಹೂಡುವುದು ಅಸತ್ಯ — ಅನೀತಿ. ಇದರಿಂದ ಮಾನವನು ಕೊರಗಿ ಕೃಶನಾಗಬೇಕಾದೀತು ; ಕುಂದಿ ಕಳವಳಗೊಳ್ಳುವಂತಾದೀತು.

ಎಚ್ಚರಿಕೆಯ ಕ್ರಮುಗಳನ್ನು ಅನುಸರಿಸುವುದರಲ್ಲಿ ಪೀಟರನೇನೋ

ನಿಸ್ಸೀಮನಾಗಿಯೇ ಇದ್ದನು. ಆದರೆ ಅದೇಕೋ ಗೊತ್ತಿಲ್ಲ—ಇಷ್ಟು ಮುಂಜಾಗರೂಕತೆಯುಳ್ಳ ಅವನು ಹತ್ತಾರು ಮಯಣದ ಬತ್ತಿಗಳನ್ನೂ ಮತ್ತೊಂದು ಬೀಗದ ಕೈಯನ್ನೂ ಕೈ ಕಾವಲಿಗಾಗಿ ನೆಲಮಾಳಿಗೆಯಲ್ಲಿ ಇರಿಸಬಹುದಾಗಿದ್ದಿತು. ಹೊರಗಿದ್ದಾಗ ಒಂದು ಬೀಗದ ಕೈ ಕಳೆದು ಹೋದರೆ ಮತ್ತೊಂದನ್ನು ಮಾಡಿಸಬಹುದು; ಆದರೆ ಒಳಗಿದ್ದಾಗ ಇದ್ದ ಒಂದೇ ಬೀಗದ ಕೈ ಮೇಲೆ ಉಳಿದರೆ ಕೆಳಗಿರುವವನಿಗೆ ಅತ್ಯಂತ ವಿಪತ್ತು ಎಂಬುದನ್ನು ಅವನು ಮರೆತನು. ಹೇಗೋ ಒಳಗೆ ಕೀಲಿಯನ್ನೂ, ಮಯಣದ ಬತ್ತಿಗಳನ್ನೂ ಇಡಲು ಅವನ ಮನಸ್ಸು ಅಂಗೀಕಾರವನ್ನು ನೀಡಲಿಲ್ಲ.

"ಹೆಚ್ಚು ಮಯಣದ ಬತ್ತಿಗಳನ್ನು ಇಟ್ಟಿದ್ದರೆ—ವಿಧಿವಶಾತ್ ದರೋಡೆಕಾರರು ಒಳನುಗ್ಗಿದರೆ—ಅವರಿಗೆ ಬೆಳಕು ಮಾಡಿಕೊಟ್ಟಂತಾಗುತ್ತದೆ. ಇನ್ನೊಂದು ಕೀಲಿಯನ್ನು ನೆಲಮಾಳಿಗೆಯೊಳಗಿರಿಸಿದರೆ ಒಂದನ್ನು ಕದ್ದು ಒಳಗೆ ಹೊಕ್ಕವರು—ಅಕಸ್ಮಾತ್ ಬಾಗಿಲ ಹೊರಗೆ ಕಂಡಿಯಲ್ಲಿ ಬೀಗದ ಕೈಯನ್ನು ಬಿಟ್ಟು ಒಳಗೆ ಹೋಗಿ ಬಾಗಿಲು ಮುಚ್ಚಿಕೊಂಡುಬಿಟ್ಟರೆನ್ನೋಣ. ಆಗ ಒಳಹೊಕ್ಕು ತಸ್ಕರ ಮಾಡುವವರಿಗೆ ಹೊನ್ನನ್ನು ಹೊತ್ತು ಹೊರಕ್ಕೆ ಹೊರಟು ಹೋಗಲು ನಾನಾಗಿಯೇ ಅವಕಾಶವನ್ನುಂಟುಮಾಡಿಕೊಟ್ಟಂತಾಗುತ್ತದಲ್ಲವೆ? ಕೂಡದು; ನನ್ನ ಕೊರಳನ್ನು ನಾನೇ ಕತ್ತರಿಸಿಕೊಳ್ಳಲೆ? ಹಾಂ! ಏನಿದು ನನ್ನ ಭ್ರಮೆ? ಒಳಗೆ ಬೀಗದ ಕೈಯನ್ನು ನಾನೆಲ್ಲಿಡುವೆನೆಂಬುದು ನನಗೇ ಗೊತ್ತು. ಗೋಡೆಯ ಅಂಚಿನಲ್ಲಿ . ಆ ಕಂಡಿಯಲ್ಲಿ..... ಇಟ್ಟರೆ ಒಳಹೊಕ್ಕವರು ಹೇಗೆ ತಾನೇ ಕಂಡುಕೊಂಡಾರು? ಹಾಗೂ, ಬಾಗಿಲನ್ನು ಒಳಗಿನಿಂದಲೂ ತೆರೆಯಬಹುದೆಂದು ಅವರೇನು ಬಲ್ಲರು? ಹುಂ! ಮತ್ತೆ ಸಂಶಯ! ಏತಕ್ಕೆ ಕೂಡದು? ಕಳ್ಳರೆಂದಮೇಲೆ ಇಂತಹ ವಿಷಯಗಳಲ್ಲಿ ಅವರ ಬುದ್ಧಿಯೂ ಚುರುಕಾದುದು; ನನಗೆ ಹೊಳೆದಂತೆ ಅವರಿಗೂ ಹೊಳೆಯಲೇಬೇಕು. ಅವರು ಹುಡುಕಿಯೇ ಹುಡುಕುತ್ತಾರೆ. ಕೂಡದು; ಕೂಡಲೇ ಕೂಡದು. ಇಂತಹ ವಿಷಪರೀಕ್ಷೆಯನ್ನು ನಡೆಸಲೇ ಕೂಡದು.

ಪೀಟರನ ಆಲೋಚನೆಗಳು ಹಿಡಿದ ಹಾದಿ ಹತ್ತಾರು. ಅಂತೂ

ಮೋಹದಿಂದಲೂ, ಮಮತೆಯಿಂದಲೂ, ಮೊಹರುಮಾಡಿ ಸಿದ್ಧಗೊಳಿಸಿದ್ದ ಹೊನ್ನಿನ ಚೀಲಗಳನ್ನೆಲ್ಲ ಅವನು ನೆಲಮಾಳಿಗೆಯಲ್ಲಿ ಕೊಂಡುಹೋಗಿ ಇಟ್ಟನು. ಹಾಗೆ ತಾನು ಅದುವರೆಗೆ ತಂದಿರಿಸಿದ ಥೈಲಿಗಳನ್ನು ಹಣತೆಯ ಪ್ರಕಾಶದಲ್ಲಿ ಪೀಟರನು ಒಮ್ಮೆ ಕಣ್ಣು ತುಂಬ ನೋಡಿದನು. ಅವನ ಆ ನೋಟದಲ್ಲಿ ಅದರ ಮೇಲಿದ್ದ ಅವನ ಅಪಾರ ಆದರವು ಎದ್ದು ಕಾಣಿಸುತ್ತಿತ್ತು. 'ನಾನು ಕೃತಕೃತ್ಯನಾದೆ' ಎಂದು ಅವನೆಣಿಸಿದನು. ಅವನೆದೆ ಆಹ್ಲಾದದಿಂದ ತುಂಬಿ, ಉಬ್ಬಿ ಬಿರಿವಂತಾಯಿತು. ಆಗ ಅವನಿಗೆ ಅನ್ನಿಸಿದುದೇನು ?

"ಸರಕಾರ! ಬುದ್ಧಿಯಿಲ್ಲದ ಸರಕಾರ! ಶಾಸನವಂತೆ! ಜನಸಾಮಾನ್ಯದ ಕ್ಷೇಮವಂತೆ! ಬುದ್ಧಿಯಿಲ್ಲದವರಿಗೆ ಲಾವಣ್ಯವು ಲಬ್ಧಿಯಾಗಿ ಕಂಡೀತು! ಅಂದು ಜೇಮ್ಸ್ ಅಧಿಕಾರಿ ಬಂಗಲೆಗೆ ಬಂದಿದ್ದನಲ್ಲ .... .... ಒಂದೆರಡು ಗಂಟೆಗಳು ಮಾತನಾಡುತ್ತಿದ್ದನಲ್ಲ. ಅವನು ಕುಳಿತಿದ್ದೆಡೆಯಿಂದ ಮೂರೇ ಗಜದ ದೂರದಲ್ಲಿ ನನ್ನ ಈ ಇಡೀ ಹೊನ್ನಿನ ರಾಶಿ ಇದ್ದಿತು. ಅವನ ಕಣ್ಣಿಗದು ಕಂಡಿತೇ? ಹೇಗೆ ಕಾಣಿಸಬಲ್ಲುದು ? 'ನೆಲಮಾಳಿಗೆ ಬಾಗಿಲನ್ನು ತೆಗೆದು ತೋರಿಸು' ಎಂದು ಅವನು ನನ್ನನ್ನು ಕೇಳಿದ್ದರೆ .... .... ಕೇಳಿಬಿಡುವನೆಂದೇ ನಾನೂ ಹೆದರಿ ಸಾಯುತ್ತಿದ್ದೆ .... .... ಆಗ ನಾನೂ 'ಇಲ್ಲ' ಎನ್ನುವ ಹಾಗಿರಲಿಲ್ಲ; 'ಆಗಲಿ' ಎಂದು ತೆಗೆದು ತೋರಿಸುವ ಹಾಗೂ ಇರಲಿಲ್ಲ. ನನ್ನ ಆ ಇಕ್ಕಟ್ಟಿನ ಸಂಕಟದಲ್ಲಿ ನನ್ನ ರಹಸ್ಯವು ಬಯಲಾಗಿ ಹೋಗುತ್ತಿತ್ತು. ನಾನೂ ದಿಕ್ಕೆಟ್ಟು ಹಾಳಾಗಿ ಹೋಗುತ್ತಿದ್ದೆ. ಅದು ನನ್ನ ಅದೃಷ್ಟ! ನನಗೆ ಜಯಕಾಲವಿರುವವರೆಗೂ ಈ ಅಧಿಕಾರಿಯಾಗಲಿ—ಇವನ ಪುಂಡು ಪರಿವಾರದವರಾಗಲಿ ನನ್ನನ್ನೇನು ಮಾಡಬಲ್ಲರು ? ಹ ಹ್ಹ ಹ್ಹ !"

ಪೀಟರನು ಗಹಗಹಿಸಿ ನಕ್ಕನು. 'ಹ, ಹ್ಹ, ಹ್ಹ !' ಅವನ ಆ ನಗುವನ್ನು ಪರಿಹಾಸ್ಯಮಾಡಿದಂತೆ ನೆಲಮಾಳಿಗೆಯು ಪ್ರತಿಧ್ವನಿ ಗೈದಿತು.

"ಏನಿದು ? ನಾನು ಕಟ್ಟಿಸಿದ ನೆಲಮಾಳಿಗೆ!" ಇದು ನನ್ನನ್ನೇ ನೋಡಿ ವಿಕಟವಾಗಿ ಪರಿಹಾಸ್ಯ ಮಾಡುತ್ತಿದೆಯೇತಕ್ಕೆ ?

ಹೀಗೆಂದು ಯೋಚಿಸುವಷ್ಟು ಪೀಟರನಿಗೆ ಸಾವಕಾಶವು ಉಳಿದಿರಲಿಲ್ಲ. ಕಿರುಹಣತೆಯ ಪ್ರಕಾಶವು ಕುಂದುತ್ತಿತ್ತು. ಸೊಡರ ಎಣ್ಣೆಯು ತೀರುತ್ತ ಬಂದಿತು. ಅದು ನಂದಿಹೋಗುವುದರಲ್ಲಿತ್ತು. ನೆಲಮಾಳಿಗೆಯಲ್ಲಿ ಉಸಿರಾಟಕ್ಕೆ ಸಾಕೆನಿಸುವಷ್ಟು ಶುದ್ಧವಾದ ಗಾಳಿಯು ಉಳಿದಿರಲಿಲ್ಲ.

" ಹೊನ್ನನ್ನು ಇಲ್ಲಿ ತಂದಿರಿಸುವ ಭಾರ ನಿನ್ನದು ; ಅದನ್ನು ರಕ್ಷಿಸುವ ಹೊಣೆಗಾರಿಕೆ ನನ್ನದು ಇನ್ನೇಕೆ ತಡ ? ಬಂಗಲೆಗೆ ಹೋಗಿ ಮಲಗು ; ಸ್ವರ್ಣಸಮಾನವಾದ ಸುಂದರ ತರುಣಿಯನ್ನು ಹೊತ್ತು, ಹೆತ್ತು, ಹಗಲಿರುಳು ಎಚ್ಚರಿಕೆಯಿಂದ ಪಾಲಿಸಿದೆ ; ಅತ್ತೆಯ ಮನೆಗೆ ತಂದು ಬಿಟ್ಟೆ ; ಹೊರಡು ; ನೀನಿಲ್ಲಿ ನಿಂತರಾಗದು. ನಿನ್ನ ಮನೆಗೆ ನೀನು ಹೊರಡು. ನಿನ್ನ ಸುಕುಮಾರಿಯ ಸಂರಕ್ಷಣೆ ಇನ್ನು ಮುಂದೆ ನನಗೆ ಸೇರಿದುದು. ತೌರು ಮನೆಯ ಹೊಸಿಲನ್ನು ದಾಟಿದಮೇಲೆ, ಅತ್ತೆಯ ಮನೆಯೊಳಗೆ ಹೊಕ್ಕ ಬಳಿಕ, ಹೆಣ್ಣು ಉಳಿದರೆ ಮನೆತುಂಬಿಸಿಕೊಂಡವರ ಭಾಗ್ಯ ! ಅಳಿದರೆ ಅವರ ದೌರ್ಭಾಗ್ಯ ! ಅವಳೇನೂ ಇನ್ನು ಮುಂದೆ ನಿನ್ನ ಬಳಿ ಹಿಂತಿರುಗಳು. ನೀನು ಚಿಂತಿಸಿ ಫಲವಿಲ್ಲ; ಹಂಬಲವನ್ನು ತೊರೆದು ಬಂಗಲೆಗೆ ತಿರುಗು. ಹೆಣ್ಣು ಹೆತ್ತವರ ಪಾಡೆಲ್ಲ ಇಷ್ಟೆ. ಅವರು ಹೊತ್ತು, ಹೆತ್ತು, ಸಾಕಿ ಸಲಹುವುದು ಇತರರಿಗಾಗಿ. ವಿವೇಕದಿಂದ ಮನೆಗೆ ನಡೆ ; ತಡಮಾಡದಿರು ; ತೊಂದರೆ ಯಾದೀತಪ್ಪ ! "

ನೆಲಮಾಳಿಗೆಯು ಪೀಟರನನ್ನು ಈ ತೆರನೆ ಮೂದಲಿಸುವಂತಿತ್ತು. !

ಅಂದು ನೆಲಮಾಳಿಗೆಯನ್ನು ಬಿಟ್ಟು ಹೊರಗೆ ಬಂದನಂತರ, ಅದರ ಬಾಗಿಲನ್ನು ಭದ್ರಗೊಳಿಸಿ ಅವನು ಬಂಗಲೆಯಕಡೆ ಹೊರಡುವುದರಲ್ಲಿದ್ದನು; ಕೀಲಿಯನ್ನು ಕಿಸೆಯಲ್ಲಿ ಹಾಕಿಕೊಳ್ಳಲು ಹೋದಾಗ ಅದರಲ್ಲಿ ಮತ್ತೊಂದು ಮಯಣದ ಬತ್ತಿ ಇದ್ದುದು ಅವನಿಗೆ ತಿಳಿಯಿತು. ಇದ್ದಕಿದ್ದಂತೆ ಅವನಿಗೆ ಹೊಳೆಯಿತು :

" ಹೇಗೂ ಮತ್ತೊಂದು ಮಯಣದ ಬತ್ತಿ ಕೈಯಲ್ಲಿದೆ. ಇಷ್ಟೊಂದು ಹೊನ್ನನ್ನು ತಾಯಳಿದ ತಬ್ಬಲಿಯಂತೆ ನೆಲಮಾಳಿಗೆಯ ಕತ್ತಲಲ್ಲಿ ತಳ್ಳಿ,

ಬೀಗಹಾಕಿ, ಬಂಗಲೆಗೆ ಹೋಗಿ ಮಲಗಲೇ ? ...... ...... ಇವೇ ಒಲವಿನ ಬಲೆ ...... ಈ ಬಲೆಯಲ್ಲಿ ನನ್ನ .... ನನ್ನ ಹೊನ್ನಿನ ಬಂಧನ ! ನನ್ನನ್ನು ಬಿಟ್ಟು ನನ್ನ ಹೊನ್ನು ಬದುಕಿದ್ದೀತು ; ...... ...... ಆದರೆ ..... ..... ಆದರೆ ? ...... ..... ಅದನ್ನು ಬಿಟ್ಟು ನಾನು ಅರಕ್ಷಣವೂ ಬದುಕಿರಲಾರೆ ! .... .... ' ಬದುಕಿರಲಾರೆ ! ಮೂರ್ಖ ! ಹಾಗಾದರೆ ನೀನು ಈ ನೆಲಮಾಳಿಗೆಯನ್ನು ಕಟ್ಟಿಸಿದ ಉದ್ದೇಶವಾದರೂ ಏನು? ನಿನ್ನ ಸ್ವರ್ಣರಾಶಿಗೆ ಅನಂತಕಾಲಕ್ಕೂ ಸಂರಕ್ಷಕರು ಸಿಕ್ಕಿಯಾರು . .. .... ಅದೇನೂ ಅನಾಥ ಶಿಶುವಲ್ಲ. ನಿನ್ನ ವಿವೇಕಕ್ಕೆ ವಿಕಲ್ಪ ತಟ್ಟಿದೆ. ' ಮತ್ತೆ ಎಚ್ಚರಿಕೆಯ ಮಾತು ! ಅದನ್ನು ಉಚ್ಚರಿಸಿದವರು ಯಾರು ? ಯಾರಾದರೆ ನನಗೇನು ? ..... .... ಹಾಂ ! ಹೊನ್ನಿಗೆ ನೆಲಮಾಳಿಗೆ ಕಾವಲು ; ನೆಲಮಾಳಿಗೆಗೆ ಉಕ್ಕಿನ ಕದವು ಕಾವಲು ; ಉಕ್ಕಿನ ಕದಕ್ಕೆ ಸುಭದ್ರವಾದ ಬೀಗ ಕಾವಲು ; ಬೀಗಕ್ಕೆ ಬೀಗದ ಕೈ ; ಬೀಗದ ಕೈಗೆ ನಾನು ಕಾವಲು ; ಆದರೆ ..... .... ನನಗೆ ? ..... ...... ನನಗೆ ? ........... ನನಗೆ ? ....ನನಗೆ ನನ್ನ ಅದೃಷ್ಟ ಕಾವಲು ; ನನ್ನ ಶಕ್ತಿ ಸಾಹಸಗಳು ಕಾವಲು ! ನನ್ನ ಯುಕ್ತಿ ಚಾತುರ್ಯಗಳು ಕಾವಲು ! ಇಲ್ಲ ...... ಇಲ್ಲ .... ನನ್ನ ರಹಸ್ಯವೇ ಕಾವಲು ! ಹೌದು ; ಈಗ ವಾದಸರಣಿಯು ಸರಿ ಹೋಯಿತು. ”

ಇಷ್ಟು ವಾದ ವಿವಾದಗಳು ಮನಸ್ಸಿನಲ್ಲಿ ನಡೆಯುತ್ತಿದ್ದಂತೆ ಪೀಟರನಿಗೆ ಮತ್ತೆ ಏನೋ ಸಂದೇಹವು ಅಂಕುರಿಸಿತು. ನೆಲಮಾಳಿಗೆಯ ಕದವನ್ನು ತೆರೆದು, ಕಿಸೆಯಲ್ಲಿ ಕೀಲಿಯನ್ನು ಭದ್ರಪಡಿಸಿ, ಏಣಿಯಿಂದ ಕೆಳಗಿಳಿದು ಅವನು ಒಳಗಿನಿಂದ ಬಾಗಿಲನ್ನು ಮುಚ್ಚಿಕೊಂಡನು. ಮಯಣದ ಬತ್ತಿಯನ್ನು ಹೊತ್ತಿಸಿ ಕೈಯಲ್ಲಿ ಹಿಡಿದನು. ಗೋಡೆಯ ಸುತ್ತಲೂ ನೋಡಿದನು. ಹೊನ್ನಿನ ಚೀಲವನ್ನು ಹೆಗಲಮೇಲೆ ಹೊತ್ತು, ಹಣತೆಯನ್ನು ಹಿಡಿದು ಒಳಗಿಳಿಯುವಾಗ ತನ್ನ ಬೆನ್ನ ಹಿಂದೆ ಯಾವನಾರೂ ಕಳ್ಳನು ತನ್ನನ್ನು ಹಿಂಬಾಲಿಸಿದರೆ ? ...... ನೆಲಮಾಳಿಗೆಯ ಮೂಲೆಯಲ್ಲಿ ಹುದುಗಿಕೊಂಡಿದ್ದರೆ? ಆಗ ..... ಗೊತ್ತೇ ಇದೆ ; ಸರ್ವನಾಶ ! ಅಲ್ಲಿಯ ವರೆಗಿನ ಶ್ರಮ ಸಾಮರ್ಥ್ಯ

ಗಳೆಲ್ಲ ವ್ಯರ್ಥ! ನಿಜವಾಗಿಯೂ ಅಂತಹ ಭಯಕ್ಕೆ ಅವಕಾಶವೇ ಇರಲಿಲ್ಲ. ಆದರೂ ಪೀಟರನ ಮನಸ್ಸು ಅವನನ್ನು ಅಡಿಗಡಿಗೆ ಹೆದರಿಸುತ್ತಲೇ ಇತ್ತು. ಅದೇನು ಅವನನ್ನು ಕಂಡರೆ ಅದಕ್ಕಷ್ಟು ಮತ್ಸರವೋ ತಿಳಿಯದು. ಅಳುವ ಮಕ್ಕಳನ್ನು ಚಿವುಟಿ, 'ಗೊಗ್ಗ್ರಯ್ಯನ ಕೈಲಿ ಹಿಡಿದುಕೊಡುತ್ತೇನೆ' ಎಂದು ಹೆದರಿಸುವ ಕ್ರೂರಾತ್ಮರಂತೆ ಪೀಟರನ ಮನಸ್ಸೂ ಅವನನ್ನು ಪದೇ ಪದೇ ಹೆದರಿಸಿ ಹೆಣಗಾಡಿಸುತ್ತಿತ್ತು. ಎಡೆಬಿಡದ ಸಂಕಟ ಪರಂಪರೆಗಳನ್ನು ನೆನೆನೆನೆಸಿ ಪೀಟರನು ಕೊರಗುತ್ತಿದ್ದನು. ಪ್ರಕೃತ ಸಂದರ್ಭದಲ್ಲಿ ಅವನು ಅಂದುಕೊಂಡನು :

"ಹುಂ! ಬರಿಯ ಭ್ರಮೆ! ಬೀಗದ ಕೈ ನನ್ನ ಬಳಿ ಇದೆ; ಕಳ್ಳನೇನು ಮಾಡಿಯಾನು? ಹೆದರುವುದೇತಕ್ಕಂತೆ–ಹುಚ್ಚನಂತೆ? ಬೇಡದ ಭಯಗಳಿಗೆ ಬಲಿಯಾಗಿ ಬಳಲಲೇಕೆ? ಬೇಕಾದ ಕೆಲಸಗಳನ್ನು ಮರೆಯಬಹುದೆ? ಮೇಲಕ್ಕೆ ಹತ್ತಿ ಹೋಗಿದ್ದವನು ಹೇಗೂ ಮತ್ತೆ ನೆಲಮಾಳಿಗೆಯೊಳಗೆ ಇಳಿದು ಬಂದೆ. ಹೊನ್ನಿನ ಚೀಲಗಳೆಲ್ಲವೂ ಸರಿಯಾಗಿವೆಯೊ ಇಲ್ಲವೆ ಎಂದು ಎಣಿಸಿ ಬಿಡಬಾರದೇತಕ್ಕೆ? ಎಚ್ಚೆತ್ತು ವರ್ತಿಸುವುದು ನನ್ನ ಕರ್ತವ್ಯವಲ್ಲವೆ? ಅದರಿಂದ ಬಾಧಕವೇನು? ಹುಚ್ಚರಿಗೆ ಎಚ್ಚರಿಕೆ ಬೇಕಾಗಿಲ್ಲ. ಇದನ್ನೆಲ್ಲ ಕಂಡರೆ ಅವರಿಗೆ ಎಲ್ಲಿಲ್ಲದ ತಾತ್ಸಾರ! ಹಾಗಿದ್ದರೆ ನಾನು ಜಾಳಿ ಹೆಸರು ಹೇಳಲಾದೀತೆ?"

ಪೀಟರನು ತಾನು ತಂದಿರಿಸಿದ್ದ ಹೊನ್ನಿನ ಚೀಲಗಳನ್ನು ಎಣಿಸಿದನು :

"ಒಂದು ..........ಎರಡು .......... ಮೂರು .......... ನಾಲ್ಕು . .... ಐದು ..........ಆರು .......... ಏಳು .......... ಎಂಟು..........ಒಂಭತ್ತು .......... ಹತ್ತು! ಸಾಲಿಗೆ ಆರು ಚೀಲಗಳು ..... ... ಹತ್ತು ಸಾಲಿಗೆ ಅರುವತ್ತು ಚೀಲಗಳು ..... ಮೇಲೆ ಮೂರು ..... ಒಟ್ಟು ಅರವತ್ತಮೂರು ಆಯಿತು. ಇನ್ನು ಏಳು ಚೀಲಗಳಾದರೆ ಎ.....ಪ್ಪ ... ತ್ತು. ಭೇಷ್! ನನ್ನ ವಯಸ್ಸು ಎಪ್ಪತ್ತು .... ಚೀಲಗಳೂ ಎಪ್ಪತ್ತಾದರೆ ವಯಸ್ಸಿಗೊಂದು ಆನಂತಾಯಿತು. ಇದಿಷ್ಟು ಹೊನ್ನನ್ನು ನಾನು ಗಳಿಸಿದ ಮಾತೂ ಹಾಗಿರಲಿ; ಅದನ್ನೆಲ್ಲ ಸರಕಾರದ

ಸುಲಿಗೆಯಿಂದ ತಪ್ಪಿಸಿದೆ; ಈ ನೆಲಮಾಳಿಗೆಯಲ್ಲಿ ತಂದಿರಿಸಿ ಭದ್ರಪಡಿಸಿದೆ. ಈಗ ಸೋತವರು ಸರಕಾರದವರು: ಗೆದ್ದವನು ನಾನು! ನಿಜವಾಗಿಯೂ ನನ್ನ ಗೆಲುವು ಅತಿಶಯವಾದುದಲ್ಲವೆ? ಇದನ್ನೇ ಸಾಧನ ಎಂದು ಕರೆಯಬೇಕು. ನನ್ನಂತೆ ಸ್ವಂತ ಶ್ರಮದಿಂದ, ಸಮಾನರಹಿತ ಸಾಮರ್ಥ್ಯದಿಂದ, ಸ್ವರ್ಣರಾಶಿಯನ್ನು ಸಂಪಾದಿಸಿದವರಾರು? ನನ್ನಂತೆ ಸ್ವಸುಖವನ್ನು ಖಂಡಿಸಿ ಅಖಂಡ ಸಾಧನೆಮಾಡಿದವರಾರು? ಸಿದ್ಧಿಹೊಂದಿದವರೆಷ್ಟುಮಂದಿ? ಎದೆ ತಟ್ಟಿ ಹೇಳಲಿ. ನನ್ನ ಎದೆಗಾರಿಕೆ ಸಾಧಾರಣವಾದುದೇ? ಈ ತೆರನೆ ಸರಕಾರಕ್ಕೆ ಚಳ್ಳೆಕಾಯಿ ತಿನ್ನಿಸಿದವರು ಯಾರು? .... .... ಯಾರು?"

"ಯಾರು? .... ಯಾರು?"—ಪ್ರ ತಿ ಧ್ವ ನಿ! ಆಯಿತು: ಬಂದ ಕೆಲಸವಾಯಿತು. ಪೀಟರನು ಮತ್ತೆ ಏಣಿಯ ಹದಿನೈದು ಮೆಟ್ಟಲುಗಳನ್ನು ಮೆಲ್ಲ ಮೆಲ್ಲನೆ ಹತ್ತಿದನು. ಮೇಲ್ಮಟ್ಟಕ್ಕೆ ಬಂದನು. ಅದರೊಳಗೆ ಅವನು ಮುವ್ವತ್ತುಸಲ 'ಅರುವತ್ತಮೂರು.....ಅರುವತ್ತಮೂರು.... ಅರವತ್ತಮೂರು .....ಇನ್ನೂ ಏಳು.....ಏಳು....ಏಳು' ಎಂದೊದರುತ್ತ ಕಂ ಠ ಪಾ ಠ ಮಾ ಡಿ ಕೊಂಡನು. ಕೊನೆಗೆ ಬಾ ಗಿ ಲು ತೆ ಗೆ ದು ಹೊರಗೆ ಬಂ ದ ವ ನೇ 'ಬದುಕಿದೆಯಾ ಬಡಜೀವವೇ!' ಎಂದು ನೀಳವಾದ ನಿಟ್ಟುಸಿರು ಬಿಟ್ಟನು. ಅವನ ಮನಸ್ಸು ಈಗ ಎಷ್ಟೋ ಹಗುರವಾಯಿತು.

ನೆಲಮಾಳಿಗೆಯನ್ನು ಬಿಟ್ಟು ಬಂ ಗ ಲೆ ಯ ಕ ಡೆ ಹೋಗುತ್ತಿದ್ದ ಪೀಟರನನ್ನು ಅವನ ಮನಸ್ಸು ಸ್ತೋತ್ರಮಾಡತೊಡಗಿತು:

'ಹಣವನ್ನು ಗಳಿಸುವುದರಲ್ಲಿ, ಉಳಿಸುವುದರಲ್ಲಿ, ನೆಲಮಾಳಿಗೆಯೊಳಗಿರಿಸಿ ಸುವ್ಯವಸ್ಥಿತ ರೀತಿಯಲ್ಲಿ ಭದ್ರಗೊಳಿಸುವುದರಲ್ಲಿ ನಿನಗೆ ಸರಿಸಮಾನರಾದವರಾರಿದ್ದಾರೆ ಪೀಟರ್?'

ಮತ್ತೆ ಅದೇ ಮನಸ್ಸು ಅವನನ್ನು ಎಚ್ಚರಿಸಿತು:

'ಬೀಗದ ಕೈ ಹಾಕಿಕೊಳ್ಳುವ ಕಿಸೆಯಲ್ಲಿ ತೂತುಗಳು ಇದ್ದಾವು—ಎಚ್ಚರಿಕೆ!'

' ಇತರರನ್ನು ನಿನ್ನ ಬಳಿಗೆ ಸೇರಗೊಡಬೇಡ' ಎಂದು ಅವನ ಕಿವಿಯಲ್ಲಿ ಉಸುರಿತು. ಮರುನಿಮಿಷದಲ್ಲಿ ಅವನ ಮನಸ್ಸೆಂದಿತು :

' ನಿನ್ನ ನಾಯನ್ನೂ ನೀನು ನಂಬದಿರು. ನೀನು ಹಾಕದ ಮಾಂಸದ ತುಂಡುಗಳನ್ನು ಇತರರು ಅದರ ಮುಂದೆ ಚೆಲ್ಲಿ ಅದನ್ನು ಒಲಿಸಿಕೊಂಡಾರು.'

' ಮತ್ತೊಂದು ಬೀಗದ ಕೈಯನ್ನು ನೆಲಮಾಳಿಗೆಯಲ್ಲಿಟ್ಟು ಮೋಸಹೋಗಬೇಡ ; ಭದ್ರ ! '

— ಈ ಸಲ ಸಮಯೋಚಿತ ಸಲಹೆ.

' ಅವಸರವಸರವಾಗಿ ಮಯಣದಬತ್ತಿಗಳನ್ನು ಕೊಂಡುಹೋಗಿ ನೆಲ ಮಾಳಿಗೆಯಲ್ಲಿಡಬೇಡ. ನಿನ್ನ ಹಣವು ಈಗ ಬೆಳಕಿಗಿಂತಲೂ ಕತ್ತಲನ್ನೇ ವಿಶೇಷವಾಗಿ ಕೋರುತ್ತದೆ. ಜ್ಞಾಪಕವಿರಲಿ ..... ಮರೆಯದಿರು. '

ಪೀಟರನ ಮನಸ್ಸು ಅವನಿಗೆ ಇನ್ನೂ ಏನೇನೋ ಹೇಳಿತು.

' ಒಟ್ಟಿನಲ್ಲಿ, ಎಷ್ಟೇ ಎಡರುತೊಡರುಗಳು ಬಂದರೂ ಇಂತಹ ಕೆಲಸ ಗಳನ್ನು ಮಟ್ಟಿಗೆ ರಾತ್ರಿವೇಳೆಯಲ್ಲೆ ನಡೆಸು. ಹಗಲನ್ನು ನಂಬಿ ಹಾಳಾಗ ಬೇಡ. ಕೊನೆಯದಾಗಿ ತಿಳಿದುಕೋ .... ಹಗಲನ್ನು ನಂಬಬೇಡ ....ಹಗಲನ್ನು ನಂಬಲೇ ಬೇಡ .....ಹಗಲನ್ನು ನಂಬಿ ಹಾಳಾಗಬೇಡ. '

ಎಂದು ಮೂರಾವರ್ತಿ ಒತ್ತಿ ಹೇಳಿತು. ಅದು ಅವನೆದೆಯಲ್ಲಿ ಅಚ್ಚೊತ್ತಿದಂತೆ ನಿಂತಿತು. ಮನಸ್ಸೇ ಪೀಟರ್ ... ಪೀಟರನೇ ಮನಸ್ಸು !

' ಅರುವತ್ತಮೂರು .....ಇನ್ನೂ ಏಳು ತಂದಿರಿಸಿದರೆ ಎಪ್ಪತ್ತು"

ಹೀಗೆಂದು ಹಾದಿಯುದ್ದಕ್ಕೂ ಹೇಳಿಕೊಳ್ಳುತ್ತ ಪೀಟರನು ಬಂಗಲೆ ಯನ್ನು ಹೊಕ್ಕು ಹಾಸಿಗೆಯಲ್ಲಿ ಬಿದ್ದು ಹೊರಳಾಡಿದನು.

---

ಪ್ರಕರಣ ೧೪.

# ಮನಸ್ಸಾಕ್ಷಿ !

ನೆಲಮಾಳಿಗೆಯನ್ನು ಕಟ್ಟಬೇಕೆಂದು ಆಲೋಚಿಸಿ—ಅದನ್ನು ಕಟ್ಟಿ ಮುಗಿಸಿ—ಅದರೊಳಗೆ ಮೊಹರು ಮಾಡಿದ ಅರುವತ್ತುಮೂರು ಹೊನ್ನಿನ ಚೀಲಗಳನ್ನು ತಂದಿರಿಸಿ ಭದ್ರಪಡಿಸುವವರೆಗೆ ಪೀಟರನು ಪಟ್ಟ ಪಾಡು ಎಷ್ಟೆಂದು ಎಂದು ಹೇಳಿತೀರದು. ಹೇಗೂ ಈ ಎಲ್ಲ ಮಾನಸಿಕ—ದೈಹಿಕ ಕಷ್ಟಗಳ ದೆಸೆಯಿಂದ ಅವನ ಪ್ರಾಣವು ಅರ್ಧ ಕುಂದಿಹೋದಂತಾಯಿತು. ಅಲ್ಲಿಗೂ ಅವನ ಮನಸ್ಸಿಗೆ ಸಮಾಧಾನವಿಲ್ಲ. ಈಗ ಬೇರೊಂದು ಹೊಸ ಸಂಶಯವು ಅವನ ಮನಸ್ಸಿನಲ್ಲಿ ಮೊಳೆತು ಚಿಗುರಲನುವಾಯಿತು.

“ ಈ ನೆಲಮಾಳಿಗೆಯನ್ನು ಕಟ್ಟಿದ ಕೆಲಸಗಾರರು ನನ್ನಿಂದ ಉದಾರ ಬಹುಮಾನವನ್ನು ಪಡೆದಿದ್ದಾರಷ್ಟೆ. ಆದರೆ ಅವರು ಆಲೋಚಿಸಲಾದೀತು:

‘ ಕೇಳಿಯೂ ಎಂದೂ ಬಹುಮಾನ ಕೊಡದ ಇವನು—ಇಂದು ಕೇಳದೆಯೇ ಧಾರಾಳವಾಗಿ ಬಹುಮಾನ ಕೊಟ್ಟಿರುವುದರಿಂದ ಇವನು ಕಟ್ಟಿಸಿದ ನೆಲಮಾಳಿಗೆ ಯಾವುದೋ ರಹಸ್ಯದ ಕೆಲಸಕ್ಕಾಗಿಯೇ ಇರಬೇಕು. ಗೋಧಿಯನ್ನು ತುಂಬುತ್ತಾನಂತೆ! ಬೇಕಾದಷ್ಟು ಗೋಧಿ ದೇಶದಲ್ಲಿ ಬೆಳೆಯುತ್ತದೆ. ಹಣವೊಂದಿದ್ದರೆ ಬೇಕಾದಷ್ಟು ಕೊಂಡು ಹಂಚಬಹುದು. ಹಾಗೆ ಹಂಚುವ ಗೋಧಿಗೆ ಕಣಜವೇತಕ್ಕಂತೆ? ಚೀಟಿ ತಂದ ಬಡವರಿಗೆ ಇಂತಿಷ್ಟು ಗೋಧಿಯನ್ನು ಕೊಡುವುದು ಎಂದು ಯಾರಾದರೂ ದಿನಸಿ ವರ್ತಕರಿಗೆ ಒಪ್ಪಿಸಿ ಬಿಟ್ಟರೆ ಸಾಕಾಗಿತ್ತು; ಇವನಲ್ಲಿ ಚೀಟಿ ಪಡೆದು ಅಂತಹ ವರ್ತಕರಲ್ಲಿ ಹೋಗಿ ಧಾನ್ಯ ಪಡೆಯಬಹುದು. ಈ ನೆಲಮಾಳಿಗೆ ಗೋಧಿ ತುಂಬುವುದಕ್ಕಾಗಿ

ಕಟ್ಟಿಸಿದುದಲ್ಲ; ಅಲ್ಲವೇ ಅಲ್ಲ. ಹಾಗಾದರೆ ಇನ್ನೇತಕ್ಕೆ ? ಹಣ ತುಂಬು ವುದಕ್ಕೇ? ಇದರ ತುಂಬ ತುಂಬುವಷ್ಟು ಹಣ ಯಾರಲ್ಲಿದೆ? ಇರಲಿ; ಇವನು ಧನಿಕನೆಂದು ಕೇಳಿಬಲ್ಲೆವು. ಹೊನ್ನಿನ ಥೈಲಿಗಳನ್ನು ಇವನು ಇಲ್ಲಿ ಇರಿಸಬಹುದು. ಆದರೆ ಹೊನ್ನನ್ನು ಮನೆಯಲ್ಲಿರಿಸದೆ ಯಾರಾದರೂ ತೋಟದಲ್ಲಿ ತಂದಿರಿಸುವರೇ? ಹಾಗಾದರೆ ಮನೆಯಲ್ಲಿಡದಿರಲು ಕಾರಣ? ಯಾರಾದರೂ ಕಂಡುಕೊಳ್ಳುವರೆಂದೇ? ಯಾರು ಕಂಡುಕೊಳ್ಳುವವರು? ಸರಕಾರ ..... .... ನೂತನ ಶಾಸನವನ್ನು ಹೊರಡಿಸಿದ ಸರಕಾರ. ಹೌದು; ಇವನು ಶಾಸನವನ್ನು ವಂಚಿಸಿ ಹಣವನ್ನೆಲ್ಲ ಬಚ್ಚಿಟ್ಟು—ತೆರಿಗೆ ಕೊಡಲು ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾನೆ. ಹೀಗೆ ವಂಚನೆ ಮಾಡುವವರನ್ನು ಹಿಡಿದುಕೊಟ್ಟವರಿಗೆ ಸರಕಾರದವರು ಕಾಲುಭಾಗವನ್ನು ಬಹುಮಾನವಾಗಿ ಕೊಡುತ್ತಾರಂತೆ! ನಾವೇಕೆ ಈ ಬಹುಮಾನವನ್ನು ಪಡೆಯಿಸಿಕೊಳ್ಳಬಾರದು? ನಿಜ; ತನ್ನ ಹಣವನ್ನು ಬಚ್ಚಿಡುವುದಕ್ಕಾಗಿಯೇ ಇವನು ಈ ನೆಲಮಾಳಿಗೆ ಯನ್ನು ಕಟ್ಟಿಸಿರಬೇಕು.'

"ಈ ತೆರನೆ ಕೆಲಸಗಾರರು ಆಲೋಚಿಸಿದ್ದರೆ? ಹೌದು; ಅವರು ನನ್ನನ್ನು ಬಯಲಿಗೆಳೆದಾರು. ಸರಕಾರದ ಬಾಯಲ್ಲಿ ನನ್ನ ಧನಸೊತ್ತನ್ನು ಚೆಲ್ಲಿಕೊಟ್ಟು ಅವರು ಉಗುಳಿದ್ದನ್ನು ನೆಕ್ಕುವವರೂ ಇದ್ದಾರೆ. ನಿಜ; ವಂಚಕಿಗಳಿದ್ದಾರೆ. ಹೊಟ್ಟೆಕಿಚ್ಚಿನಿಂದ ಅವರು ಸರಕಾರಕ್ಕೆ ದೂರು ಮುಟ್ಟಿಸಬಹುದು."

ಒಮ್ಮೆ ಮೇಲ್ಕಂಡ ಸಂಶಯವು ನಿಜವಾಗಿರಬಹುದೆಂದು ಅವನು ಎಣಿಸಿದನು. ಮತ್ತೊಮ್ಮೆ ಅದು ಬರಿಯ ಭ್ರಾಂತಿಯೆಂದು ಅವನು ಅದನ್ನು ನಿರಾಕರಿಸಿದನು. ಕೊನೆಗೆ ಹೇಳಿದನು "ಈ ಬಳಲಿಕೆಯೇಕೆ? ನನ್ನ ಮನಸ್ಸು ನನ್ನನ್ನು ಸುಮ್ಮಸುಮ್ಮನಾದರೂ ಹೆದರಿಸುತ್ತದೆ. ಇದನ್ನು **ಮನಸ್ಸಾಕ್ಷಿ** ಎಂದು ಕೆಲವರು ಹೇಳುತ್ತಾರೆ. ಅದು ಯಾವ ಸಾಕ್ಷಿಯಾಗಿದ್ದರೂ ಇದ್ದು ಕೊಂಡು ಹೋಗಲಿ. ಹೌದು; ಈಗ ನೆನಪಿಗೆ ಬಂದಿತು; ಭಯವಿಲ್ಲ. ಈ ಕೆಲಸಗಾರರಿಗೆ ನಾನು ಹೇಳಿಯೇ ಇದ್ದೇನೆ; 'ಇದು ಕಣಜ; ಇದರಲ್ಲಿ

ತುಂಬುವುದು ಗೋಧಿ. ಈ ಕ್ರಿಸ್‌ಮಸ್ ಹಬ್ಬಕ್ಕೆ ನನಗೆ ಎಪ್ಪತ್ತು ವಯಸ್ಸು ತುಂಬುತ್ತದೆ. ಕ್ರಿಸ್ತ ದೇವನಿಗೆ ನನ್ನ ವಂದನೆಗಳು ಸಲ್ಲತಕ್ಕವಿವೆ. ಅದಕ್ಕಾಗಿ ನಾನು ಕ್ರಿಸ್‌ಮಸ್ ಕಾಲದಲ್ಲಿ ಸಾವಿರಾರು ಬಡಬಗ್ಗರಿಗೆ ಧಾನ್ಯವನ್ನು ಧಾರಾಳವಾಗಿ ದಾನಮಾಡುವವನಿದ್ದೇನೆ. ಇನ್ನುಮುಂದೆಯೂ ಅಷ್ಟೇ. ಪ್ರತಿ ಕ್ರಿಸ್‌ಮಸ್ ಹಬ್ಬದ ಕಾಲದಲ್ಲಿಯೂ, ನಾನು ಸಾಯುವವರೆಗೂ, ಈ ಕಣಜದಲ್ಲಿ ಗೋಧಿಯನ್ನು ಸಂಗ್ರಹಮಾಡಿ ಬಡವರಿಗೆ ಹಂಚುತ್ತೇನೆ.

"ಕೆಲಸಗಾರರು ಮರೆತಿರಲಾರರು. ಆದರೆ ಆ ದಿವಸ ಸ್ಯಾಮ್ಯುಯಲ್ಲ ನೇನು ಹೇಳಿದ? ನನ್ನ ಹಂಚಿಕೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳದ ಒಬ್ಬ ಕೆಲಸಗಾರನು ಕೇಳಿದನಂತೆ :

'ಇವನೊಬ್ಬನ ಜೀವನಕ್ಕೆ ಇಷ್ಟೊಂದು ದೊಡ್ಡ ಕಣಜವನ್ನು ತುಂಬಿಕೊಳ್ಳಬೇಕೇ? ಬಂಗಲೆಯ ಒಂದು ಕೋಣೆಯಲ್ಲಿ ಒಂದಷ್ಟು ಸುರಿದುಕೊಂಡರಾಯಿತು.' ಅಹಹ! ಏನಿವನ ವಾದ! ಇರಲಿ; ಈ ಕೆಲಸಕ್ಕೆ ಬಾರದ ಮನುಷ್ಯ — ಇವನೇ ನನ್ನ ಶತ್ರುವಾಗಿ ನಿಂತರೆ? ನಾನು ನೆಲಮಾಳಿಗೆಯಲ್ಲಿ ಗೋಧಿಯನ್ನು ತುಂಬಲಾರೆ ಎಂದು ಇವನಿಗೆ ತಿಳಿದ ಬಗೆ? ಸರಿ, ಸರಿ; ತಿಳಿದರೆ ತಿಳಿಯಲಿ. ಯಾರಾದರೂ ಕೇಳಿದರೆ ಗೋಧಿಯನ್ನು ಕೊಳ್ಳಲು ಮುಂಗಡ ಕೊಟ್ಟಿದ್ದೇನೆ ಎಂದರೆ ತೀರಿತು. ಇದಕ್ಕಾಗಿ ಯಾರಾದರೂ ನನ್ನ ತಲೆಯನ್ನು ತರಿದು ಹಾಕುವರೇನು? ಹಾಗೂ ಹೆಸರಿಗೆ ಮುವ್ವತ್ತೋ ನಲವತ್ತೋ ಮೂಟೆ ಗೋಧಿಯನ್ನು ತಂದು ಬಂಗಲೆಯಲ್ಲಿರಿಸಿದರಾಯಿತು. ಆಗಲಾದರೂ ನೋಡುವವರಿಗೆ ಅನ್ನಿಸಲಾರದೆ ನನ್ನ ಮಾತು ನಿಜವೆಂದು? ಅಷ್ಟಕ್ಕೂ ಅಧಿಕಾರಿಯೇ ಆ ದಿನ ಹೇಳಿದ್ದನಲ್ಲವೆ – 'ನೀವು ವ್ಯಯಮಾಡಿದ ಹಣದ ವಿಚಾರ ಸರಕಾರಕ್ಕೆ ಅನಾವಶ್ಯಕ — ಆನಂದದಿಂದ ಧರ್ಮಮಾಡಿ; ಇಂದೇ ಮಾಡಿ; ಈ ಘಳಿಗೆಯಲ್ಲಿ ಮಾಡಿ; ನಿಮ್ಮ ಉಳಿದೆಲ್ಲ ಸ್ವತ್ತುಗಳನ್ನೂ ಇಂದೇ ಬಡಬಗ್ಗರಿಗೆ ದಾನಮಾಡಿ ಬಿಡಿ; ಬೇಡವೆಂದವರಾರು? ...... ......' ನಿಜ; ನಾನು ಧರ್ಮ ಮಾಡುತ್ತೇನೆಂದರೆ ಸರ್ಕಾರಕ್ಕೆ ಅಭ್ಯಂತರವಿಲ್ಲ. ಆದುದರಿಂದಲೇ ನಾನು ಬಡಬಗ್ಗರಿಗೆ ಗೋಧಿ ಹಂಚುವೆನೆಂದರೆ ಸರ್ಕಾರಕ್ಕೆ

ಅನುಮಾನವೂ ಇಲ್ಲ. ಇರಲಿ; ನನಗೇನು ಬುದ್ಧಿ ಸಾಲದೇ? ಬುದ್ಧಿ ಇಲ್ಲದವರು ಇಷ್ಟೊಂದು ಹಣವನ್ನು ಕೂಡಿಸಿ ಇಡಲು ಸಾಧ್ಯವಾದೀತೇ? ಸರಿ; ಸರಿ. ಅವರಿವರಿಗೆ ಹೆದರಿ ಹೆದರಿ ಎಷ್ಟು ಕಾಲ ಬಾಳಲಾದೀತು?"

ಸಕಲ ಮಾನವರಿಗೂ ಮನಸ್ಸಾಕ್ಷಿ ಇದ್ದೇ ಇದೆಯಲ್ಲವೆ? ಆದರೆ ಪೀಟರನ ಮನಸ್ಸಾಕ್ಷಿ! ತನ್ನ ಕಣ್ಣುಮುಂದೆ ಆ ಮನಸ್ಸಾಕ್ಷಿಯು ತಂದು ನಿಲ್ಲಿಸಿದ ಪ್ರತಿಯೊಂದು ಸಂಶಯಕ್ಕೂ, ಸಮಸ್ಯೆಗೂ ಅವನು ಏನಾದರೊಂದು ಸಮಂಜಸವಾದ ಸಮಾಧಾನವನ್ನು ಸೃಷ್ಟಿಸುತ್ತಿದ್ದನು. ಸತ್ಯಾಂಶವನ್ನು ಮುಚ್ಚಿಟ್ಟು, ಸುಳ್ಳನ್ನು ಎತ್ತಿಹಿಡಿದು, ಸಂದೇಹವನ್ನು ನಿವೃತ್ತಿಗೊಳಿಸಿ, ಸಂತುಷ್ಟನಾಗಿ, ಸಂತಸದಿಂದಿರಲು ಸತತವಾದ ಸನ್ನಾಹವನ್ನೂ, ಸಾಹಸವನ್ನೂ ಹೂಡತೊಡಗಿದನು.

ಹಾಗಾದರೆ ಅವನು ತನ್ನ ಮನಸ್ಸಾಕ್ಷಿಯನ್ನು ನಿರಾಕರಿಸಿದನೇ? ಮಾನವರಲ್ಲಿ ಅಚಲವಾಗಿ ನೆಲೆಗೊಂಡಿರುವ ಮನಸ್ಸಾಕ್ಷಿಯ ಸ್ವರೂಪವಾದರೂ ಎಂತಹುದು?

ಸತ್ಯವೇ ಮನಸ್ಸಾಕ್ಷಿ; ಮನಸ್ಸಾಕ್ಷಿಯೇ ದೇವರು; ದೇವರೇ ಸತ್ಯ! ಸತ್ಯವು ಯಾವಾಗಲೂ ನಗ್ನ ಸ್ವರೂಪವನ್ನು ತಾಳುತ್ತದೆ. ಅದಕ್ಕೆ ಹೊದಿಕೆಯೇ ಬೇಕಾಗಿರುವುದಿಲ್ಲ. ಅದು ಹುಟ್ಟಿದ್ದು ಹುಟ್ಟಿದಂತೆ ಇರುತ್ತದೆ. ಅಸತ್ಯವು ಹಾಗಲ್ಲ. ಅದಕ್ಕೆ ನಾನಾ ವಿಧಾನದ ಹೊದಿಕೆಗಳು ಬೇಕಾಗುತ್ತವೆ. ಅದು ನಾನಾ ಮುಖವಾಗಿ ಓಡುತ್ತದೆ; ನಾನಾ ಬಣ್ಣಗಳನ್ನು ತಾಳುತ್ತದೆ; ಅದರ ವರ್ತನೆಯಲ್ಲಿ ನಾನಾ ತೆರನಾದ ಅನುಚಿತ ಅಸಂಬದ್ಧತೆಗಳು ಅಡಗಿರುತ್ತವೆ. ಒಂದು ಸುಳ್ಳನ್ನು ಮುಚ್ಚಿಡಲು ನೂರಾರು ನೂತನ ಸುಳ್ಳುಗಳನ್ನು ಹೇಳಬೇಕಾಗುತ್ತದೆ. ಸತ್ಯವನ್ನು ಮುಚ್ಚಿಡಲು ಪ್ರಯತ್ನಪಟ್ಟಂತೆಲ್ಲ ಅಸತ್ಯವನ್ನು ಆಸಕ್ತಿಯಿಂದ ಅಪ್ಪಿಕೊಳ್ಳಬೇಕಾಗುತ್ತದೆ. ಆದರೆ, ಎಂದಿದ್ದರೂ ಸತ್ಯವು ಸತ್ಯವೇ! ಅದು ಮಾನವನ ಮುನ್ನಡೆಗೆ ಮಂಗಳಕರವಾದ ಸಾಧನ ಸಂಪತ್ತು! ಅಸತ್ಯವು ಅಸಹ್ಯವಾದುದು; ಅದನ್ನು ಆಚರಿಸಿ ಮಾನವರು ಅನಂತ ಯಾತನೆಗೆ ಗುರಿಯಾಗುವರು. ಅಸತ್ಯವು ಅಂತ್ಯದಲ್ಲಿ ತನ್ನ

ಅವಲಂಬಕರನ್ನು ಅಧೋಗತಿಗೆ ತಳ್ಳಿ ಅವರನ್ನು ಅನಂತ ಯಾತನೆಗಳಿಗೆ ಗುರಿಮಾಡುವುದು.

ಈ ತೆರನೆ ಸತ್ಯ—ಅಸತ್ಯತೆಗಳ ಹೋರಾಟ ನಡೆಯುವುದು ಮಾನವರ ಮನಸ್ಸಿನಲ್ಲಿ. ಮನಸಸ್ಸಾಕ್ಷಿಯು ಪ್ರಬಲತೆರನಾಗಿ ಪ್ರಭಾವಕಾರಿಯಾದಂತೆಲ್ಲ ಮಾನವರಲ್ಲಿ ಸತ್ಯದ ಪ್ರೇಮವು ತಲೆಯೆತ್ತಿ ನಲಿಯುತ್ತದೆ. ಅಂತೆಯೇ ಮನಸಸ್ಸಾಕ್ಷಿಯ ಕಡೆ ಮಾನವರ ಲಕ್ಷ್ಯವು ಕಡಿಮೆಯಾದಂತೆಲ್ಲ ಅವರು ಅಸತ್ಯದ ಪ್ರೇರೇಪಣೆಗೆ ಬಲಿಯಾಗುತ್ತಾರೆ. ಸತ್ಯನಾಶವಾದಾಗ ಸತ್ವನಾಶವೂ ಆದಂತೆಯೇ. ಸತ್ವವು ಕ್ಷೀಣವಾದಂತೆಲ್ಲ ಮಾನವರು ದುರಾಚಾರಿಗಳೂ, ದುರಾಗ್ರಹಿಗಳೂ, ಧೂರ್ತರೂ, ದಯಾಶೂನ್ಯರೂ ಆಗುತ್ತಾರೆ

ಸತ್ಯವು ಸ್ವಯಂಪ್ರಕಾಶವಾದುದು. ಅದರ ನಿರೂಪಣೆಗೆ ಅಗಾಧವಾದ ಪ್ರಯತ್ನವೇನೂ ಬೇಕಾಗಿರುವುದಿಲ್ಲ. ಸತ್ಯವನ್ನು ನುಡಿಯಲು ಯಾರೂ ಅಂಜಿಕೊಳ್ಳಬೇಕಾಗಿಲ್ಲ. ಸತ್ಯವೇ ಎಲ್ಲ ಮತ ತತ್ತ್ವಗಳ—ಸಿದ್ಧಾಂತ ಸಾರದ—ಅಡಿಗಲ್ಲು. ಅದು ಮಾನವರ ಮೇಲ್ಮೆಗೆ-ಅವರ ಆತ್ಮದ ಉದ್ಧಾರಕ್ಕೆ ಅತ್ಯವಶ್ಯವೂ, ಅತಿಪವಿತ್ರವೂ, ಅತ್ಯುದಾತ್ತವೂ, ಅತ್ಯಮೋಘವೂ, ಅನಿಂತಾನಂದಕಾರಕವೂ ಆದ ಶ್ರೇಷ್ಠತೆರನಾದ ಸಲಕರಣೆ. ಸಾಯುಜ್ಯಕ್ಕೆ, ಸಾಮೀಪ್ಯಕ್ಕೆ, ಸಾರೋಪ್ಯಕ್ಕೆ ಅದು ಅತ್ಯುತ್ತಮ ಸಾಧನ ಸಂಪತ್ತು! ಇಂತಹ ಸತ್ಯವು ಸನ್ನಡತೆಗೆ ಕಲಶವಿದ್ದಂತೆ. ಅದು ವಂದನೀಯವಾದುದು; ನಿಂದೆಗೆ ಹೆದರದು; ನೀಚಕೃತ್ಯಗಳಿಗೆ ತಲೆಬಾಗದು; ನಿರ್ಬಂಧಗಳಿಗೆ ಸಿಲುಕದು; ಒಟ್ಟಿನಲ್ಲಿ ಅದು ನೀತಿವಂತರ ಅತ್ಯಮೂಲ್ಯವಾದ ಅಸ್ತ್ರಶಸ್ತ್ರ ಸಮುದಾಯ! ಸತ್ಯವೇ ಸೃಷ್ಟಿಕರ್ತನ ಮತ್ತೊಂದು ಸ್ವರೂಪ! ಎಲ್ಲ ಸತ್ಯ ತತ್ತ್ವಗಳ ನಿರ್ವಿವಾದ ಸಮನ್ವಯ ಸ್ವರೂಪವೇ ವೇದಾಂತ ವಿಚಾರದ ರಸಭರಿತವಾದ ಸಾರ! ಇಂತಹ ಸತ್ಯವನ್ನು ನಿರಾಕರಿಸಿದರೆ—ಅದನ್ನು ಮುಚ್ಚಿಡಲು ಪ್ರಯತ್ನಿಸಿದಂತೆಲ್ಲ-ಮಾನವರ ಮುನ್ನಡೆಗೆ ಪ್ರತಿಬಂಧಕಗಳು ಹೆಚ್ಚುತ್ತವೆ. ಆದರೆ ಅಸತ್ಯವು ಹಾಗಲ್ಲ. ಅದು ಪಾಪಪರಿವೃತವಾದುದು. ಅಸತ್ಯದ ಹಾದಿಯನ್ನು ಹಿಡಿಯುವುದರಿಂದ ಮಾನವನು ದಿನೇದಿನೇ-ನಿಮಿಷ

ನಿಮಿಷಕ್ಕೂ ಹಾನಿಗೆ ಗುರಿಯಾಗುತ್ತಾನೆ. ಅದು ಕ್ಷಣಿಕ ಸುಖಗಳನ್ನೂ ಕ್ಷಣಿಕ ಅಭಿವೃದ್ಧಿಯನ್ನೂ ತೋರಿಸಿ ಮಾನವನನ್ನು ಮರುಳುಗೊಳಿಸುವುದು. ಅಸತ್ಯದ ಮಾಯಾಬಲೆಯಲ್ಲಿ ಸಿಲುಕಿಬಿದ್ದ ವಂಚಿತ ಮಾನವನು ಅಂತ್ಯದಲ್ಲಿ ಅತ್ಯಂತ ಅಸಹನೀಯವೂ, ಅನಂತವೂ, ಅಪಾರವೂ, ಆಯಾಸಕರವೂ ಆದ ಚಿಂತೆಗಳೂ, ಕಷ್ಟನಷ್ಟ—ನಿಂದೆ ನಿಷ್ಠೂರ---ಇವುಗಳಿಗೂ ಬಲಿಯಾಗಿ ಬಗೆ ಬಗೆಯಾಗಿ ಬಳಲಬೇಕಾದೀತು. ಅಸತ್ಯ ಮಾರ್ಗವನ್ನು ಅವಲಂಬಿಸಿ ಮಾನವನು---ತನಗೆ ತಾನೇ ಸಮಾಧಾನ ಹೇಳಿಕೊಳ್ಳುವಾಗ ಅವನ ಚಿತ್ತವೃತ್ತಿಯೇ ಒಂದು ವಿಚಿತ್ರ ರೀತಿಯನ್ನು ಅನುಸರಿಸುತ್ತದೆ. ತಾನು ಮಾಡುವುದು — ಮಾಡಬಯಸುವುದು—ಆತ್ಮದ್ರೋಹ, ಮಾನವದ್ರೋಹ, ದೈವದ್ರೋಹ ಎಂದು ತಿಳಿದೂ ತಿಳಿಯದವನಂತೆ ನಟಿಸಿ, ತನ್ನ ತಪ್ಪುಗಳನ್ನು ಮರೆಸುವುದಕ್ಕಾಗಿ ಮಾನವನು ನಾನಾ ಹಂಚಿಕೆಗಳನ್ನು ಹೂಡಿ, ನಾನಾ ವೇಷಗಳನ್ನು ತಾಳಿ, ನಾನಾ ರೀತಿಗಳಲ್ಲಿ ತನ್ನ ಕುಟಿಲತೆಯನ್ನೂ, ವಂಚಕ ಚತುರತ್ವವನ್ನೂ ತಾನೇ ಮೆಚ್ಚಿ, ತಾನು ಆಚರಿಸುವ ಕುಹುಕ ಯುಕ್ತಿಗಳು ಕುಶಲತೆಯಿಂದ ಕೂಡಿದುವು ಎಂದು ಹೆಮ್ಮೆಯಿಂದ ನಂಬಿ ತನ್ನನ್ನು ತಾನೇ ಹೊಗಳಿಕೊಳ್ಳುವುದು ಅವನ ವಾಡಿಕೆ. ಆದರ ಅಸತ್ಯವು ಅನುಚಿತವೂ, ಆತ್ಮವಂಚಕವೂ ಆದುದೆಂದು ಅರಿತುಕೊಳ್ಳದೆ ಮಾನವನು ತನಗೆ ತಾನೇ ಸಮಾಧಾನ ಹೇಳಿಕೊಳ್ಳುವಾಗಲಂತೂ, ಅವನ ಮನಸ್ಸಿನ ಆ ವಿಚಿತ್ರ ಪರಿಸ್ಥಿತಿಯನ್ನು ಕುರಿತು ಚಿತ್ರಿಸಲಾಗದು. ದೀನ ಹೀನರಲ್ಲಿ ನಿರ್ದಯನಾಗುವುದು ? ಸ್ವಾರ್ಥತೆಯನ್ನು ಅವಲಂಬಿಸಿ — ಪರಹಿತವನ್ನು ಮೂಲೆಗೊತ್ತುವುದು ? ನಶ್ವರಧನವನ್ನು ನಂಬಿ ಇಹದಲ್ಲಿ ಅನ್ಯಾಯಕ್ಕೆ ಮನಸೋತು, ಆತ್ಮೋದ್ಧಾರದ ಆಚರಣೆಗಳನ್ನು ಮರೆತು, ಪರವನ್ನು ನೆನೆಯದೆ, ಪಾಪವನ್ನು ನಂಬಿ, ಮೋಸದ ಮೆರವಣಿಗೆಯನ್ನು ಸಜ್ಜುಗೊಳಿಸಿ, ಆತ್ಮವಂಚನೆಯನ್ನು ಆನಂದದಾಯಕವೆಂದು ಪರಿಗಣಿಸುವುದು ; ಅಸತ್ಯವಾದಿಯು ತನ್ನ ನಿಂದಿತ ಕೃತ್ಯಗಳಿಗೆತಾನೇ ಹೇಳಿಕೊಳ್ಳಬಹುದಾದ ಎಂತಹ ಸಮಾಧಾನವಾದರೂ ನಿರಂತರವಾಗಿ ನಿಲ್ಲಬಲ್ಲುದೇ ?

ಎಷ್ಟೇ ಕೆಡುಕಿನ ಸ್ವಭಾವದವನಾದರೂ ಯಾವ ಮಾನವನಿಗೂ ತನ್ನ

ಮನಸ್ಸಾಕ್ಷಿಯನ್ನು ಸಂಪೂರ್ಣವಾಗಿ ಒದರಿಕೊಂಡುಬಿಡಲು ಸಾಧ್ಯವೆನಿಸಲಾರದು. ಸತ್ಯವು ಅಪೇಕ್ಷಿಸುವ — ಅದಕ್ಕೆ ಅತ್ಯಾವಶ್ಯಕವೆನಿಸುವ — ಹಾದಿಯು ಒಂದೇ. ಅದನ್ನುಳಿದು ಅಸತ್ಯವು ಕುಟಿಲತೆಯಿಂದ ತೋರಿಸಿಕೊಡುವ ನೂರಾರು ಮಾಯಾಪರಿವೃತ ಅಡ್ಡಹಾದಿಗಳನ್ನು ಹಿಡಿದವರ ಪಾಡು ಕಡುಕಷ್ಟವಾಗುತ್ತದೆ. ಅವರ ಯಾತನೆಗಳು ಅನಂತವೂ, ವರ್ಣನಾತೀತವೂ ಆದವು. ಮನಸ್ಸಾಕ್ಷಿಯೇ ಮಾನವರ ಅಂತರಾತ್ಮ; ಅದು ಅವರನ್ನು ಸದಾಕಾಲದಲ್ಲಿಯೂ ಎಚ್ಚರಿಸುತ್ತಲೇ ಇರುತ್ತದೆ. ಅದನ್ನು ನಿರಾಕರಿಸಿದಾಗಲೇ ಅವರು ಅನಂತವಾದ ಶಿಕ್ಷೆ ಪರಿಕ್ಷೆಗಳಿಗೆ ಗುರಿಯಾಗುತ್ತಾರೆ.

ಪೀಟರನಿಗೂ ಮನಸ್ಸಾಕ್ಷಿ ಇದ್ದಿತು. ಅವನು ಆಡುವ ಮಾತುಗಳನ್ನೂ — ಮಾಡುವ ಕಾರ್ಯಗಳನ್ನೂ – ಅದು ಎಷ್ಟೋಸಲ ಒಪ್ಪಲೇ ಇಲ್ಲ. ಒಪ್ಪಿದ್ದರೆ ಅವನೇಕೆ ಇಷ್ಟೊಂದು ಬಗೆಯಲ್ಲಿ ಸಂಶಯಪಟ್ಟು ಪರಿತಪಿಸಬೇಕಾಗಿತ್ತು? ಆದರೆ ತನಗೊಂದು ಮನಸ್ಸಾಕ್ಷಿಯುಟೆಂದು ಪೀಟರನು ನಂಬಿರಲಿಲ್ಲ. ಅವನಲ್ಲಿ ಸಂಶಯಪಿಶಾಚಿಯು ಹುಟ್ಟಿ ಬೆಳೆಯುತಿತ್ತು. ಅಸತ್ಯದಿಂದ ಸತ್ಯವನ್ನು ತುಳಿಯುತ್ತ ಬರುವುದೇ ಪೀಟರನ ಇತ್ತೀಚಿನ ನಿತ್ಯ ನೀತಿಯಾಗಿತ್ತು. ಅವನ ಆ ಅಪಾರ ಸ್ವಾರ್ಥತೆ—ಅದರ ಪರಿಣಾಮವಾದ ದುರಾಸೆ, ಲೋಭ, ಧನವೋಹ, ಇವು ಅವನ ಮನಸ್ಸಾಕ್ಷಿಯನ್ನು ಮೆಟ್ಟಿ ತುಳಿಯುತ್ತಿದ್ದವು. ಇಂತಹ ವಿಷಮ ಪರಿಸ್ಥಿತಿಗೆ ಬಲಿಯಾದ ಸಮಯದಲ್ಲೇ ಮಾನವನು ಪಶುಸಮಾನನಾಗುವುದು. 'ದೈವಕ್ಕೆ ಹೆದರಿ ಮಾನವಗಣದಲ್ಲಿ ದಯೆಯನ್ನು ತಾಳಿ ಬಾಳು' ಎಂದು ಅಡಿಗಡಿಗೆ ಅವನ ಮನಸ್ಸಾಕ್ಷಿಯು ಎಚ್ಚರಿಸುತ್ತಲೇ ಇತ್ತು. ಆದರೆ ಅವನ ಲಕ್ಷ್ಯವು ಅತ್ತಕಡೆ ತಿರುಗಲಿಲ್ಲ. ಧನದ ಆರಾಧನೆಯಲ್ಲಿ ನಿರತನಾದ ಅವನಲ್ಲಿ ಬೇರೂರತ್ತ ಬಂದುದು ಸ್ವಾರ್ಥತೆಯು ಮಾತ್ರ. ಅದರಿಂದಾಗಿ ಅವನು ನೀತಿಬಾಹಿರನಾಗುತ್ತ ಬಂದನು. ಆದುದರಿಂದಲೇ ಅವನ ಮನಸ್ಸಾಕ್ಷಿಯು ಈಗ ಅವನಲ್ಲಿ ಅಡಗಿ ಕುಳಿತಿದೆ. ಅವನಾಗಿ ಅವಕಾಶವನ್ನು ನೀಡಿದರೆ ಮಾತ್ರ

ಎಂದಾದರೊಂದು ದಿನ ಅದು ಅನಂತ ಜ್ಯೋತಿಯಿಂದ ಪ್ರಕಾಶಿಸಿ, ಅವನ ಅಂತರಂಗದಲ್ಲುಳ್ಳ ಹುಳುಕು ಕೊಳಕುಗಳನ್ನು ಹೊರಚೆಲ್ಲಿ ಅದನ್ನು ವಿಸ್ತರಿಸಿ ವಿಕಾಸಗೊಳಿಸಬಲ್ಲುದು. ಆದರೆ ಆ ಅದ್ವಿತೀಯ, ಅಖಂಡ, ಕಲ್ಯಾಣಕರ ಆಹ್ಲಾದಭರಿತ ಪ್ರಾಪ್ತಿ — ಅದು ಪೀಟರನಿಗಿರುವುದೇ? ಅವನದನ್ನು ಆಶಿಸುವನೇ? ಆದರದಿಂದ ಸ್ವಾಗತಿಸುವನೇ?

"ಅನುರಾಗಭರಿತನಾಗಿ ಮಾನವರಲ್ಲಿ ಮಾನವನಾಗಿ ಬಾಳು; ಮಾನವರ ಮೇಲ್ಮೆಯನ್ನೇ ನಿನ್ನ ಬಾಳಿನ ಮುಂಬೆಳಕನ್ನಾಗಿ ಮಾಡಿಕೋ; ಪರಹಿತವನ್ನು ಸಾಧಿಸುವ ನೀತಿಯನ್ನು ಅನುವರ್ತಿಸು; ಧರ್ಮವನ್ನು ಪರಿಪಾಲಿಸು: ಪಾಪಪೂರಿತ ಪ್ರಯತ್ನಗಳನ್ನು ಮರೆ. ಪರಮಾತ್ಮನು ಉಪಕಾರಿ: ಮಾನವನ ಉದ್ಧರಣವೇ ಅವನ ಮಹತ್ವವಾದ ಆಕಾಂಕ್ಷೆ (ಮಹದಾಜ್ಞೆ). ಅವನ ಕರುಣೆಗೆ ಪಾತ್ರರಾಗಬಯಸಿದವರು ಮಾನವರಲ್ಲಿ ಸಮಾನಸ್ವಭಾವದಿಂದ, ಸಹಕಾರಬುದ್ಧಿಯಿಂದ, ಸಹಾಯಶೀಲತೆಯಿಂದ ನಡೆದುಕೊಳ್ಳಬೇಕು; ಅದಕ್ಕಾಗಿ ಅತುಳ ತ್ಯಾಗವನ್ನು ಮಾಡಬೇಕು."

ಎಂದು ಮುಂತಾಗಿ ಎಂದಾದರೊಂದು ದಿನ ಕ್ಷಣಕಾಲವಾದರೂ ಪೀಟರನ ಮನಸ್ಸಾಕ್ಷಿಯು ಅವನನ್ನು ಉಗ್ರವಾಗಿ ಎಚ್ಚರಿಸಬಹುದು. ಆದರೆ ಅವನದಕ್ಕೆ ಕಿವಿಗೊಡಬೇಕಲ್ಲ.

ಸ್ವಾರ್ಥತೆಯೇ ಅವನ ಹುಟ್ಟುಗುಣ. ಅದರಿಂದ ಅವನ ಸ್ವಭಾವವು ನೆಲಮಾಳಿಗೆಯ ಉಕ್ಕಿನ ಕದದಂತೆ ಅಭೇದ್ಯವಾಗಿ ಹೋಗಿದೆ. ಅದು ಅವನಲ್ಲಿ ಅಂತರ್ಗತವಾದ—ಮಾನವಸಹಜವಾದ—ಸಕಲ ಸದ್ಗುಣಗಳನ್ನೂ ತುಳಿದುಹಾಕಿದೆ. ಅವನ ವಿವೇಕಕ್ಕೊಂದು ಮಂಕಿನ ಮುಸುಕನ್ನು ಹೊದ್ದಿಸಿದೆ. ಸ್ವರ್ಣದ ಹಿಡಿತದಲ್ಲಿ ಸಿಕ್ಕಿಬಿದ್ದ ರಾಕ್ಷಸ ಸ್ವರೂಪನಾದ ಮಾನವನು ಮನಸ್ಸಾಕ್ಷಿಯನ್ನು ನಿರ್ಲಕ್ಷಿಸಿ, ಮಾಯೆಯನ್ನು ನಂಬಿ, ವಿವೇಕದಿಂದ ದೂರನಾಗುವುದೇನಾಶ್ಚರ್ಯ! ಆಸೆ, ದುರಾಸೆ, ಅತ್ಯಾಸೆಗಳೇ ಮಾನವನ ಅತ್ಯುಗ್ರ ಶತ್ರುಗಳು. ಹಣವನ್ನು ರಕ್ಷಿಸಿದನಂತರ ತಾನೂ ಸುರಕ್ಷಿತನೆಂದೆಣಿಸಿದ ಪೀಟರನಿಗೇತರ ಭಯವಿದೆ ಈಗ? ಅವನು ಯಾರಲ್ಲಿ—ಏತಕ್ಕಾಗಿ—

ಮೊರೆಯಿಡಬೇಕಾಗಿದೆ? ಯಾರ ದಯೆಯನ್ನು ಅ ವ ನು ಇದಿರುನೋಡ ಬೇಕಾಗಿದೆ? ಅವನಾಯಿತು--ಅವನ ಹೊನ್ನಿನ ಹ ಂ ಬ ಲ ವಾ ಯಿ ತು. ಅವನ ವಿಶ್ವಾಸ ಆ ಹೊನ್ನಿನ ಪದತಲದಲ್ಲಿ. ಅನನ್ಯ ಭಕ್ತಿಯಿಂದ— ಅಚಲವಾಗಿ ಅದನ್ನು ಆರಾಧಿಸುವ ಆವನಿಗೇನು ಕೊರತೆ?

ಆದರೆ.....? ಅವನು ಮರೆತುಬೇನನ್ನು? ಅಂತರಾತ್ಮ ..... ಅರ್ಥಾತ್ ಆತ್ಮಸಾಕ್ಷಿ! ಮ ನ ಸ್ಸಾ ಕ್ಷಿ! ಪರಮಾತ್ಮನ ಶಕ್ತಿ!



ಪ್ರಕರಣ ೧೫.

# ವಾಯಿದೆಯೊಳಗೆ ವರದಿ

ಸರಕಾರಕ್ಕೆ ವರದಿಯನ್ನು ಮುಟ್ಟಿಸುವುದಕ್ಕೆ ಇನ್ನೂ ಏಳು ದಿನಗಳು ಮಾತ್ರ ಉಳಿದಿದ್ದವಷ್ಟೆ. ಆ ಏಳು ದಿನಗಳಲ್ಲಿ ಕ್ರಮವಾಗಿ ಒಂದು ...... ...... ಎರಡು ...... ...... ಮೂರು ದಿನಗಳೂ ಉರುಳಿ ಹೋದುವು. ಶಾಸನವು ನಿರೂಪಿಸಿದ ವರದಿಯು ಮುಗಿದು ವಾಯಿದೆಯ ಕೊನೆಯ ದಿನವು ಹತ್ತಿರ ವಾದಂತೆಲ್ಲ ಪೀಟರನ ಮನಸ್ಸು ಅಶಾಂತಿಯಿಂದ ಅಲ್ಲೋಲ ಕಲ್ಲೋಲಗಳಿಗೆ ಎಡೆಗೊಡುತ್ತ ಬಂತು. ಆಗವನು ತನ್ನಲ್ಲಿದ್ದ ಬೆಲೆಬಾಳುವ ಸಾಮಾನು ಗಳನ್ನೂ, ಆಭರಣಗಳನ್ನೂ, ಅಮೂಲ್ಯ ರತ್ನಗಳನ್ನೂ, ಎಲ್ಲವನ್ನೂ, ಒಂದೊಂದಾಗಿ ಮಾರಿ ನಾಣ್ಯವನ್ನಾಗಿ ಪರಿವರ್ತನಗೊಳಿಸುತ್ತ ಬಂದನು. ಮೂಲೆ ಮೂಲೆಗಳಲ್ಲಿ ಕೂಡಿ ಹಾಕಿದ್ದ ಎಲ್ಲ ನಾಣ್ಯಗಳನ್ನೂ ಹುಡುಕಿ ತೆಗೆದು ಅವನು ಚೀಲಗಳಿಗೆ ತುಂಬುತ್ತ ಬಂದನು. ಅವನ ಅಖಂಡ ಪರಿಶ್ರಮ ದಿಂದ ಮತ್ತೆ ಆರು ಚೀಲಗಳು ತುಂಬಿದುವು. ಅವುಗಳನ್ನು ಮೊಹರುಮಾಡಿ ಯಥಾಪ್ರಕಾರವಾಗಿ ನೆಲಮಾಳಿಗೆಯಲ್ಲಿ ಭದ್ರಪಡಿಸಿದನು. “ ಅಂದು ಅರುವತ್ತುಮೂರು .... ...... ಈಗ ಮತ್ತೆ ಆರು ; ಒಟ್ಟು ಅರುವತ್ತೊಂಭತ್ತು ಚೀಲಗಳಾದುವು. ಇನ್ನುಳಿದುದು ಒಂದೇ ಒಂದು ಚೀಲ ...... ....ಕೊನೆಯ ಚೀಲ ! ನನ್ನ ಎಪ್ಪತ್ತನೆಯ ವಯಸ್ಸನ್ನು ಸೂಚಿಸುವ, ಕನಕಾಭಿಷೇಕ ಮಾಡುವ, ಕೊನೆಯ ಚೀಲ ! ನನ್ನ ಇಷ್ಟಾರ್ಥಸಿದ್ಧಿಯನ್ನು ಕರುಣಿಸುವ ಕೊನೆಯ ಚೀಲ ! ನನ್ನ ಬಾಳ ಕಿರೀಟಕ್ಕೆ ಕಲಶಪ್ರಾಯವಾದ ಕೊನೆಯ ಚೀಲ ! ಮನಸ್ಸಿಗೆ ಮಹದಾನಂದವನ್ನು ನೀಡುವ ಮಹತ್ವ ಪರಿಪೂರ್ಣದ ಕೊನೆಯ ಚೀಲ ! ಎಪ್ಪತ್ತನೆಯ ಚೀಲ ! ...... .... ಇನ್ನುಳಿದುದು ಮೂರೇ ದಿವಸ. ಆಗಲಿ; ಇಂದೋ ತಪ್ಪಿದರೆ ನಾಳೆಯೋ ಆ ಚೀಲವನ್ನೂ ಸರಿ

ಪೊಂದಿಸಿ ಬಿಡುತ್ತೇನೆ. ಅವನ್ನೂ ನೆಲಮಾಳಿಗೆಯೊಳಗಿರಿಸಿ, ಭದ್ರಪಡಿಸಿ ಕೃತಕೃತ್ಯನಾಗುತ್ತೇನೆ."

ಪೀಟರನು ಈ ರೀತಿ ನಿರ್ಧರಿಸಿದನು.

ಎಪ್ಪತ್ತನೆಯ ಚೀಲ! ಅದನ್ನು ಸರಿಹೊಂದಿಸುವುದರಲ್ಲಿ ಪೀಟರನ ಪ್ರಬಲವಾದ — ಪ್ರಚಂಡವಾದ – ಪ್ರಯತ್ನವು ನಡೆಯುತ್ತಿತ್ತು. ಎತ್ತರದ — ಕಡಿದಾದ — ಬೆಟ್ಟವನ್ನು ಹತ್ತುವಾಗ ಅಂಗಾಂಗಗಳಲ್ಲಿ ಶಕ್ತಿಯು ಕುಂದಿ ದಣಿದು ಹೋದವನು, ಕೊನೆಯ ಹಂತಗಳನ್ನು ಹತ್ತುವಾಗ — ಕಾಲು ಸೋತು ಅಲ್ಲಲ್ಲೆ ಕುಳಿತುಕೊಳ್ಳುವಂತೆ, ಎಟಕದ ಹಣ್ಣುಗಳನ್ನು ಮರದಿಂದ ಕಿತ್ತುಕೊಳ್ಳುವುದಕ್ಕೆ ಎಳೆಗೂಸು ಎದ್ದೆದ್ದು ಕುಣಿದು, ದಣಿದು, ಅತ್ತು ಅರಚುವಂತೆ – ಆ ಕೊನೆಯ ಚೀಲವನ್ನು ತುಂಬುವಾಗ ಪೀಟರನು ಒಂದೊಂದು ನಾಣ್ಯವನ್ನು ಹೊಂದಿಸುವುದಕ್ಕೂ ಎಷ್ಟೋ ಬಳಲಿ ಬೆಂಡಾಗಿ ಹೋದನು. ಏನೇನು ಮಾಡಿದರೂ ಆ ಚೀಲವು ತುಂಬಿದರಲ್ಲವೆ? ತನ್ನಲ್ಲಿದ್ದುದೆಲ್ಲವನ್ನೂ ಹಿಂಡಿ ಹೀರಿದನು.; ಆದರೂ ಸಾಲದು; ಬಂಗಲೆಯ ಒಂದು ಪಕ್ಕದಲ್ಲಿ ಶೇಖರಿಸಿಟ್ಟಿದ್ದ ತೊಲೆಗಳನ್ನು ಮಾರಿದನು; ಹೆಂಚುಗಳನ್ನು ಮಾರಿದನು; ಕೊನೆಗೆ ಅದು—ಇದು ಎನ್ನದೆ ಕೈಗೆ ಸಿಕ್ಕಿದ್ದನೆಲ್ಲ ಮಾರಿಹಾಕಿದನು. ಉತ್ಪನ್ನವಾದ ನಾಣ್ಯಗಳನ್ನೆಲ್ಲ ಚೀಲದ ಒಡಲಲ್ಲಿ ಹಾಕಿದನು; ಆದರೂ ಅದು ತುಂಬಪ್ಪೊಳ್ಳದು. ಅವನ ಕಾಮಧೇನು 'ಇನ್ನು ಕರೆಯಲಾರೆ' ಎಂದು ಬಿಟ್ಟಿತು. ಪೀಟರನು ತಲೆಯಮೇಲೆ ಕೈಯಿಟ್ಟು ಕುಳಿತನು.

ಎಪ್ಪತ್ತನೆಯ ಚೀಲದ ಚಿಂತೆ ಒಂದೆಡೆ. ಸರಕಾರಕ್ಕೆ ಒಪ್ಪಿಸಬೇಕಾದ ವರದಿಯ ಚಿಂತೆ ಮತ್ತೊಂದೆಡೆ. ಯಾವುದು ಮುಂದು? ಯಾವುದು ಹಿಂದು? ವರದಿಯನ್ನು ಒಪ್ಪಿಸಿ ಚೀಲವನ್ನು ತುಂಬುವುದೇ? ಚೀಲವನ್ನು ತುಂಬಿ ನೆಲಮಾಳಿಗೆಯೊಳಗಿರಿಸಿ ತದನಂತರ ವರದಿಯನ್ನು ಒಪ್ಪಿಸುವುದೇ? ಪ್ರಬಲ ಶಕ್ತಿಯುಳ್ಳ ಪ್ರಜಾಪ್ರಭುತ್ವದ ಕ್ರಮಬದ್ಧ ಶಾಸನದಮೇಲೆ ಅವನು ಏಕಾಂಗಿಯಾಗಿ ಯುದ್ಧನಡೆಸಲು ನಿರ್ಧರಿಸಿದ್ದನಷ್ಟೆ. ಅವನೇ ಸೈನಿಕ; ಅವನೇ ಸೇನಾನಾಯಕ. ಅಸತ್ಯವೇ ಅವನ ಅಸ್ತ್ರ; ಸತ್ಯನಾಶವೇ ಅವನ

ಗುರಿ! ಹೊನ್ನಿನ ಹಂಬಲದಿಂದ ಉತ್ಪನ್ನವಾದ ಹೋರಾಟವು ಪ್ರಬಲತರ ವಾಯಿತು. ಮತ್ತೆ ಅದೇ ಪ್ರಶ್ನೆ ಅವನ ಮನಸ್ಸಿನಲ್ಲಿ; ಯಾವುದು ಮುಂದು?. ಯಾವುದು ಹಿಂದು? ಬಿಡಿಸಿಕೊಳ್ಳಲಾರದ ಬಲೆಯಲ್ಲಿ ಅವನು ಸಿಲುಕಿ ಬಿದ್ದನು. ನಿಲುಕದ ನಿರ್ಧಾರಕ್ಕಾಗಿ ಅವನು ಎದ್ದೆದ್ದು ಕುಣಿದಾಡಿದನು. ಎಷ್ಟೋಕಾಲ ಯೋಚಿಸಿದನಂತರ ಪೀಟರನೊಂದು ತೀರ್ಮಾನಕ್ಕೆ ಬಂದನು.

"ವಾಯಿದೆಯಲ್ಲಿ ಉಳಿದಿರುವುದು ಇನ್ನು ಮೂರೇ ದಿವಸ. ವರದಿಯನ್ನು ಕಳುಹಿಸಿಕೊಡಲು ನಿಧಾನಿಸಿದಷ್ಟೂ ಅಧಿಕಾರಿಗಳ ಸಂದೇಹವು ಅಧಿಕರಿಸೀತು. ಇದ್ದುದನ್ನೆಲ್ಲ ಬಚ್ಚಿಟ್ಟು ಏನೂ ಇಲ್ಲವೆಂದು ವರದಿಮಾಡಲೋಸುಗವೇ ನಾನಿಷ್ಟು ನಿಧಾನ ಮಾಡುತ್ತಿರುವೆನೆಂದು ಅಧಿಕಾರಿಗಳು ಊಹಿಸದೆ ಇರಲಾರರು. ಬಂಗಲೆ ಮತ್ತು ಅದಕ್ಕೆ ಕಲೆತಂತೆ ನೆಲ ಇವನ್ನುಳಿದು ನಗವಾಗಲಿ, ನಾಣ್ಯವಾಗಲಿ, ಸಾಲಪತ್ರಗಳಾಗಲಿ, ಬಡ್ಡಿ ಬರುವಳಿಗಳಾಗಲಿ ಯಾವುದೂ ಇಲ್ಲವೆಂದು ನಾನು ವರದಿ ಮಾಡುತ್ತೇನೆ. 'ಇದನ್ನು ವರದಿ ಮಾಡಲು ಐದೇ ನಿಮಿಷಗಳು ಸಾಕು. ಹಾಗೂ ಇದನ್ನು ಒಪ್ಪಿಸುವುದಕ್ಕೆ ಎರಡು ತಿಂಗಳ ದೀರ್ಘಕಾಲವೇಕೆ?' ಅವರು ಸಂದೇಹಪಡಬಹುದು. ಏನು ಮಾಡಲಿ? ಆ ದಿನ ನನ್ನಲ್ಲಿ ಬಂದುಹೋದ ಜೇಮ್ಸ್ ಅಧಿಕಾರಿಯನ್ನು ನಾನು ನಂಬಲಾರೆ. ಆತನೇ ಇತರ ಅಧಿಕಾರಿಗಳನ್ನು ತನ್ನೊಡನೆ ಕರೆತರಬಹುದು. ನನ್ನ ಬಂಗಲೆಯನ್ನು ಶೋಧಿಸಬಹುದು; ತೋಟವನ್ನೂ ಶೋಧಿಸಬಹುದು. ನೆಲಮಾಳಿಗೆಯನ್ನು ಕಂಡುಹಿಡಿಯಬಹುದು. 'ಅದರ ಬಾಗಿಲನ್ನು ತೆಗೆ; ಒಳಗಿರುವುದೇನು ತೋರಿಸು' ಎಂದು ಅಪ್ಪಣೆ ಮಾಡಬಹುದು. ಹಾಗೆ ಆಗುವುದಾದರೆ .......... ಆಗೇನು ಮಾಡಲಿ? ಮತ್ತೆ ಭ್ರಮೆ—ಚಿಂತೆ! ನನಗೆ ತೀವ್ರವಾದ ವ್ಯಾಧಿಯು ಹಿಡಿದಂತಾಗಿದೆ. ಇರಲಿ; ನನಗಿರುವುದು ಬಂಗಲೆಯೊಂದೇ. ಅದಕ್ಕೆ ಸೇರಿದಂತಿರುವ ತೋಟದಲ್ಲಿ ಹಣ್ಣುಹಂಪಲುಗಳನ್ನು ಕಳ್ಳಕಾಕರರು ಕೊಳ್ಳೆ ಹೊಡೆದು ನನಗೆ ಅಪಾರ ನಷ್ಟವುಂಟಾಗಿದೆ. ಅದುದರಿಂದ ನನಗೆ ಆದಾಯವೇ ಇಲ್ಲ. ಒಂದಕ್ಕೆ ಎರಡೇಕೆ? ಒಂದು ತೆರಿಗೆಯನ್ನು ಕೊಡಲೂ ನಾನು ಅಸಮರ್ಥನಾಗಿದ್ದೇನೆ. ಘನ ಸರಕಾರದವರು ಕೃಪೆತೋರಿ ತೆರಿಗೆಯನ್ನು ಮನ್ನ ಮಾಡಿ

ಮುದುಕನಾದ ನನ್ನ ಮನಸ್ಸನ್ನು ಶಾಂತಿಗೊಳಿಸಬೇಕೆಂದು ವರದಿಯೊಂದಿಗೆ ಅತಿ ದೈನ್ಯವಾದ—ವಿನಯದಿಂದ ಕೂಡಿದ-ಪ್ರತ್ಯೇಕ ಮನವಿಯೊಂದನ್ನು ಮುಟ್ಟಿಸಿಯೇ ಬಿಡುತ್ತೇನೆ. ಆದುದು ಆಗಿ ಹೋಗಲಿ. ಹೇಗೂ ಅಧಿಕಾರಿ ಪರಿವಾರದವರು ನಾನು ಕಳುಹಿಸಿಕೊಟ್ಟ ವ ರ ದಿ ಯ ಸತ್ಯಾಂಶಗಳನ್ನು ಪರಿಶೋಧಿಸಲು ಇಲ್ಲಿಗೆ ಬರಬಹುದು-ಸಂದೇಹವೇಕೆ ? ಬಂದೇ ಬರುತ್ತಾರೆ. ಆ ವೇಳೆಗೆ ನನ್ನ ಎಪ್ಪತ್ತನೆಯ ಚೀಲವು ತುಂಬದೆ ಉ ಳಿ ಯ ಬ ಹು ದು. ಅದನ್ನು ಕಂಡು ಹಿಡಿದು 'ನನ್ನಲ್ಲೇನೂ ಇಲ್ಲ ಎಂದು ಇದೆ ವರದಿಯಲ್ಲಿ! ಇದು ಯಾವುದು ?' ಎಂದು ಕೇಳಬಹುದು. ಕೇಳಲಿ; ನಾನೇನೂ ಎದೆ ಗುಂದುವುದಿಲ್ಲ; ಬದಲಾಗಿ ಹೇಳುತ್ತೇನೆ :

—ನಾನು ಮುದುಕ; ನನ್ನ ಕಾಲ ನೆಚ್ಚಿಕೆಯಿಲ್ಲ; ಇಂದೋ ನಾಳೆಯೋ, ಮರುವರ್ಷವೋ ಸಾಯತಕ್ಕವನು. ನಾನು ಸತ್ತನಂತರ ನನ್ನನ್ನು ವಿಧ್ಯುಕ್ತ ವಾಗಿ ಹೂಳುವುದಕ್ಕಾಗಿ — ಮತ್ತು ಸಾಯುವುದಕ್ಕೆ ಮುನ್ನ ನನ್ನ ಉಳಿದ ಜೀವಿತದ ವ್ರಯಕ್ಕಾಗಿ—ನನ್ನನಂತರ ನನ್ನ ಆತ್ಮಶಾಂತಿಯನ್ನು ಬ ಯ ಸಿ ಬಡಬಗ್ಗರಿಗೆ ದಾನಮಾಡುವುದಕ್ಕಾಗಿ ಎತ್ತಿಟ್ಟಿರುವ ಹಣ ಇದು. ಹೀಗೆಂದು ಹೇಳಿಬಿಟ್ಟರಾಯಿತು. ಅದನ್ನೆಲ್ಲ ಕೇಳಿಕೊಂಡಾರು ; ಕೇಳಿ ಒಪ್ಪಿಕೊಂಡಾರು; ಒಪ್ಪಿಕೊಳ್ಳದೆ ಏನು ಮಾಡುತ್ತಾರೆ? ನನ್ನಂತಹ ಮುದುಕನ ಮೇಲೆ ಮತ್ಸರ ತೋರಲಾರರು. 'ಸಾಯುವ ಮುದುಕ ಇವನು; ಹೋಗಿ ಹೋಗಿ ಇವನು ಸುಳ್ಳು ಹೇಳಿಯಾನೇ ?' ಎಂದಂದುಕೊಂಡಾರು. 'ಹಾಗೂ ವಂಚನೆ ಯಿಂದ ಅವನೇನನ್ನಾದರೂ ಬಚ್ಚಿಟ್ಟಿದ್ದರೆ ಇಂದಲ್ಲ ನಾಳೆ—ಅವನು ಸತ್ತ ನಂತರ—ಅವನ ಸ್ವತ್ತು ಸರಕಾರಕ್ಕೆ ಸೇರುತ್ತದೆ' ಎಂದು ಸುಮ್ಮನಾದಾರು. ಇದರ ಮೇಲೆ ಅವರೇನಾದರೂ ಹಠ ಹಿಡಿದು ತೊಂದರೆಮಾಡುವುದಕ್ಕೆ ಕಾಲು ಕೆರೆದು ನಿಂತರೆ ಗೊತ್ತೇ ಇದೆ. ಸತ್ತನಂತರ ಮಾಡುವ ಧರ್ಮವನ್ನು ಈಗಲೇ ಮಾಡಿದರೆ ಬೇಡವೆನ್ನುತ್ತದೆಯೆ ? ಅಂದ ಹಾಗೆ ಬ ದು ಕಿ ದೆ ; ಇದಕ್ಕೆ 'ಎಪ್ಪತ್ತು' ಎಂದು ಅಂಕಿಯನ್ನು ಬರೆಯಲಿಲ್ಲ. ನೆಲಮಾಳಿಗೆ ಯೊಳಗಿಡುವಾಗ ಬರೆದುಕೊಂಡರಾಯಿತು. ಮರೆತು ಬರೆದಿದ್ದರೆ ಅವರು ಅದನ್ನು ನೋಡಿ ಖಂಡಿತ ನನ್ನ ಗುಟ್ಟನ್ನು ಹೊರಗೆಡುವುತ್ತಿದ್ದರು. 'ಇದರ

ಮೇಲೆ 'ಎಪ್ಪತ್ತು' ಎಂದು ಬರೆದಿದೆಯಲ್ಲಾ. ಇನ್ನೂ ಅರುವತ್ತೊಂಭತ್ತು ಚೀಲಗಳು ಎಲ್ಲಿವೆ? ತೋರಿಸು ಎಂದೆಲ್ಲ ವರಾತು ಮಾಡಿಯಾರು.

ಇರಲಿ: ನಾನೇನೆನ್ನುತ್ತಿದ್ದೆ? ಧರ್ಮ! ಸತ್ತಮೇಲೆ ಧರ್ಮ! ಆ ಧರ್ಮ ವನ್ನು ಈಗಲೇ ಮಾಡಿದರಾಯಿತು. ಈ ಚೀಲದಲ್ಲಿರುವುದರಲ್ಲಿ ಹಿಡಿಹೊನ್ನು ಹಿಡಿದುಕೊಂಡು ಹೋಗಿ. ನನ್ನ ಜೀವನಕ್ಕೆ ಸಾಲದೆ ಹೋದರೆ ಉಪವಾಸ ದಿಂದ ಸಾಯುತ್ತೇನೆ' ಎಂದುಬಿಟ್ಟರಾಯಿತು. 'ಛೀ! ಮುದುಕನ ಹಣ ವನ್ನು ಮುಟ್ಟಬಾರದು; ಇದೆಲ್ಲಿಯ ರಗಳೆ?' ಎಂದು ಅವರೇ ಮರುಕ ಗೊಂಡಾರು.

ಹೀಗೆಂದು ಆಲೋಚಿಸಿ ತಾನು ತೀರ್ಮಾನಿಸಿದ್ದಂತೆಯೇ ಪೀಟರನು ಸರಕಾರಕ್ಕೆ ವಾಯಿದೆಯೊಳಗೆ ವರದಿಯನ್ನು ಒಪ್ಪಿಸಿಯೇ ಬಿಟ್ಟನು. ಅದರನಂತರ ತಡಮಾಡದೆ ತನ್ನ ಎಪ್ಪತ್ತನೆಯ ಚೀಲವನ್ನು ಅತ್ಯಂತ ತವಕ ದಿಂದ ತುಂಬತೊಡಗಿದನು.

ಆಗವನಿಗೆ ಮತ್ತೊಂದು ಸಮಸ್ಯೆಯು ತಲೆದೋರಿತು.

"ಹೌದು; ಎಪ್ಪತ್ತು ಚೀಲಗಳು ನೆಲಮಾಳಿಗೆಯಲ್ಲಿ ಸೇರಿದನಂತರ ...... ...... ನನ್ನ ವ್ರಯಕ್ಕೆ ಹಣ? ...... ...... ತೋಟವಿದೆ; ಹಣ್ಣುಹಂಪಲು ಮಾರಿದರೆ ...... ...... ಕಾಯಿಪಲ್ಯ ಮಾರಿದರೆ ಹಣ ಬರುವುದಿಲ್ಲವೇ? ನನ್ನೊಬ್ಬನಿಗೆ ಎಷ್ಟು ಬೇಕು? ವಾರಕ್ಕೊಂದು ಹೊನ್ನಿದ್ದರೆ ಬೇಕಾದಷ್ಟು ಆಯಿತು. ಮರೆತಿದ್ದೆನಲ್ಲ. ನನ್ನ ಮಂಚದ ಕೆಳಗೆ, ಚೊಂಬಿನಲ್ಲಿ ಹೂತಿಟ್ಟಿರುವ ಆರುನೂರು ಹೊನ್ನುಗಳು ಸಾಲದೇ? ...... ...... ಹಾಸಿಗೆಯ ಹತ್ತಿಯ ಪದರಗಳಲ್ಲಿರುವುದು—ಬೇಕಾದಷ್ಟಾಯಿತು. ಅವೆಲ್ಲ ಆಪತ್ಕಾಲದ ನಿಧಿ! ಇದುವರೆಗೂ ಮುಟ್ಟಲಿಲ್ಲ. ಮುಂದೆಯೂ ಮುಟ್ಟಬೇಕಾಗಿರದು ...... ನೋಡೋಣ."

ಇದುವರೆಗೂ ಎಲ್ಲವೂ ಅವನೆಣಿಸಿದಂತೆ. ಇನ್ನು ಮುಂದೆ?

ಪ್ರಕರಣ ೧೬.

## ಕಲ್ಲಿ ಸೆಜ್ಜೆ ಪರಾರು ?

ಕಳೆದ ಹಲವಾರು ದಿವಸಗಳಿಂದ ಪ್ರತಿರಾತ್ರಿಯೂ ಪೀಟರನು ನೆಲ ಮಾಳಿಗೆಯನ್ನು ಹೊಕ್ಕು, ಅದರೊಳಗೆ ತಾನು ಅತ್ಯಂತ ಪ್ರೇಮದಿಂದ ಇರಿಸಿ ಬಂದಿದ್ದ ಹಣದ ಚೀಲಗಳನ್ನು ಎಣಿಸುತ್ತಿದ್ದನು; ಅವುಗಳಿಗೆ ಮಾಡಿದ್ದ ಮೊಹರು ಭದ್ರವಾಗಿದೆಯೇ ಎಂದು ಪರೀಕ್ಷಿಸಿ ನೋಡುತ್ತಿದ್ದನು. ವರದಿಯನ್ನು ಸಲ್ಲಿಸಿದನಂತರ ಅದರ ಮೂರನೆಯ ದಿನವದು. ನೆಲಮಾಳಿಗೆಯ ಮೇಲಕ್ಕೆ ಬಂದವನೇ ಬಾಗಿಲನ್ನು ಮುಚ್ಚಿ ಪೀಟರನು ಅದರ ಮೇಲೆ ಕಲ್ಲನ್ನು ಎಳೆದನು. ಅಷ್ಟರಲ್ಲಿ ಅವನಿಗೊಂದು ಸಂದೇಹವು ಹುಟ್ಟಿತು:

" ನಾನು ನೆಲಮಾಳಿಗೆಯೊಳಗೆ ಇಳಿದು ಹೋಗುವಾಗ ಯಾರಾದರೂ ಈ ಮರದ ಮೇಲೆ ಹತ್ತಿ ಕುಳಿತಿದ್ದಿರಬಹುದೇ ? ನನ್ನನ್ನು ಹೊಂಚುಹಾಕು ತ್ತಿರಬಹುದೇ ? ಏತಕ್ಕಾಗಿ ಇರಬಾರದು ? ಹಾಗಾದರೆ ಯಾರು ? ...... ಸರಕಾರದ ಗುಪ್ತಚಾರರು ......ಅಥವಾ, ದರೋಡೆಕಾರರು ...... ಅಥವಾ, ಸ್ಯಾಮ್ಯುಯಲ್ ! ...... ಛೇ! ಸ್ಯಾಮ್ಯುಯಲ್ ಅಂತಹವನಲ್ಲ ...... ಅವನಿರಲಾರನು. ಅವನು ಸತ್ಯವಂತ; ಸ್ವಾಮಿನಿಷ್ಠ ! ಹಾಗಾದರೆ ...... ? ನೆಲಮಾಳಿಗೆಯನ್ನು ಕಟ್ಟಿದ ಕೆಲಸಗಾರರಲ್ಲಿ ಯಾರಾದರೂ........ಹೌದು; 'ಒಬ್ಬನ ಜೀವನಕ್ಕೆ ಗೋಧಿ ತುಂಬುವುದಕ್ಕೆ ಇಷ್ಟೊಂದು ದೊಡ್ಡ ಕಣಜ ಏತಕ್ಕೆ ?' ಎಂದು ಸ್ಯಾಮ್ಯುಯಲ್ಲನನ್ನು ಕೇಳಿದನಂತಲ್ಲ .... ಆ ಕಪಟಿ! ...... ..... ಆ ಮಾಯಾವಿ! ಅವನನ್ನು ನಾನು ನಂಬಲಾರೆ.'

ಪೀಟರಿನ ಸಂದೇಹಕ್ಕೆ ಇನ್ನೂ ಸರಿಯಾದ ಸ್ವರೂಪವು ಉಂಟಾಗಿರಲಿಲ್ಲ. ಅಷ್ಟರಲ್ಲೇ .......... ಕಾಕತಾಳನ್ಯಾಯವಾಗಿ ಅವನು ನಿಂತಿದ್ದ ಸ್ಥಳದಿಂದ ಅನತಿದೂರದಲ್ಲೆ—ಮರದ ಮೇಲಿಂದ ಧೊಪ್ಪೆಂದು ಒಂದು ಕಲ್ಲು ಬಿದ್ದಿತು. ದೈವಾಧೀನದಿಂದ ಅದು ಅವನ ತಲೆಯಮೇಲೆ ಬೀಳಲಿಲ್ಲ. ಒಂದೆರಡು ಕ್ಷಣಗಳು ವ್ಯತ್ಯಾಸವಾಗಿದ್ದರೆ ತಾನಿದ್ದ ಸ್ಥಳದಿಂದ ಪೀಟರನೇನಾದರೂ ಮುಂದುವರೆದಿದ್ದರೆ ಆ ಕಲ್ಲು ಅವನ ಮೇಲೆ ಬೀಳುತ್ತಿತ್ತು. ಆದರೆ ಕಲ್ಲು ತನ್ನ ತಲೆಯ ಮೇಲೆ ಬೀಳಲಿಲ್ಲವಲ್ಲ ಎಂದು ಯೋಚಿಸಿ ಅವನು ಸಂತಸಗೊಳ್ಳಲಿಲ್ಲ. ಅವನ ಆಗಿನ ಚಿತ್ತವೃತ್ತಿಯು ಬೇರಾವುದೋ ವಿಚಾರದಲ್ಲಿ ಮಗ್ನವಾಗಿದ್ದಿತು. ಅವನು ಬೆದರಿದನು; ಕ.....ಲ್ಲೆ.....ಸೆ.....ದ.....ವ.....ರಾ.....ರು ? ಪೀಟರನು ವಿಚಾರ ವಾಹಿನಿಯಲ್ಲಿ ಮುಗ್ನನಾದನು.

"ಮರದ ಮೇಲೆ ಅವಿತುಕೊಂಡಿರುವವರಾರು ?" ಅವನು ಆಲೋಚಿಸಿದನು: "ಡೇನಿಯಲ್ಲನಿರಬಹುದೇ? ಛೀ! ಅವನು ಅಂಜುಬುರುಕ; ಮೇಲಾಗಿ ಕಣ್ಣು ಸರಿಯಾಗಿ ಕಾಣಿಸದವ; ಕತ್ತಲಾದ ಮೇಲೆ ಹೊರಗೆ ಅಡ್ಡಾಡದವ; ಇದೊಂದು ದೊಡ್ಡ ಮರ; ಇದರ ಮೇಲೆ ಹತ್ತಿಯಾನೇ? ಹಾಗಾದರೆ ..... .... ? ಸ್ಯಾಮ್ಯುಯಲ್ಲನಿರಬಹುದೇ? ಥೂ! ನನ್ನ ಹಾಳು ಮನಸ್ಸೇ! ಸ್ಯಾಮ್ಯುಯಲ್ಲನು ಸತ್ಯವಂತ .... ಹಾಗೆಂದು ಈಗೊಂದರಕ್ಷಣದ ಮುಂದೆ ತಾನೇ ನಾನು ತೀರ್ಮಾನಿಸಿಕೊಳ್ಳಲಿಲ್ಲವೆ? ಅವನು ವಂಚಕನಲ್ಲ; ಅವನಿಗೆ ನಾನು ಬಹುಮಾನ ಬೇರೆ ಕೊಟ್ಟಿದ್ದೇನೆ. ಈಗೇಕೆ ಮತ್ತೆ ಅವನ ಮೇಲೆ ಸಂದೇಹ? ಅವನು ರಹಸ್ಯವನ್ನು ರಕ್ಷಿಸಿಯಾನು. ಮನಸ್ಸು ...... ನನ್ನ ಮನಸ್ಸೇ ನನಗೆ ಶತ್ರುವಾಗತೊಡಗಿದೆ..........ನನ್ನನ್ನು ಶತಮೂರ್ಖನನ್ನಾಗಿ ಮಾಡತೊಡಗಿದೆ..........ಇರಬಹುದು; ಅವನಿರಬಹುದು. ಆದರೆ ಅವನಿಗೂ ಬಹುಮಾನ ಕೊಟ್ಟಿರುವೆನಲ್ಲವೆ? ಬೇಕಾಗಿದ್ದಲ್ಲಿ ಇನ್ನಷ್ಟು ಕೇಳಿ ತೆಗೆದುಕೊಂಡು ಬಾಯಿಮುಚ್ಚಿಕೊಂಡಿರುವುದನ್ನು ಅವನು ಕಲಿತುಕೊಳ್ಳಬಹುದಾಗಿತ್ತು. ಆದರೆ ಅವನೇಕೆ ಹಾಗೆ ಮಾಡಲಿಲ್ಲ? ನಿಜ; ಹೆಸರಿಗೆ ಅದು ಬಹುಮಾನ. ಆದರೆ ವಾಸ್ತವವಾಗಿಯೂ ನಾನದನ್ನು ಅವನಿಗೆ —

ಅವನಂತಹವರಿಗೆ—ಕೊಟ್ಟುದೇತಕ್ಕೆ? ......... ನನ್ನ ರಹಸ್ಯ ಸಂರಕ್ಷಣೆಗೆ! ಆದುದರಿಂದ ಅದು ಲಂಚವೇ ಹೊರತು ಬಹುಮಾನವಲ್ಲ. ತಾನು ಪಡೆದುದು ಲಂಚ ಎಂದು ಅವನು ಬಲ್ಲನು. ಲಂಚಕೊಡುವ—ಕೊಟ್ಟು ಬಾಯಿ ಮುಚ್ಚಿಸುವ—ನನ್ನನ್ನು ಹಿಗ್ಗಾಮುಗ್ಗಾ ಹಿಡಿದು ಎಳೆದಾಡಿ, ಹೆಣಗಾಡಿಸಿ, ಹೆಚ್ಚು ಹೆಚ್ಚಾಗಿ ನನ್ನಿಂದ ಹಣವನ್ನು ಹೀರುವುದರಲ್ಲಿ ಅವನಿಗೆ ಆಸೆಯುಂಟಾಗಿರಬಹುದು. ಲಂಚಕೋರರು ದುರಾಸೆಗಾರರು! ಈ ಶಠನೂ ಅಂತಹವರಲ್ಲಿ ಒಬ್ಬ. ಲಂಚಕೋರನಿಗೆ ನೀತಿ ಎಲ್ಲಿಂದ ಬಂದೀತು? ಕಸಿದುಕೊಂಡ ಲಂಚದಲ್ಲೆ ಕತ್ತಿಯನ್ನು ಕೊಂಡು ಕೊಟ್ಟವರ ಕೊರಳನ್ನು ಕುಯ್ದುಹಾಕಲು ಹಿಂತೆಗೆಯದ ಕೆಟ್ಟ ಮನುಷ್ಯ ಆವನು! ಬಹುಮಾನ (ಲಂಚ?) ಪಡೆದವರೆಲ್ಲ ನಂಬಿಕೆಯಿಂದ ನಡೆದುಕೊಳ್ಳುವರೆಂಬ ನೆಚ್ಚಿಕೆ ಏನು? ಅವರಲ್ಲಿ ಹಲವರು ಒಳ್ಳೆಯವರಿರಬಹುದು. ಆದರೆ ಉಳಿದವರು ...... ? ಅವರು ಹೇಳಿಕೊಂಡು ತಿರುಗಿಯಾರು:

'ಸುಮ್ಮನೆ ಕೊಟ್ಟನೆ ಬಹುಮಾನವನ್ನು? ಬಾಯಿ ಮುಚ್ಚುವುದಕ್ಕೆ ಕೊಟ್ಟಿದ್ದಾನೆ. ಮುಚ್ಚಿಸಿದ ಬಾಯಿ ಬಿಚ್ಚಿದರೆ ತೀರಿತು. ಆಗ ಅವನು ಮತ್ತಷ್ಟು ಕನಕವನ್ನು ಕಕ್ಕಿಯಾನು ..... ಒಂದಕ್ಕೆ ನಾಲ್ಕು ..... ಒಂದಕ್ಕೆ ಹತ್ತು ಕಕ್ಕಿಯಾನು. ಕಕ್ಕಲಿ, ಕಕ್ಕಿದ್ದೆಲ್ಲ ನಮಗೆ ದಕ್ಕಿದಂತೆಯೇ!' ವಂಚಕಿಗಳು ಹೀಗೆಂದು ಅಂದುಕೊಂಡಾರು. ಕೆಲಸಗಾರರೆಲ್ಲ ಹಗಲಿನಲ್ಲಿ ಸಭ್ಯರಂತೆ ನಟಿಸಬಹುದು; ದುಡಿತದ ಸೋಗನ್ನು ಹಾಕಿ ದುಡ್ಡನ್ನು ಹೊಡೆದು ಬಿಡುವುದಕ್ಕೆ ಹೊಂಚು ಹಾಕಬಹುದು; ಅಥವಾ, ದರೋಡೆಕಾರರೊಡನೆ ಬೆರೆಯಬಹುದು? ಹಂಚಿಕೆಯನ್ನು ಹೂಡಿ ಆ ಶಠನೇಕೆ ದರೋಡೆಕಾರರನ್ನು ಕರೆತಂದು ಸಮಯವನ್ನು ಸಾಧಿಸುತ್ತ ಈ ಮರದ ಮೇಲೆ ಅವಿತು ಕುಳಿತಿರ ಬಾರದು? ಊಹುಂ! ಇರಲಾರದು. ಅಷ್ಟೊಂದು ಜನರು ಮರದ ಮೇಲೆ ಈ ನಿಶಿರಾತ್ರಿಯಲ್ಲಿ ಹತ್ತಿದರು ಎನ್ನೋಣ. ಆಗ ಗೂಡುಗಳಲ್ಲಿ ಮರಿಗ ಳೊಡನೆ ನೆಮ್ಮದಿಯಾಗಿ ಮಲಗಿ ನಿದ್ರಿಸುವ ಕಾಗೆಗಳು ಭಯಗೊಂಡು ಎಚ್ಚರ ಗೊಂಡಾವು; 'ಕಾ—ಕಾ' ಎನ್ನುತ್ತ ಹಾಹಾಕಾರ ಎಬ್ಬಿಸಿ ಹಾರಾಡಿ

ಬಿಟ್ಟಾವು. ಎಲ್ಲ ಕಾಗೆಗಳೂ ನಿಶ್ಯಬ್ದವಾಗಿ ನಿದ್ರಿಸುತ್ತವೆ! ಅಥವಾ, ಅಧಿಕಾರಿ ಇರಬಹುದೇ? ...... ಜೇಮ್ಸ್! ಗುಪ್ತಚಾರರನ್ನು ಕರೆತಂದಿರ ಬಹುದೇ? ಅವರನ್ನೆಲ್ಲ ಆತನು ಮರದ ಮೇಲೆ ಕುಳ್ಳಿರಿಸಿ ನೆಲವಾಳಿಗೆಯ ಬಳಿ ನಡೆಯುವುದನ್ನೆಲ್ಲ ಪರೋಕ್ಷವಾಗಿ ನೋಡುತ್ತಿರಬಹುದೇ? ...... .... ಇರಬಹುದೇ? ಇದ್ದರೂ ಇರಬಹುದು ...... ...... ಅದೋ! ಮತ್ತೆ ಸಂದೇಹ .... .... ಇರಲಾರದು; ಅಧಿಕಾರಿಗಳು! ........ಅವರ ಕೈಯಲ್ಲಿ ಅಧಿಕಾರ ಇದೆ. ಅವರು ಎದುರೆದುರಿಗೆ ಬಂದು ಬೇಕಾದ್ದನ್ನು ಬೇಕಾದಂತೆ ಪರಿಶೋಧಿಸಬಹುದು? ಹಾಗಿರುವಲ್ಲಿ ಅವರೇಕೆ ಮರದ ಮೇಲೆ ಅಡಗಿ ಕುಳಿತಿರಬೇಕು. .......... ಹಾಗಾದರೆ? ನನ್ನ ವೈರಿಗಳು ಇಂತಹವರೇ ಎಂದು ನಾನು ಹೇಗೆ ತಾನೇ ನಿರ್ಧರಿಸಲು ಸಾಧ್ಯವಾದೀತು?"

ಪೀಟರನು ದಿಗ್ಭ್ರಾಂತನಾದನು. ಕಂಗೆಟ್ಟು ಕಳವಳಗೊಂಡನು. ಇಂತಹುದನ್ನು ಮಾಡಬೇಕೆಂದೇ ಅವನಿಗೆ ಹೊಳೆಯುಲಿಲ್ಲ. ಅವನ ಮನಸ್ಸು ಮತ್ತೆ ಯೋಚನೆಯಲ್ಲಿ ಮುಳುಗಿತು. ಅವನೆದೆ ಭಯದಿಂದ ಹೊಡೆದು ಕೊಳ್ಳಲಾರಂಭಿಸಿತು :

"ಮರದ ಮೇಲೆ ಒಬ್ಬನಿರಹುದು; ಹತ್ತಾರು ಜನರಿರಬಹುದು; ಕತ್ತಿಯನ್ನು ಹಿರಿದು ಬಂದಿರಬಹುದು; ಕೆಳಗಿಳಿದು ಬಂದು ಮುತ್ತಿಗೆ ಹಾಕ ಬಹುದು; ಬಾಯಿಗೆ ಬಟ್ಟೆ ತುರುಕಬಹುದು; ಬೆನ್ನು ಮೂಳೆ ಮುರಿಯ ಬಹುದು; ಮೈಯೆಲ್ಲ ಚುಚ್ಚಿ ಚುಚ್ಚಿ ರಣಮಾಡಬಹುದು. ಕಂಡವರಾರು? ನನ್ನ ಕಿಸೆಯಲ್ಲಿರುವ ಬೀಗದ ಕೈಯನ್ನು ಕಿತ್ತುಕೊಂಡರೆ? ಹಣಕ್ಕೆ ಹಣವೂ ಹೋಯಿತು; ಪ್ರಾಣಕ್ಕೆ ಪ್ರಾಣವೂ ಹೋಯಿತು—ಎಂದಂತಾಗುತ್ತದೆ. ಹಾಯ್! ಹಾಯ್! ಸರ್ವನಾಶವಾಯಿತು. ಎಲ್ಲರನ್ನೂ ಬಿಟ್ಟು ನನ್ನ ಮೇಲೆ ಇವರಿಗೇನು ಕಣ್ಣು? ಈಗೇನು ಮಾಡಲಿ? 'ಓಡು' ಎಂದಿತು ಅವನ ಬುದ್ಧಿ. 'ನಿಲ್ಲು' ಎಂದು ತಡೆಗಟ್ಟಿತು ಅವನ ಮನಸ್ಸು. 'ಇಷ್ಟೊಂದು ನಿಧಿಯನ್ನು ಕಳ್ಳರ ಬಾಯಿಗೆ ತುತ್ತಾಗಿಸಿ ಓಡುವೆಯಾ? ಹಾಗಾದರೆ ನೀನಿದನ್ನು ಶೇಖರಿಸಿದ ಕಾರಣ?'

ಪೀಟರನಿಗೆ ಉಭಯಸಂಕಟವು ಪ್ರಾಪ್ತವಾಯಿತು. ತನ್ನ ಪ್ರಾಣವನ್ನು ಸಂರಕ್ಷಿಸಿಕೊಳ್ಳಬೇಕೆ? ಅಥವಾ, ಅದನ್ನು ಬಲಿಗೊಟ್ಟಾದರೂ ಆ ಅಪಾರ ಹಣವನ್ನು ರಕ್ಷಿಸಿಕೊಳ್ಳಬೇಕೆ? ಯಾವುದನ್ನು? ಯಾವುದು ಹಿರಿದಾದುದು? ಪ್ರಾಣವೇ? ಹಣವೇ? ಪ್ರಾಣವಿದ್ದು ಹಣವೇ? ಪ್ರಾಣ ಹೋಗಿ ಹಣವೇ? ಹಣವೇ ಪ್ರಾಣ. ಹಣವು ಹೋದರೆ ಅವನ ಪ್ರಾಣವೂ ಹೋದಂತೆಯೇ. ಹಣವನ್ನುಳಿಸಿದರೆ ಪ್ರಾಣವೂ ಉಳಿದೀತು. ಹಣವೂ ಪ್ರಾಣವೂ ಎರಡೂ ಉಳಿದರೆ ಅವನ ಇಷ್ಟಾರ್ಥ ಸಿದ್ಧಿಯಾದ ಹಾಗೆಯೇ. 'ಏನು ಯೋಚನೆ ಪೀಟರ್? ಏಕಾಂಗಿಯಾಗಿ ರಣವೀರ ನಂತೆ ಎದೆಯನ್ನೊಡ್ಡಿ, ಆಸ್ತಿಗೆ ಹಿಂಜರಿಯದೆ, ಕೊನೆತನಕ ಹಣಕ್ಕಾಗಿ ಹೋರಾಡುವೆಯಾ?' ಅವನ ಮನಸ್ಸು ಕೇಳಿತು ಮತ್ತೆ. ಮರುಕ್ಷಣದಲ್ಲೇ ಅವನಿಗೆ ಹೊಳೆಯಿತು. 'ನನ್ನ ಹಣವೇ ನನಗೆ ಮೃತ್ಯುವಾಗತೊಡಗಿದೆ!' ಅವನು ಅಳವಿಲ್ಲದ ಕಳವಳಕ್ಕೀಡಾದನು.

"ಮರದ ಮೇಲಿಂದ ಕಲ್ಲು ಬೀಳುವುದನ್ನು ಕಂಡೆ. ಕಂಡನಂತರವೂ ಇದ್ದ ಸ್ಥಳದಿಂದ ಓಡಿಹೋಗಲೇ? ಆಗ ಮೇಲಿರುವವರು ನಾನು ಹೇಡಿ ಎಂದರಿತು, ಕೆಳಗಿಳಿದು ಬಂದು, ಬಿಡದೆ ಅಟ್ಟಿ, ಹಿಡಿದು ಕಟ್ಟಿ, ಹೊಡೆಯದೆ ಬಿಡುವರೇ? ಕತ್ತಿಯ ಕೂರಲಗನ್ನು ನನ್ನೆದೆಯ ಮೇಲೆ ತಾಕಿಸಿ, ಕಿಸೆಯಲ್ಲಿ ಕೈಹಾಕಿ, ಕೀಲಿಯನ್ನು ನನ್ನ ಕಣ್ಣೆದುರಿಗೆ ಕಸಿದುಕೊಳ್ಳದೆ ಬಿಟ್ಟಾರೇ?

"ಮರದಮೇಲೆ ಕುಳಿತಿರುವವರು—ಹೆಗಲಮೇಲೆ ಹಣದ ಚೀಲವನ್ನು ಹೊತ್ತು ನಾನು ನೆಲಮಾಳಿಗೆಯೊಳಗೆ ಇಳಿದುದು — ಬರಿಗೈಯಲ್ಲಿ ಮೇಲಕ್ಕೆ ಬಂದುದು ಎಲ್ಲವನ್ನೂ ನೋಡಿಯೇ ಇರುತ್ತಾರೆ. ಅವರೀಗ ಸುಮ್ಮನಿರುವರೇ? ಮರದ ಮೇಲಿಂದ ಕೆಳಗಿಳಿದು ಬಂದಾರು. ನಾನು ಓಡಿಹೋದರೂ ಅವರಿಗೆ ಚಿಂತೆಯಿಲ್ಲ. ದೊಡ್ಡ ಕಲ್ಲುಗಳಿಂದ ಬಾಗಿಲನ್ನು ಜಜ್ಜಿ ಜಜ್ಜಿ ಭೇದಿಸಿಯಾರು. ಒಳಹೊಕ್ಕು ಹಣದ ಚೀಲಗಳನ್ನು ಎಗರಿಸಿಬಿಟ್ಟಾರು. ಛೀ! ನಾನೆಂತಹ ಮೂರ್ಖ! ನಾನೇತಕ್ಕಾದರೂ ಈ ನೆಲಮಾಳಿಗೆಯನ್ನು ಈ ಮರದ ಕೆಳಗೆ ಕಟ್ಟಿಸಬೇಕಾಗಿತ್ತೋ ಕಾಣೆ. ಕೂಡದಾಗಿದ್ದಿತೇ? ಅದು ಹೇಗೆ? ಹಾಗಾದರೆ

ನೆಲಮಾಳಿಗೆಗೆ ಮರೆ ? .........ಬೇಡವೇ ? ಥೂ ! ನನ್ನ ಬುದ್ಧಿಗೆ ಕೇಡುಗಾಲ ಬಂದಂತಾಗಿದೆ. ಒಮ್ಮೆ ಬೇಕು .........ಒಮ್ಮೆ ಬೇಡ. ಒಮ್ಮೆ ಉತ್ತಮವೆಂದು ಹೊಳೆದ ಯೋಚನೆ ಮತ್ತೊಮ್ಮೆ ಕಂಟಕವಾಗಿ ತೋರತೊಡಗುತ್ತದೆ. ಸತ್ಯವನ್ನು ಮುಚ್ಚುವುದೂ ಸಾಕು ; ಈ ತೆರನೆ ನಿಮಿಷನಿಮಿಷಕ್ಕೊ ನೊಂದು ನರಳಿ ಸಾಯುವುದೂ ಸಾಕು. ”

ಪೀಟರನಿಗೆ ತಡೆಯಲಾರದ ಭಯವೂ ಬೇಸರವೂ ಉಂಟಾಯಿತು; ಯೋಚಿಸುತ್ತ ಯೋಚಿಸುತ್ತ ಅವನು ನಿಂತಲ್ಲೆ ನಿಂತುಬಿಟ್ಟ. ಹತ್ತು ನಿಮಿಷ ಗಳಕಾಲ ನಿಂತಲ್ಲೆ ಕದಲದೆ ನಿಂತಿದ್ದ. ಆದರೆ ಆ ಕಾಲದಲ್ಲಿ ಮತ್ತಾವ ಸದ್ದೂ ಅವನ ಕಿವಿಯಲ್ಲಿ ಬೀಳಲಿಲ್ಲ. ಅವರೇನು ? ಸುತ್ತಲೂ ಕಗ್ಗತ್ತಲೆ ಕವಿದಿದೆ. ಆ ಗಾಢಾಂಧಕಾರದಲ್ಲಿ ಹತ್ತಡಿ ದೂರದಲ್ಲಿರುವುದೂ ಕಣ್ಣಿಗೆ ಕಾಣಿಸು ವಂತಿರಲಿಲ್ಲ. ಆದರೆ ಹಣತೆಯನ್ನು ಹಿಡಿದಿದ್ದ ಅವನನ್ನು ಮಾತ್ರ ಅದರ ಕಿರುಬೆಳಕಿನಲ್ಲಿ ಯಾರು ಬೇಕಾದರೂ ನೋಡಬಹುದಾಗಿದ್ದಿತು. ಆ ಸನ್ನಿವೇಶವು ಅವನಲ್ಲಿ ಮತ್ತೊಂದು ತೆರನಾದ ಭಯವನ್ನೂ ಸಂದೇಹವನ್ನೂ ಹುಟ್ಟಿಸಿತು.

ಹೀಗಿರಲು ಅವನ ಬುದ್ಧಿಯು ಇದ್ದಕ್ಕಿದಂತೆ ಪಾದರಸದಂತೆ ಚುರುಕಾಯಿತು. ಅವನು ಯೋಚಿಸ ಸಾಗಿದನು ;

“ ಕಳ್ಳರು ಮರದಮೇಲೆ ಅವಿತುಕೊಂಡಿದ್ದರೆ–ನಾನು ಮಾಡುವುದನ್ನು ಅವರು ನೋಡುತ್ತಿದ್ದರೆ — ನೆಲಮಾಳಿಗೆಯಲ್ಲಿ ನಾ ನಿರಿಸಿ ಬಂದಿರುವ ಹಣವನ್ನು ಎಗರಿಸಿಬಿಡಬೇಕೆಂದು ಅವರು ತೀರ್ಮಾನಿಸಿದ್ದರೆ — ನಾನು ಹೊರಟು ಹೋಗುವವರೆಗೂ ಸಮಯವನ್ನು ಸಾಧಿಸದೆ — ಅವರೇಕೆ ಕಲ್ಲೆಸೆದು ನನಗೆ ಈ ರೀತಿ ಸೂಚನೆ ಕೊಡುತ್ತಿದ್ದರು ? ನನಗೆ ತಿಳಿಯದಂತೆ ಅಡಗಿ ಕುಳಿತಿರುವುದನ್ನು ಬಿಟ್ಟು ಅವರೇಕೆ ನನ್ನನ್ನು ಎಚ್ಚರಿಸುತ್ತಿದ್ದರು ? ಹಾಗೂ ನಾನು ನೆಲಮಾಳಿಗೆಗೆ ಹೋಗಿ ಬರುವುದನ್ನು ಕಂಡು ಅದರ ಬೀಗದಕೈ ನನ್ನ ಬಳಿ ಇದೆಯೆಂದು ತಿಳಿದೂ, ಕೆಳಗಿಳಿದು ಬಂದು — ಮುತ್ತಿಗೆ ಹಾಕಿ — ನನ್ನಿಂದ ಬೀಗದ ಕೈಯನ್ನು ಅವರೇಕೆ ಕಸಿದು ಕೊಳ್ಳದೆ

ಇರುವರು? ಈ ರೀತಿ ವರ್ತಿಸುವುದು ಕಳ್ಳರಿಗೆ ಸಹಜವಾದುದಲ್ಲ. ಇದರಲ್ಲಿ ಏನೋ ಮೋಸವಿದೆ. ಬಹುಶಃ ನನ್ನಲ್ಲಿ ಬಂದೂಕು ಇದೆಯೆಂದು ಅವರು ಹೆದರಿರಬಹುದೆ? ಹೆದರಲೇಕೆ ? ಅವರೂ ಬಂದೂಕುಗಳನ್ನು ತಂದಿರಲಾರರೆ? ಹಾಗಿದ್ದಲ್ಲಿ, ಅವರು ಕುಳಿತಿದ್ದೆಡೆಯಿಂದಲೇ ನನ್ನಮೇಲೆ ಗುರಿಯಿಟ್ಟು ಬಂದೂಕನ್ನು ಹಾರಿಸಿಬಿಟ್ಟರೆ ? ಈ ಕತ್ತಲೆಯಲ್ಲಿ ನನ್ನನ್ನು ಅವರಿಗೆ ತೋರಿಸಿ ಕೊಡುವುದು — ಈ ಕಿರುಹಣತೆ. ಇದು ಈಗ ಹಣಕ್ಕಿಂತಲೂ ಹೆಚ್ಚು ಮೃತ್ಯುಕಾರಕವಾಯಿತು. ಹಾಗಾದರೆ ಈ ಕಿರು ಹಣತೆಯನ್ನು ಆರಿಸಿಬಿಡಲೇ? ಛೀ ! ಹಾಗೆ ಮಾಡಿದರೆ ಕತ್ತಲಾಗಿಬಿಡುತ್ತದೆ. ಆಗ ನನಗೊಂದೂ ತಿಳಿಯುವುದಿಲ್ಲ. ಇದ್ದಿದ್ದೂ ಕಷ್ಟ; ಮರೆತಿದ್ದೆ. ಅವರು ಬಂದೂಕಿನಿಂದ ಬಾರಿಸಿ ಹೊಡೆಯುವುದಾಗಿದ್ದರೆ ಆಗಲೇ ಹೊಡೆಯಬಹುದಾಗಿತ್ತು ; ಇಲ್ಲ ; ಇದರಲ್ಲೇನೋ ಮೋಸವಿದೆ — ಖಂಡಿತ. ಮರದಮೇಲೆ ಕಳ್ಳರಿರಲಾರರು. ಇದ್ದರೂ, ಅವರ ಕೈಯಲ್ಲಿ ಬಂದೂಕು ಇರಲಾರದು ; ಖಂಡಿತ ! ..... "

ಮರುಕ್ಷಣದಲ್ಲೇ ಪೀಟರನಿಗೆ ಬೇರೊಂದು ತೆರನಾಗಿ ಹೊಳೆಯಿತು. " ಮರದಿಂದ ಕಲ್ಲು ಬಿದ್ದ ಬಗೆ ಹೇಗೆ? ಯಾರಾದರೂ ಅದನ್ನು ಎಸೆದಿರಬೇಕು. ಇಲ್ಲವೆ, ಅದು ತಾನಾಗಿ ಕೆಳಗೆ ಬಿದ್ದಿರಬೇಕು. ಯಾರಾದರೂ ಎಸೆಯದ ಕಲ್ಲು ಕೆಳಗೆ ಬಿದ್ದರೆ, ಆ ಕಲ್ಲು ಮರದಮೇಲೆ ಹೋದ ಬಗೆ .....? ಹೇಗೆ? ಹುಂ ! ತಿಳಿಯಿತು. ಆಟಕ್ಕೆಂದು ಹುಡುಗರು ಮರದಮೇಲೆ ಕಲ್ಲೆಸೆಯುವುದುಂಟು. ಅಥವಾ, ಹಕ್ಕಿಗಳಮೇಲೆ ಕವಣೆಕಲ್ಲು ಹೊಡೆದಿರಬಹುದು. ಅದು ಮರದ ರೆಂಬೆಗಳಲ್ಲಿ ಸಿಕ್ಕಿಕೊಂಡಿರಬಹುದು. ಗಾಳಿಗೆ ರೆಂಬೆ ಅಲುಗಿದಾಗ ಕಲ್ಲು ಕೆಳಗೆ ಬಿದ್ದಿರಬಹುದು. ಅಥವಾ, ಕಾಗೆ ಅದನ್ನು ಕೆಳಗೆ ತಳ್ಳಿರಬಹುದು. ಸರಿ ; ಸರಿ ; ಈಗ ಸರಿಹೋಯಿತು. ಅಪ್ಪಾಡಿ ! ಬದುಕಿದೆ. ' ನರರಾಕ್ಷಸರೂ ಸಹ ಒಂದೊಂದು ಸಲ ತಮ್ಮ ನೆರಳಿಗೇ ಹೆದರುತ್ತಾರೆ ' ಎಂದ ಹಾಗಾಯಿತು ನನ್ನ ಪಾಡು.

ಅವನ ಯೋಚನೆಯು ಮುಗಿದಿರಲಿಲ್ಲ. ಅಷ್ಟರಲ್ಲಿ ಕೊಂಬೆಗಳ ಮೇಲೆ ಕುಪ್ಪಳಿಸುತ್ತ ಕಾಗೆ ' ಕಾ—ಕಾ ' ಎಂದಿತು. ಆಗ ಸಣ್ಣರೆಂಬೆಗಳು ಚಲಿಸಿ

ಮತ್ತೊಂದು ಸಣ್ಣಕಲ್ಲು ಕೆಳಗೆ ಬಿದ್ದಿತು. ಅಲ್ಲಿಗೆ ಪೀಟರನ ಭಯಭ್ರಾಂತಿಗಳು ತೊಲಗಿದವು. ನಾಲ್ಕು ಹೆಜ್ಜೆ ಎತ್ತಿಟ್ಟು ಮುಂದೆ ನಡೆದನು. ಆದರೆ ಅವನ ಮನಸ್ಸಿನಲ್ಲಿ ಮತ್ತೆ ಸಂಶಯ ಪಿಶಾಚಿಯು ಹೊಕ್ಕು ಹೇಳಿತು :

" ಎರಡನೆಯಾವರ್ತಿ ಬಿದ್ದ ಕಲ್ಲೇನೋ ಕಾಗೆ ತಳ್ಳಿದ್ದೇ ಇರಬಹುದು. ಆದರೆ .........ಮೊದಲನೆಯದು ? ಅದನ್ನು ಕಳ್ಳರೇ ಎಸೆದಿರಲಾರರೇತಕ್ಕೆ ? " ಅವನ ಯೋಚನೆಗೆ ಕೊನೆಮೊದಲಿಲ್ಲದಂತಾಯಿತು. ಅವನು ತನ್ನಲ್ಲೆ ತರ್ಕಿಸ ತೊಡಗಿದನು :

" ಹೀಗೆ ಒಮ್ಮೆ ನನ್ನನ್ನು ಹೆದರಿಸಿ — ಮತ್ತೊಮ್ಮೆ ನೆಮ್ಮದಿಗೊಳಿಸಿ– ನನ್ನನ್ನು ನೆಲಮಾಳಿಗೆಯಿಂದಾಚೆ ಕಳುಹಿಸಿಬಿಟ್ಟು ಅದರನಂತರ ಕಳ್ಳರು ತಮ್ಮ ಕೊಳ್ಳೆ ಕೆಲಸಕ್ಕೆ ಕೈಹಾಕಿದರೋ ? ಆ ಕಮ್ಮಾರ ! ಬಾಗಿಲಿಗೆ ಬೀಗವನ್ನು ಮಾಡಿಕೊಟ್ಟವನು ... ಅಂದೇ ನನಗೆ ಹೊಳೆದಿತ್ತು .... ..... ಅವನು ಮತ್ತೊಂದು ಬೀಗದ ಕೈಯನ್ನು ಮಾಡಿಸಿ ಇಟ್ಟುಕೊಂಡಿದ್ದರೆ ? ಕೊಳ್ಳೆಗಾರರನ್ನು ಅವನೇ ಹೊರಡಿಸಿಕೊಂಡು ಬಂದಿದ್ದರೆ ? ...... ..... ಇರದು .... ಅವನು ಅಂತಹವನಲ್ಲ ...... ...... ಇರಬಹುದು ; ಏತಕ್ಕೆ ಇರಬಾರದು ? ಇದ್ದರೂ ಇರಬಹುದು. ಅವನ ಮೇಲೆ ನಾನು ದೂರು ಕೊಟ್ಟೇನೆಂದು ಅವನು ಕಾಣಿಸಿಕೊಳ್ಳದೆ ಇರಬಹುದು. ನಾನು ಏನೆಂದು ದೂರು ಕೊಡಲಿ? ...... .... ಯಾರಿಗೆ ? ...... ಪೋಲೀಸಿಗೆ ! ...... ಹಾಗಾದರೆ ಈ ನೆಲಮಾಳಿಗೆಯ ರಹಸ್ಯ ! ಇದು ಏತಕ್ಕೆ ? ನಾನು ' ಅ ಪ ರಾ ಧಿ ' ಎಂದು ಸರಕಾರಕ್ಕೆ ನಾನಾಗಿಯೇ ನಿರೂಪಿಸಿಕೊಟ್ಟಂತಾಗುವುದಿಲ್ಲವೇ ? ಆಗ ...... ಹಾಗಾದಲ್ಲಿ ...... ? ನಾನು ನಾಲ್ಕು ಹೆಜ್ಜೆಗಳು ಮುಂದೆ ಹೋಗುವವರೆಗೂ ಸುಮ್ಮನಿದ್ದು ಆಮೇಲೆ ಕೆಳಗಿಳಿದು ಬಂದು ಕತ್ತಲಲ್ಲಿ ಕಳ್ಳರು ಕತ್ತನ್ನು ಕಿವುಚಿಹಾಕಿದರೆ ? .....ಬೀಗದ ಕೈಯನ್ನು ಕಿತ್ತುಕೊಂಡು ಹೋದರೆ ? ಆಗ ನಾನು ಸತ್ತಂತೆಯೇ ಸರಿ. ಸತ್ತಮೇಲೆ ಬೀಗದಕೈ ಎತ್ತ ಕಡೆ ಹೋದರೇನು ? "

ಆ ಸಮಯದಲ್ಲಿ ಪೀಟರನಿಗೇನೂ ಹೊಳೆಯಲಿಲ್ಲ. ಹಾಗೆಲ್ಲ ಸಾಯುವುದಕ್ಕೆ ಯಾರು ತಾನೇ ಸಮ್ಮತಿಸಿಯಾರು ?

ಹಾಗಾದರೆ ಪೀಟರನು ಬಾಳಿದುದೇತಕ್ಕೆ ?

ಅವನು ಬಾಳಬಯಸಿದುದೇತಕ್ಕೆ ?

ಆ ಅಪಾರ ಭಾಗ್ಯಕ್ಕಾಗಿ ..... ..... ಅದರ ರಕ್ಷಣೆಗಾಗಿ !



## ಪ್ರಕರಣ ೧೨.

# ಹುಲಿ ಹೆದರಿ ಹುಲ್ಲೆ ಮರಿಯಾಯಿತು.

ಹೇಗೂ ಪೀಟರನು ಹುಲಿಯಂತಿದ್ದವನು ಹುಲ್ಲೆಮರಿಯಂತಾದನು. ಅವನು ಮರದ ಬಳಿ ನಿಲ್ಲಲಾರದೆಹೋದನು. ಮೆಲ್ಲ ಮೆಲ್ಲನೆ ಅಡಿಯೆತ್ತಿ ಮುಂದಿಟ್ಟು ಮನೆಯ ಕಡೆ ನಡೆದನು. ಅವನು ಇಪ್ಪತ್ತು ಹೆಜ್ಜೆ ಮುಂದೆ ಸಾಗಿರಬಹುದು. ಅಷ್ಟರಲ್ಲಿ ಅವನ ಮನಸ್ಸು ಮತ್ತೆ ಚಂಚಲವಾಯಿತು :

“ ಶತ್ರುಶೇಷವಿದ್ದರೆ ವಿನಾಶವೇ ಗತಿ. ನಿಜ ; ಮರದ ಮೇಲೆ ಕಳ್ಳರು ಅವಿತುಕೊಂಡಿರಲಾರರು ಎನ್ನುವುದಕ್ಕೆ ಸಮಾಧಾನಕರವಾದ ಸಾಕ್ಷಿಗಳಿಲ್ಲ. ಹೇಗೂ ಸ್ವಲ್ಪ ಸಾವಧಾನಿಸುವುದು ಮೇಲು. ಮನಸ್ಸಿಗೆ ಸ್ಥಿರಪಡಿಸಿಕೊಳ್ಳುವುದೇ ಒಳ್ಳೆಯದು. ನನ್ನ ಸ್ವತ್ತಿನ ವಿಚಾರವಾಗಿ ನಾನೇ ಶ್ರದ್ಧೆ ತಾಳದಿದ್ದರೆ ? ಹೆದರಿ ಓಡಿಹೋದರೆ? ಇನ್ನು ಮುಂದೆ ಮನಸ್ಸಿಗೆ ನೆಮ್ಮದಿಯಿರದು. ಅವರಂತೆ ನಾನೂ ಸ್ವಲ್ಪ ಹೊತ್ತು ಅವಿತು ಕುಳಿತಿರುತ್ತೇನೆ.”

ಮರದ ಬದಿಯಲ್ಲಿ ಪೊದರೊಂದು ಇದ್ದಿತು. ಅದರ ಮರೆಯಲ್ಲಿ ಪೀಟರನು ಹೋಗಿ ಅವಿತು ಕುಳಿತನು. ಅವನ ಕಾಲಿನಲ್ಲಿದ್ದ ಮೋಜೋಡಿನ ಶಬ್ದಕ್ಕೆ ಬೆಚ್ಚಿ ಬೆದರಿ ಅದೇ ಪೊದರಿನ ಮತ್ತೊಂದು ಭಾಗದಲ್ಲಿ ಅವಿತುಕೊಂಡಿದ್ದ ಮೊಲವೊಂದು ಅವನ ಮೇಲೆ ಛಂಗೆಂದು ಹಾರಿ ಆಚೆಗೆ ಓಡಿಹೋಯಿತು. ತನ್ನಮೇಲೆ ಹಾರಿ ಹೋದುದು ಮೊಲವೋ, ಹುಲಿಯ ಮರಿಯೋ ಪೀಟರನಿಗರಿವಾಗಲಿಲ್ಲ; ಇದು ಸಾಲದೆಂದು ಯಾವುದೋ ಒಂದು ಹುಳುವು ಕತ್ತಲಲ್ಲಿ ಅವನ ಕೊರಳ ಮೇಲೆ ಏರಿತು. ಅವನದನ್ನು ಸರಸರನೆ ಕೊಡವಿ ಆಚೆಗೆಸೆದನು. ಅಲ್ಲಿ ನಿಲ್ಲುವುದು ಕ್ಷೇಮಕರವಲ್ಲವೆಂದು ಪೀಟರನಿಗೆ ತೋರಿತು. ಅವನು ಮೇಲೆದ್ದು ಬಂಗಲೆಯ ಕಡೆ ಓಡಿದನು.

ಹಾಗೆ ಕತ್ತಲೆಯಲ್ಲಿ ಓಡುವಾಗ ಕಾಲು ಜಾರಿ ಅವನು ಬದಿಯ ಹಳ್ಳದಲ್ಲಿ ಬಿದ್ದನು. ಅದರಲ್ಲಿದ್ದ ಮುಳ್ಳುಗಳು ಚುರ್ರೆಂದು ಅವನನ್ನು ಚುಚ್ಚಿದುವು; ಅವನ ಬಟ್ಟೆ ಹರಿಯಿತು; ಎಷ್ಟೆ ತರಚಿಹೋಯಿತು. ಮತ್ತೆ ಕೆಲ ಮುಳ್ಳುಗಳು ಅವನ ಹಣೆಯನ್ನು ಅಡ್ಡಡ್ಡಲಾಗಿ ಗೀಚಿದುವು; ಅವನ ಮೊಳಕಾಲು ಉಳುಕಿದಂತಾಯಿತು. ಕಾಲ ಕಿರುಬೆರಳುಗಳು ಮಡಚಿಕೊಂಡುವು; ಕಿವಿಯ ಕೆಳಭಾಗವು ಹರಿದು ಹೋಯಿತು. ಕೆನ್ನೆಗೆ ಕಲ್ಲು ಪೆಟ್ಟು ತಗುಲಿ, ಗುಳಿಬಿದ್ದು ರಕ್ತವು ಸುರಿಯುತ್ತಿತ್ತು; ಅಲ್ಲಾಡುತ್ತಿದ್ದ ಅವನ ಒಂದು ಹಲ್ಲು ಆ ಹಳ್ಳದಲ್ಲಿ ಸಮಾಧಿಗೊಂಡಿತು; ಅವನು ಕುಂಟುತ್ತ, ರಕ್ತ ಸುರಿಸುತ್ತ, ಯಾತನೆಯಿಂದ ನರಳುತ್ತ, ಕರವಸ್ತ್ರವೆಲ್ಲ ರಕ್ತದಲ್ಲಿ ತೊಯ್ದು ಹೋಗಲು, ದಾರಿಯುದ್ದಕ್ಕೂ ರಕ್ತವು ತೊಟ್ಟಿಕ್ಕುತ್ತಿರಲು, ಬಂಗಲೆಗೆ ಬಂದುಸೇರಿದನು; ಹಾಸಿಗೆಯಲ್ಲಿ ಉರುಳಿ, ಹೊರಳಿ, 'ಅಯ್ಯೋ! ಅಪ್ಪ!' ಎಂದು ಕೊರಗುವ ಆ ಕನಿಕರದ ದೃಶ್ಯವನ್ನು ಕಂಡಿದ್ದರೆ ಅವನ ವೈರಿಗಳ ಎದೆಯೂ ಕರಗಿ ನೀರಾಗುತ್ತಿತ್ತು.

'ಕತ್ತಿಗೆ ತನ್ನ ಒಡೆಯನ ಮೇಲೂ ಕನಿಕರವಿಲ್ಲ' ಎಂಬಂತೆ ನೆಲವು ಅವನದಾದರೂ—ಅವನಾಗಿ ತೋಡಿಸಿದ ಹಳ್ಳವಾದರೂ— ಅದರಲ್ಲಿ ತುಂಬಿಸಿದ ಮುಳ್ಳಿಗೆ ಕನಿಕರವೆ? ಕಲ್ಲಿಗೆ ಕನಿಕರವೆ? ದಾಯ ತಪ್ಪಿದರೆ ಅವನದೇ ಆದರೂ ಕತ್ತಿಯು ಅವನ ಕೊರಳನ್ನು ಕತ್ತರಿಸೀತು.

"ನಾನೇ ತೋಡಿಸಿ ಮುಳ್ಳು ತುಂಬಿಸಿದ ಹಳ್ಳದಲ್ಲಿ ನಾನೇ ಬೀಳ ಬೇಕಾಯಿತೇ?" ಎಂದು ಪೀಟರನು ಕೊರಗಿ ಮುದುಗಿದನು.

ಬಂಗಲೆಯ ಕಡೆ ಹೋಗಲು ನೇರವಾದ ದಾರಿ ಇದ್ದಿತು. 'ಅದನ್ನು ಬಿಟ್ಟು ಇತ್ತಕಡೆ ಬಾ' ಎಂದು ಪೊದರೂ ಹಳ್ಳವೂ ನನ್ನನ್ನು ಕರೆಯಲಿಲ್ಲ. 'ಹೊತ್ತು ಗೊತ್ತಿಲ್ಲದೆ ರಾತ್ರಿಯಲ್ಲೆಲ್ಲ ಹುಳ ಹುಪ್ಪಟೆಗಳಿರುವ ಪೊದರುಗಳ ಬಳಿ ತಿರುಗಾಡು' ಎಂದು ಅವು ನನ್ನನ್ನು ಒತ್ತಾಯಪಡಿಸಲಿಲ್ಲ. ಬಂಗಲೆ ಕಡೆ ಓಡುತ್ತಿದ್ದ ಅವನು ಕಳ್ಳರೇನಾದರೂ ಹಿಂಬಾಲಿಸುತ್ತಿರುವರೇ ಎಂದು ಹಿಂತಿರುಗಿ

ನೋಡಿದಾಗಲೇ ತನ್ನ ಮುಂದಿದ್ದ ಮೂರಡಿ ಆಳದ ಮುಳ್ಳು ಗುಂಡಿಯಲ್ಲಿ ಬಿದ್ದಿದ್ದ-ಗಾಯಗೊಂಡಿದ್ದ. ನೋವು ಪ್ರಬಲಿಸಿ ಪೀಟರನು ಬಲಹೀನನಾದನು. ಆದರೂ ಕಳ್ಳರು ತನ್ನನ್ನು ಹಿಂಬಾಲಿಸಲಿಲ್ಲವಲ್ಲ ಎಂಬುದರಿಂದ ಅವನಿಗೆ ಅಪರಿಮಿತ ಸಂತೋಷ. ಇಷ್ಟಾದರೂ ಶಂಕೆಯು ಅವನನ್ನು ಬಿಡಲಿಲ್ಲ. ಆಕಸ್ಮಿಕವಾಗಿ ಉಂಟಾದ...... ...... ಪೆಟ್ಟಿನ ಕಾಯಗಳ ನೋವು—ಮನಸ್ಸಿನ ಯಾತನೆ—ಇವುಗಳಿಂದ ಸಂತಪ್ತನಾದ ಪೀಟರನು ರಾತ್ರಿಯೆಲ್ಲ ಹಾಸಿಗೆಯಲ್ಲಿ ಬಿದ್ದು ಹೊರಳಾಡುತ್ತಿದ್ದನು.

'ಪೀಟರನಿಗೇನು ಚಿಂತೆ? ಅವನ ಹಣವು ನಷ್ಟವಾಗಿದ್ದರೆ?' ಎಂದು ಯಾರಾದರೂ ಕೇಳಬಹುದು. ಆದರೆ ...... ......ಅಂದು ರಾತ್ರಿ ಅವನ ಆ ನರಳಾಟವನ್ನು ಅವರು ನೋಡಿದ್ದರೆ-ಅಧಿಕಾರಿಗಳು ಬಂದು ಹೋದಂದಿನಿಂದ ಹಣದ ರಕ್ಷಣೆಗಾಗಿ ಅವನು ಮಾಡುತ್ತ ಬಂದ ವ್ಯವಸ್ಥೆಗಳು-ಹೂಡಿದ ಚಳುವಳಿಗಳು — ಅನುಭವಿಸಿದ ಯಾತನೆಗಳು—ಪವೇ ಪವೇ ಅವನನ್ನು ಬೆನ್ನಟ್ಟಿ ಕಾಡುತ್ತಿದ್ದ ಸಂಶಯ ಪಿಶಾಚಿಯ ಕಪಿಮುಷ್ಟಿ—ಇವುಗಳನ್ನೆಲ್ಲ ಊಹಿಸಿನೋಡಿದರೆ—ಪೀಟರನು ಸುಖಿ ಎಂದು ಹೇಳುವಂತಿತ್ತೇ? ಹಣದ ಒಡೆತನವು ಹೆಚ್ಚಿದಂತೆಲ್ಲ ಚಿಂತೆಯು ಹೆಚ್ಚುತ್ತದೆ. ಮಾನವನಿಗೆ ಮಿತಿಮೀರಿದ ಹಣವು ಹೊರೆಯಾಗುತ್ತದೆ. ಅದನ್ನು ವಿನಿಯೋಗಿಸದೆ ಬಚ್ಚಿಟ್ಟು ಬಂಧನ ಗೊಳಿಸಿದರೆ ಅದು ಅತ್ಯುಗ್ರ ಶತ್ರುವಾಗುತ್ತದೆ. ಹಣವನ್ನು ಗಳಿಸುವು ದರಲ್ಲಿಯೂ—ಶೇಖರಿಸುವುದರಲ್ಲಿಯೂ-ಅವನು ಅತಿ ಚತುರನಾಗಿದ್ದನು. ಆದರೆ ಅದರ ಒಡೆತನಕ್ಕೆ ಭಂಗ ಬರುವಂತಾದಾಗ ಅವನ ಚಿಂತೆ--ಎಲ್ಲೆ ಯನ್ನು ಮೀರುತ್ತಿತ್ತು. ಅಸತ್ಯದ ಹಾದಿಯನ್ನು ಹಿಡಿದುದರಿಂದ ಹುಲಿಯ ಹಾಗಿದ್ದ ಪೀಟರನು ಈಗ ಹೆದರಿದ ಹುಲ್ಲೆಯಂತಾದನು.

ಮುಳ್ಳಿನ ಗುಂಡಿಯಲ್ಲಿ ಬಿದ್ದನಂತರ ಏಳು ದಿವಸಗಳು ಪೀಟರನು ಮೇಲೇಳಲಾಗಲಿಲ್ಲ. ಆ ಕಾಲದಲ್ಲಿ ಅವನು ತನಗೆ ತಿಳಿದ ಸೊಪ್ಪಿನ ರಸ ಗಳನ್ನು ಹುಣ್ಣುಗಳಿಗೆ ಹಚ್ಚುತ್ತ ಬಂದನು. ರಣಗಳಿಗೆ ಮುಲಾಮನ್ನು ಸವರುತ್ತ ಬಂದನು; ಏನೇನೋ ತನಗೆ ತಿಳಿದ ಚಿಕಿತ್ಸೆಗಳನ್ನೆಲ್ಲ ತಾನೆ

ಮಾಡಿಕೊಂಡನು. ಆದರೆ ವೈದ್ಯರನ್ನು ಮಟ್ಟಿಗೆ ತನ್ನ ಬಳಿ ಕರೆಸಲಿಲ್ಲ. ಏತರಿಂದ ತನಗೆ ಈ ಹುಣ್ಣು — ರಣಗಳಾದುವು ಎಂಬುದನ್ನೂ—ಎಲ್ಲಿ? ಯಾವಾಗ? —ಎಂಬುದನ್ನೂ ಅವನು ಯಾರಲ್ಲಿಯೂ ಹೇಳಿಕೊಳ್ಳುವಂತಿರ ಲಿಲ್ಲ. ಆ ವಿಚಾರವೆಲ್ಲವೂ ಅವನ ರಹಸ್ಯ ಜೀವನಕ್ಕೆ ಸಂಬಂಧಪಟ್ಟುದೇ ಅಲ್ಲವೆ? ಅದನ್ನು ಅವನು ಇತರರೊಂದಿಗೆ ಹಂಚಿಕೊಳ್ಳುವ ಸ್ಥಿತಿಯ ಲ್ಲಿದ್ದನೇ? ಅಷ್ಟೇಕೆ? ತನ್ನ ನೆತ್ತಿಯಲ್ಲಿ ಮುಳ್ಳುಗಳು ತರಚಿ—ಉಂಟಾದ ಘಾಯಗಳನ್ನೂ ಅವನು ತೋರಿಸಿಕೊಳ್ಳುವಂತಿರಲಿಲ್ಲ. ಪೀಟರನು ತನ್ನ ಕರವಸ್ತ್ರವನ್ನು ಸುತ್ತಿ ನೆತ್ತಿಯ ಹುಣ್ಣನ್ನು ಮರೆಸಿ ಕಟ್ಟಿದನು. ಹೊದ್ದು ಕೊಂಡು ಹಾಸಿಗೆಯಲ್ಲಿ ಮಲಗಿದನು. ಊಟವನ್ನು ಡೇನಿಯಲ್ಲನು ತಂದಿಟ್ಟು ಹೋಗುತ್ತಿದ್ದನು. ಅಲ್ಲಿ ನಿಂತು ಧಣಿಯನ್ನು ಉಪಚರಿಸಲು ಅವನಿಗೆ ಅಪ್ಪಣೆ ಇರಲಿಲ್ಲ. ಅವನಿಗೆ ಸಂದೇಹವುಂಟಾದರೂ ಅವನು ಧಣಿಯ ಅಸ್ವಸ್ಥತೆಯು—ಘಾಯಗಳ—ವಿಚಾರವಾಗಿ ಕೇಳುವಂತಿರಲಿಲ್ಲ. ಇನ್ನು ಸ್ಯಾಮ್ಯುಯಲ್! ಬಂಗಲೆ ಧಣಿಗೆ ಏಟು ತಗುಲಿಸುದೆಲ್ಲಿ—ಹೇಗೆ? ಎಂದು ಅವನು ಊಹಿಸಲಾರದೆ ಹೋದ. ಏಳು ದಿನಗಳಲ್ಲಿ ಮೂರು ದಿನ ಪೀಟರನಿಗೆ ಬೇನೆಯನ್ನು ತಾಳಲಾರದೆ ಜ್ವರದ ತಾಪ ಬೇರೆ. ಹಣಕ್ಕಾಗಿ ಅವನು ಎಲ್ಲವನ್ನೂ ಸಹನೆಯಿಂದ ತಾಳಿದನು.

ಒಂದು ವಾರದನಂತರ ಪೈಪೋಲಿನ ಹುಣ್ಣುಗಳು ಮಾಗಿದುವು. ಪೀಟರನು ಈಗ ಎದ್ದು ಓಡಾಡುವಂತಾಯಿತು. ವರದಿಯು ಹಸ್ತಗತವಾಗಿ ಹತ್ತಿಪ್ಪತ್ತು ದಿವಸಗಳಾದರೂ ಅಧಿಕಾರಿಗಳಾರೂ ಬಂಗಲೆಕಡೆ ತಲೆಯಿಡಲಿಲ್ಲ. ಮರದಿಂದ ಆ ದಿನ ರಾತ್ರಿ ಬಿದ್ದ ಕಲ್ಲು ಕಳ್ಳರೆಸೆದುದಲ್ಲ ಎಂದು ಅವನಿಗೆ ಗೊತ್ತಾಗಿ ಹೋಯಿತು. ಈ ಕಾರಣದಿಂದ ಅವನ ಮನಸ್ಸಿಗೆ ಶಾಂತಿ ಯುಂಟಾಯಿತು. ಮೇಲಾಗಿ ಒಂದು ವಾರದ ವಿಶ್ರಾಂತಿಯಿಂದ ಅವನ ದೇಹದಲ್ಲಿ ಹೊಸಶಕ್ತಿಯು ಬಂದಂತಾಯಿತು. ಅಂದು ಪ್ರಾತಃಕಾಲ ಅವನು ತೋಟದಕಡೆ ಹೊರಟನು, ಯಾರಿಗೂ ತಿಳಿಯದಂತೆ ನೆಲಮಾಳಿಗೆ ಬಳಿ ಹೋದನು. ಅದರ ಬಾಗಿಲು ಭದ್ರವಾಗಿದ್ದಿತು. ಅವನಿಗಾದ ಸಂತೋಷಕ್ಕೆ

ಕೊನೆಮಿತಿಯಿರಲಿಲ್ಲ.

ವಾಯಿದೆ ಕಾಲವು ಮುಗಿದುಹೋಯಿತು. ವರದಿ ಕೈಸೇರಿದಮೇಲೆ ಅಧಿಕಾರಿಗಳು ಪರಿಶೋಧನೆಗೆ ಬಂದೇ ಬಂದಾರು ಎಂದು ಪೀಟರನ ನಿರೀಕ್ಷಣೆ. ಆದರೆ ಆದುವರೆಗೆ ಯಾರೂ ಬರಲಿಲ್ಲ. ಆ ಕೊನೆಯ ಚೀಲ–ಎಪ್ಪತ್ತನೆಯ ಚೀಲ—ಎಷ್ಟು ಪ್ರಯತ್ನಪಟ್ಟರೂ ಅದು ತುಂಬಲೇ ಇಲ್ಲ. ತನ್ನ ಪೆಟ್ಟಿಗೆಗಳಲ್ಲಿ, ಜೀರುಗಳಲ್ಲಿ ಇನ್ನೂ – ಇಲ್ಲಿ –- ಅಲ್ಲಿ – ಎಲ್ಲೆಲ್ಲಿರುವುದನ್ನೂ — ಎಲ್ಲ ನಾಣ್ಯಗಳನ್ನೂ —ಆತುರದಿಂದ ಬಳಿದು ಬಾಚಿ, ಚೀಲಕ್ಕೆ ತುಂಬಿದನು. ಪಟ್ಟಣದ ರಾಡ್ಜರ್ಸ್ ವರ್ತಕನು ತನಗೆ ಕೊಡಬೇಕಾಗಿದ್ದ ಐವತ್ತು ಹೊನ್ನು ಸಾಲವನ್ನು ತಕ್ಷಣ ಕೊಟ್ಟುಬಿಡುವಂತೆ ಗೋಗರೆದು ಕೇಳಿದನು. ರಾಡ್ಜರ್ಸ್‌ನು ತನ್ನಲ್ಲಿ ಇಲ್ಲ ಎಂದು ಹೇಳಿದರೂ ಪೀಟರನು ಬಿಡುವೊಲ್ಲ. 'ಕೊನೆಗೆ ಹತ್ತು ಹೊನ್ನು ಹೋದರೂ ಚಿಂತೆಯಿಲ್ಲ; ನಲವತ್ತೇ ಕೊಡು; ಬಡ್ಡಿಯನ್ನೂ ಬಿಟ್ಟೆ – ನಿನ್ನ ಸಾಲ ತೀರಿತು. ನನ್ನ ಅವಸರ ಹರಿಯಿತು' ಎಂದ ಪೀಟರ್. ಆದರೆ ರಾಡ್ಜರ್ಸ್ ಈ ಅಪೂರ್ವ ಆಚರಣೆಯನ್ನು ಕಂಡು ಆಶ್ಚರ್ಯಗೊಂಡನು. ಅವನು 'ಉಳಿದದ್ದೆಲ್ಲ ಒಳ್ಳೆಯದೇ. ಈ ಕೃಪಣ ಐವತ್ತಕ್ಕೂ ಹತ್ತು ಬಿಡುತ್ತೇನೆ ಎನ್ನುತ್ತಾನಲ್ಲ' ಎಂದು ಸಂತಸಗೊಂಡನು. ಅದರೊಂದಿಗೆ ತೃಪ್ತನಾಗದೆ ರಾಡ್ಜರ್ಸ್‌ನು 'ನನಗೂ ವ್ಯಾಪಾರದಲ್ಲಿ ನಷ್ಟವಾಗಿದೆ; ಇಪ್ಪತ್ತು ಬಿಡುವುದಾದರೆ ಉಳಿದ ಮುವ್ವತ್ತನ್ನು ಈಗಲೇ ಕೊಡುತ್ತೇನೆ. ಏನು ಹೇಳಿ; ಆಗಬಹುದು ಎಂದರೆ ಮುವ್ವತ್ತು ....ಈಗಲೇ' ಎಂದು ಹೇಳಿ ಮುಗಿಸಿರಲಿಲ್ಲ. 'ಸದ್ಯಕ್ಕೆ ಬಂದಷ್ಟು ಬರಲಿ' ಎನ್ನುತ್ತ ಒಪ್ಪದವನಂತೆ ಮೊದಮೊದಲು ನಟಿಸಿ – ಬೇರ ಮಾಡಿ – ಕೊನೆಗೆ ಮುವ್ವತ್ತು ಹೊನ್ನುಗಳನ್ನು ರಾಡ್ಜರ್ಸಿನಿಂದ ಪಡೆದು ಪೀಟರನು ಮನೆಗೆ ಹಿಂತಿರುಗಿದನು. ಆ ಮುವ್ವತ್ತು ಹೊನ್ನನ್ನೂ ಎಪ್ಪತ್ತನೆಯ ಚೀಲದಲ್ಲಿ ತುಂಬಿದನು. ಆದರೂ ಸಾಲದಾಯಿತು. 'ಈ ಚೀಲದ ಹೊಟ್ಟೆ ದೊಡ್ಡದು' ಎಂದು ಪೀಟರನು ಅದನ್ನು ನಿಂದಿಸಿದನು. 'ನಿನ್ನ ಆಶೆಯ ಒಡಲೋ? ಅದು ಚಿಕ್ಕದೇ?' ಎಂದು ಅಣಕಿಸಿತು– ಅಶರೀರ. 'ಬಂದಷ್ಟು ಬರಲಿ' ಎನ್ನುತ್ತ ಅವನು ತನ್ನಲ್ಲಿದ್ದ ಇನ್ನೂ ಕೆಲಕೆಲ ಬೆಲೆ ಬಾಳುವ ಸಾಮಾನುಗಳನ್ನು ಹಿಂದುಮುಂದು ನೋಡದೆ ಮಾರಿ

ಹಾಕಿದನು. ಮತ್ತೆ ಅರುವತ್ತು ಹೊನ್ನುಗಳು ಚೀಲದ ಗರ್ಭದಲ್ಲಿ ಅಡಗಿದುವು. ಆದರೂ ಅದು ಪರಿಪೂರ್ಣವಾಗಿ ತುಂಬಲಿಲ್ಲ. ಮತ್ತೆ ಮೂರುದಿನಗಳು ಉಳಿದಿರುವುದು. ಅಧಿಕಾರಿಗಳೂ ತಲೆಯಿಡಲಿಲ್ಲ. ಅದರಿಂದ ಅವನಿಗೆ ನೆಮ್ಮದಿಯೇ. ಆದರೆ ಚೀಲವು ತುಂಬದೆ ಬಂಗಲೆಯಲ್ಲೆ ಉಳಿದರೆ ಸಂದೇಹಕ್ಕೆ ಕಾರಣ. ಅವನಿಗೆ ಬಗೆಹರಿಯಲಿಲ್ಲ. ಅವನು ತಲೆಯ ಮೇಲೆ ಕೈಯಿಟ್ಟು ಕುಳಿತನು.

ಪೀಟರನ ಆ ಪರಿಸ್ಥಿತಿಯಲ್ಲಿ ಅವನನ್ನು ಯಾರಾದರೂ ನೋಡಿದ್ದರೆ "ಇವನು ತಿರುಗಿ ಪಡೆಯಲಾರದ ಯಾವುದೋ ಅಮೂಲ್ಯ ವಸ್ತುವನ್ನು ಕಳೆದುಕೊಂಡವನಂತೆ ಅಪರಿಮಿತ ದುಃಖಕ್ಕೀಡಾಗಿದ್ದಾನೆ." ಎಂದು ಹೇಳುತ್ತಿದರು.

ಚೀಲವು ತುಂಬುವವರೆಗೂ ಪೀಟರನು ಮತ್ತೇನೂ ಮಾಡುವಂತಿರಲಿಲ್ಲ. ಅಂದು ಸಾಯಂಕಾಲ ಅವನು ಊಟವನ್ನು ಮುಗಿಸಿ ಹಾಸಿಗೆಯ ಮೇಲೆ ಬಿದ್ದುಕೊಂಡನು. ದಣಿವು ಹೆಚ್ಚಾಗಿದ್ದುದರಿಂದ ಕಣ್ಣೆಳೆದು ಅವನಿಗೂ ತಿಳಿಯದೆ ನಿದ್ರೆಹತ್ತಿತು. ಬೆಳಿಗ್ಗೆ ಬಹಳ ಹೊತ್ತಿನವರೆಗೂ ಅವನು ಮೇಲೇಳಲೇ ಇಲ್ಲ. ಮೂರಾವರ್ತಿ ಡೇನಿಯಲ್ಲನು ಬಂದು ನೋಡಿದನು. ನಿದ್ರಿಸುತ್ತಿದ್ದ ಧಣಿಯನ್ನು ಎಬ್ಬಿಸುವುದು ಹೇಗೆ? ಬಾಗಿಲು ಒಳಗಿನಿಂದ ಹಾಕಿದೆ; ತೆಗೆಯುವಂತಿಲ್ಲ. ನಾಲ್ಕನೆಯ ಸಲ ಡೇನಿಯಲ್ಲನು ಬಂದು ನೋಡಿದಾಗ ಪೀಟರನು ಹಾಸಿಗೆಯಲ್ಲಿ ಮಲಗಿದ್ದಂತೆಯೇ ಕಣ್ಣು ಬಿಟ್ಟು ಅತ್ತಿತ್ತ ನೋಡುತ್ತಿದ್ದನು. ಆಗ ನಡು ಮಧ್ಯಾಹ್ನಕ್ಕೆ ಮೇಲೆ ಹೊತ್ತೇರಿತ್ತು. ಅವನೊಂದು ದಿನವೂ ಹೀಗೆ ಮೈಮರೆತು ಮಲಗಿ ನಿದ್ರಿಸಿದವನಲ್ಲ. ಹಾಸಿಗೆಯಿಂದ ಎದ್ದವನೇ ಪೀಟರನು ಬಾಗಿಲನ್ನು ತೆಗೆದನು. ಹೊರಗಡೆ ಯಜಮಾನನ ಅಪ್ಪಣೆಯನ್ನು ನಿರೀಕ್ಷಿಸುತ್ತ ಡೇನಿಯಲ್ಲನು ಕಾದಿದ್ದಾನೆ. ಬಟ್ಲರನಿಗೆ ಧಣಿ ಸನ್ನೆಮಾಡಿದನು. ಅವನು ಓಡಿಹೋಗಿ ಹೂಜಿಯಲ್ಲಿ ನೀರು ತಂದಿರಿಸಿದನು. ಪೀಟರನು ಮುಖವನ್ನು ತೊಳೆದು ಮೇಜಿನ ಮುಂದೆ ಕುಳಿತನು. ಊಟವು ಬಂದಿತು; ಪೀಟರನಿಗೆ ತಡೆಯಲಾರದಷ್ಟು ಹಸಿವು

ಉಂಟಾಗಿದ್ದಿತು. ಹೊಟ್ಟೆತುಂಬ ಊಟಮಾಡಿದನು. ಡೇನಿಯಲ್ಲನು ತಟ್ಟೆ ಬಟ್ಟಲುಗಳನ್ನು ತೆಗೆದುಕೊಂಡು ಹೋದ. ಪೀಟರನು ತನ್ನ ಘಾಯ ಗಳಿಗೆ ಅಲ್ಲಲ್ಲಿ ಮುಲಾಮು ಹಚ್ಚಿ, ಮೈಮುರಿದು ಮತ್ತೆ ಹಾಸಿಗೆಯಲ್ಲಿ ಮಲಗಿದನು. 'ರಾತ್ರಿಯೂಟವನ್ನು ಮೇಜಿನಮೇಲೆ ಸಂಜೆಗೆ ತಂದಿರಿಸು; ಮುಚ್ಚಿಡು. ನನ್ನನ್ನು ಎಬ್ಬಿಸಬೇಡ; ಎದ್ದನಂತರ ಊಟಮಾಡಿಕೊಳ್ಳುತ್ತೇನೆ' ಎಂದು ಮಲಗುವ ಮುನ್ನ ಡೇನಿಯಲ್ಲನಿಗೆ ಆಜ್ಞೆ ಮಾಡಿದನು.

ಹಿಂದಿನ ರಾತ್ರಿಯ ಸುಖಮಯ ನಿದ್ರೆ, ಮುಂದಿನ ಹಗಲು ತೃಪ್ತಿಕರ ಊಟ– ಈ ಎರಡು ಬಗೆಯ–ಸುಖಕ್ಕೆ–ಶಾಂತಿಗೆ, ಅವನ ಆ ಅಪಾರ ಸ್ವರ್ಣ ಸರ್ವಸ್ವವು ಸಾಟಿಯೆನಿಸದು. ಇದರ ಗುಟ್ಟನ್ನು ಪೀಟರನು ಅರಿತಿದ್ದನೇ? ಅರಿತಿದ್ದರೆ ಅವನ ಪುಣ್ಯವನನ್ನು ಮೀರಿಸಿದವರಿರಲಿಲ್ಲ.

ವರದಿಯು ತಮ್ಮ ಕರಗತವಾಗಿ ಹತ್ತಾರು ದಿವಸಗಳಾದರೂ ಅಧಿಕಾರಿಗಳು ಯಾರೂ ಪರಿಶೋಧನೆಗೆ ಒರಲಿಲ್ಲ. ಆದುದರಿಂದ ಅವರು ತನ್ನ ವರದಿಯನ್ನು ಸತ್ಯವಾದುದೆಂದು ಒಪ್ಪಿಕೊಂಡು ಬಿಟ್ಟರು ಎಂದು ಪೀಟರನು ಎಣಿಸಿಬಿಟ್ಟನು. ಪ್ರಯತ್ನಗಳಿಗೆ ಫಲವು ಲಭಿಸುವುದಕ್ಕೆ ಮುನ್ನ ತನ್ನಿಷ್ಟದಂತೆ 'ಲಭಿಸಲಿ' ಎಂದು ಹಾರೈಸುವುದು; 'ಲಭಿಸಿತು' ಎಂದು ತೀರ್ಮಾನಿಸಿಕೊಂಡು ಬಿಡುವುದು — ಅನೇಕ ಮಾನವರಿಗೆ ಸಹಜವೆ ಅಲ್ಲವೇ?



# ಸ್ಯಾಮ್ಯುಯಲ್ಲನ ಪಾಲು.

ಫ್ರೆಡರಿಕ್ ಎಂಬುವವನು ಪ್ಯಾರಿಸ್ ನಗರದಲ್ಲಿ ಸುಪ್ರಸಿದ್ಧ ಹಣ್ಣಿನ ವ್ಯಾಪಾರಿ. ಸ್ಯಾಮ್ಯುಯಲ್ ಅವನನ್ನು ಚೆನ್ನಾಗಿ ಬಲ್ಲವನಾಗಿದ್ದನು; ಅವನಬಳಿ ಹೋಗಿ ತನ್ನೆಲ್ಲ ಕಷ್ಟಗಳನ್ನೂ ಕೂಲಂಕಷವಾಗಿ ಹೇಳಿಕೊಂಡನು. ಸ್ಯಾಮ್ಯುಯಲ್ಲನ ಆರ್ಥಿಕ ದುಸ್ಥಿತಿಯನ್ನು ಕೇಳಿ ಫ್ರೆಡರಿಕನ ಮನಸ್ಸು ಕರಗಿತು. ಅವನು ಹೇಳಿದ :

" ಸ್ಯಾಮ್ಯುಯಲ್ ! ಹೆದರಬೇಡವಯ್ಯ. ನನ್ನ ಕೈಲಾದ ಸಹಾಯ ವನ್ನೆಲ್ಲ ನಾನು ಮಾಡುತ್ತೇನೆ."

" ತೋಟದಲ್ಲಿ ಹಣ್ಣುಗಳು ಫಲಕ್ಕೆ ಬಂದಿವೆ — ಫ್ರೆಡರಿಕ್ ಅಣ್ಣ ! ಅವನ್ನು ಒಟ್ಟಿಗೆ ವರ್ಷಕ್ಕೆ ಗುತ್ತಿಗೆ ಹಿಡಿದು ಮುಂಗಡ ಹಣ ಕೊಡುವುದಾದರೆ ನನ್ನ ಪಾಲು (ಕಾಲುಭಾಗ) ಹಣವನ್ನು ಈಗ ಈಸುಕೊಂಡೇನು. ನನ್ನ ಕುಟುಂಬದ ಕಷ್ಟ ಹರಿದೀತು; ಸಾಲಸೋಲಗಳನ್ನು ಒಂದಷ್ಟು ತೀರಿಸಲೂ ಬಹುದು; ಹೆಚ್ಚೇನು ಹೇಳಲಿ ಫ್ರೆಡರಿಕ್ ಅಣ್ಣ? ಈಗ ಸಹಾಯ ಮಾಡಿದರೆ ಆ ಪುಣ್ಯ ನಿಮಗಿದ್ದೇ ಇದೆ."

ಸ್ಯಾಮ್ಯುಯಲ್ ಅಂಗಲಾಚಿದನು.

" ಪುಣ್ಯದ ಮಾತು ಹಾಗಿರಲಿ ಸ್ಯಾಮ್ಯುಯಲ್ ! ಮನುಷ್ಯರು ಒಬ್ಬರಿಗೊಬ್ಬರು ಸಮಯದಲ್ಲಿ ಸಹಾಯಮಾಡಲೇ ಬೇಕು. ಅದು ಅವರ ಕರ್ತವ್ಯ. ದೇವರು ದೊಡ್ಡವನು—ದಯಾವಂತ—ದೀನಬಂಧು—ಎಂದೆಲ್ಲ ಅರಿತುಕೊಂಡರೆ ನಾವು ಒಬ್ಬರಿಗೊಬ್ಬರು ಸಹಾಯ ಮಾಡಬೇಕಾದುದು

ಕರ್ತವ್ಯ. ಹಾಗೆ ನೆರವಾಗದವರು ಪಶುಗಳಿಗಿಂತಲೂ ಕಡೆಯಾಗುತ್ತಾರೆ. ಇರಲಿ; ಚಿಂತಿಸಬೇಡವಯ್ಯ. ನಿನ್ನ ಧಣಿಗೆ ಗುತ್ತಿಗೆ ಮುಂಗಡ ಕೊಡಲು ಈಗ ಇನ್ನೂರು ಹೊನ್ನುಗಳನ್ನು ಹಿಡಿದುಕೊಂಡು ಬರುತ್ತೇನೆ. ಅದರಲ್ಲಿ ನಿನ್ನ ಪಾಲನ್ನು ತೆಗೆದುಕೋ. ಮಹರಾಯನಾಗಿ ನಿನ್ನ ಕಷ್ಟಗಳನ್ನು ಅಷ್ಟಿಷ್ಟು ಹರಿಸಿಕೋ. ನಿಮ್ಮ ಧಣಿಯ ತೋಟವನ್ನು ನಾನು ಗುತ್ತಿಗೆ ಹಿಡಿಯುವುದರಿಂದ ನಿನಗುಪಯೋಗವಾದರೆ ನನಗೂ ಸಂತೋಷವೇ."

"ದೇವರು ನಿನ್ನನ್ನು ಕಾಪಾಡಲಿ ಫ್ರೆಡರಿಕ್ ಅಣ್ಣಾ! ನಡಿ; ಸಂಜೆ ಆಗುತ್ತ ಬಂತು; ಧಣಿಯ ಬಂಗಲೆಗೆ ಹೋಗೋಣ."

ಫ್ರೆಡರಿಕನೂ ಸ್ಯಾಮ್ಯುಯಲ್ಲನೂ ದಾರಿಯುದ್ದಕ್ಕೂ ಏನೇನೋ ಮಾತನಾಡುತ್ತ ಬಂಗಲೆ ಬಳಿ ಬಂದು ಸೇರಿದರು. ಆ ವೇಳೆಗೆ ತೀವ್ರವಾದ ಆಲೋಚನೆಯಲ್ಲಿ ಮಗ್ನನಾದ ಪೀಟರನು "ಈ ಚೀಲವನ್ನು ತುಂಬುವುದಕ್ಕೆ ಏನು ಮಾಡಲಿ?" ಎಂದು ಜಪಿಸುತ್ತ ಬಂಗಲೆ ಹಜಾರದಲ್ಲಿ ಹಿಂದಕ್ಕೂ ಮುಂದಕ್ಕೂ ಹಾರಾಡುತ್ತಿದ್ದನು.

ಸ್ಯಾಮ್ಯುಯಲ್ ಮತ್ತು ಫ್ರೆಡರಿಕ್ ಪೀಟರನ ಮುಂದೆ ಬಂದು ನಿಂತರು. ಫ್ರೆಡರಿಕನೇನೂ ಪೀಟರನಿಗೆ ಅಪರಿಚಿತನಲ್ಲ. ಅವನೊಡನೆ ಬಂದಿದ್ದ ಸ್ಯಾಮ್ಯುಯಲ್ಲನನ್ನು ಕುರಿತು ಪೀಟರನು ಕೇಳಿದನು:

"ಏನು ಸಮಾಚಾರ ಸ್ಯಾಮ್ಯುಯಲ್?"

"ಇವರು ನಗರದ ಸುಪ್ರಸಿದ್ಧ ಹಣ್ಣಿನ ವ್ಯಾಪಾರಿಗಳು; 'ಫ್ರೆಡರಿಕ್' ಎಂದು. ಇವರನ್ನು ಬಲ್ಲಿರಾ ಧಣಿಗಳೇ?"

"ಬೇಕಾದಷ್ಟು ಬಲ್ಲೆನಯ್ಯ! ಅವರೇನೂ ಹೊಸಬರಲ್ಲ. ಇರಲಿ; ಈಗೇನಾಗಬೇಕು?"

ಹೀಗೆನ್ನುತ್ತ ಪೀಟರನು ಬದಿಯಲ್ಲಿದ್ದ ಕುರ್ಚಿಯನ್ನು ತೋರಿಸಿ ಫ್ರೆಡರಿಕನನ್ನು ಅದರಲ್ಲಿ ಕುಳಿತುಕೊಳ್ಳುವಂತೆ ಸೂಚಿಸಿದನು. ಬಳಿಕ

ಸ್ಯಾಮ್ಯುಯಲ್ಲನು ಪೀಟರನನ್ನು ಕುರಿತು ಹೇಳಿದನು :

"'ಧಣಿಗಳೇ ! ನಮ್ಮ ತೋಟದ ಹಣ್ಣುಗಳನ್ನು ಇಂದಿನಿಂದ ಇನ್ನೊಂದು ವರ್ಷದ ವರೆಗೆ ಇವರು ಗುತ್ತಿಗೆ ಹಿಡಿಯುತ್ತಾರಂತೆ. ನೀವೇನು ಹೇಳುತ್ತೀರಿ ?"

ಪೀಟರನ ಬಾಯಲ್ಲಿ ನೀರೂರಿತು. ಅವನು ಕೇಳಿದನು :

"ಎಷ್ಟಕ್ಕೆ ಇಟ್ಟುಕೊಳ್ಳುತ್ತಾರಂತೆ ?"

"ಹೇಳು ಫ್ರೆಡರಿಕ್ ಅಣ್ಣಾ ! ಧಣಿಗಳು ಕೇಳುತ್ತಿದ್ದಾರೆ."

ಫ್ರೆ : ನಾನೂರು ಹೊನ್ನಿಗಾದರೆ ಇರಲಿ.

"ನಾನೂರು ಹೊನ್ನು !" ಪೀಟರನ ಮನಸ್ಸಿನೊಳಗೆ ನೆಮ್ಮದಿಯೇ ಆಯಿತು. ಅವನ ಕೊನೆಯ ಚೀಲವು ತುಂಬಬೇಡವೆ ? ಆದರೂ ಹೊರ ಹೊರಗೆ ಬಿಗಿಯಾಗಿದ್ದಂತೆಯೇ ತೋರ್ಪಡಿಸಿಕೊಂಡನು.

ಪೀ : ಆಗದು ಫ್ರೆಡರಿಕ್ ! ಯಾರಾದರೂ ಕೇಳಿದರೆ ನಕ್ಕಾರು.

ಫ್ರೆ : ಏತಕ್ಕೆ ? ನಾನು ಕೊಡುತ್ತೇನೆಂದು ಹೇಳಿದ್ದು ಹೆಚ್ಚೆಂದು ತಾನೆ ?"

ಪೀ : ಹೆಚ್ಚೆ ! ಎಲ್ಲಿಯಾದರೂ ಉಂಟೆ ? ನನ್ನನ್ನು ಪೆಚ್ಚುಮಾಡುವಿರೇನು?

ಫ್ರೆ : ಛೀ ! ಅದಕ್ಕಾಗಿ ನಾನಿಲ್ಲಿಗೆ ಬಂದವನಲ್ಲ.

ಪೀ : ನಾನೂರು ಎಂದಿರಾ ?.... ಎಲ್ಲಿಯಾದರೂ ಉಂಟೆ?

ಫ್ರೆ : ನಾನೂರು ಕಡಿಮೆಯೇ ?

ಪೀ : ಕಡಿಮೆ ಮಾತ್ರವಲ್ಲ ..... ..... ತೀರ ಕಡಿಮೆ.

ಫ್ರೆ : ಹಾಗಾದರೆ ?

ಪೀ : ಆರುನೂರು ಕೊಡುವುದಾದರೆ ಹೇಳಿ.

ಫ್ರೆ : ಆಗದು ; ಖಂಡಿತ ಆಗದು.

ಪೀ : ಐನೂರೆ ಐವತ್ತು ?

ಫ್ರೆ : ಆಗುವುದೇ ಇಲ್ಲ.

ಪೀ : ಐನೂರು ?

ಫ್ರೆ : ಊಹುಂ ; ಆಗದು.

ಪೀ : ನಾನೂರೈವತ್ತು ?

ಫ್ರೆ : ಸಾಧ್ಯವೇ ಇಲ್ಲ.

ಪೀ : ಏನು ಹಾಗೆಂದರೆ ? ನೀವಾಗಿ ಹೇಳಿದ್ದರ ಮೇಲೆ ಐವತ್ತು ಆಗದೇ?

ಫ್ರೆ : ಐವತ್ತೇಕೆ ? ಐದೂ ಆಗದು.

ಪೀ : ಹಾಗೆಂದರೆ ಆದೀತೇ ?

ಫ್ರೆ : ಹೇಗೆಂದರೂ ಅಷ್ಟೇ. ಆಗದು ಎಂದಮೇಲೆ ಆಗದು — ಆಗಲೇ ಆಗದು.

ಫ್ರೆಡರಿಕನು ಸ್ಪಷ್ಟವಾಗಿ ನುಡಿದು ಬಿಟ್ಟನು. ಪೀಟರನು ಸ್ಯಾಮ್ಯುಯಲ್ಲನನ್ನು ಕುರಿತು ಕೇಳಿದನು :

“ ಇದೇನು ಸ್ಯಾಮ್ಯುಯಲ್ ! ನಾನೂರೈವತ್ತು ಆಗದು ಎನ್ನುತ್ತಾರೆ ಇವರು ? ”

ಸ್ಯಾ : ಅವರಿಷ್ಟ; ನಿಮ್ಮಿಷ್ಟ. ನಾನೇನು ಹೇಳಲಿ ಧಣಿಗಳೇ !

ಫ್ರೆ : ಇಷ್ಟಕಷ್ಟಗಳ ಮಾತು ಈಗ ಬೇಡ ಸ್ಯಾಮ್ಯುಯಲ್ ! ಅಷ್ಟಕ್ಕೆ ಕೊಡುವುದಾದರೆ ಕೊಡಲಿ. ಅದಕ್ಕೆ ಮೇಲೆ ನನಗೆ ಬೇಡ.

ಪೀ : ನಾನೂರೈವತ್ತು ಕೊಡಿ; ಇಲ್ಲದಿದ್ದರೆ ನನಗೆ ಬಹಳ ನಷ್ಟವಾಗುತ್ತದೆ.

ಸ್ಯಾ : ನೋಡು ಫ್ರೆಡರಿಕ್ ಅಣ್ಣ ! ಅವರ ಮಾತು ತಳ್ಳಬೇಡ.

ಫ್ರೆ : ಸುಮ್ಮನಿರು ಸ್ಯಾಮ್ಯುಯಲ್ ! ನಾನೂರೈವತ್ತು ಕೊಡುವುದಾದರೆ

ಅವರಿಗಿಷ್ಟ ; ಇಲ್ಲದಿದ್ದರೆ ನಷ್ಟ. ನಾನೂರಕ್ಕೆ ಮೇಲೆ ಕೊಟ್ಟರೆ ನನಗೆ ನಷ್ಟ. ಇದಕ್ಕೇನು ಹೇಳುತ್ತೀಯೆ ?

ಸ್ಯಾ : ಸರಿಯಣ್ಣಾ ! ಇದರ ಮೇಲೆ ನಿನ್ನಿಷ್ಟ.

ಪೀ : ಇರಲಿ; ನಾನೂರಿಪ್ಪತ್ತೈದಾದರೂ ಕೊಡಿ.

ಫ್ರೆ : ನಾನೂರಕ್ಕೆ ಮೇಲೆ ಒಂದೇ ಒಂದು ಬಿಡಿ ಹೊನ್ನನ್ನೂ ಕೊಡಲಾರೆ.

ಪೀ : ಅಷ್ಟು ಖಂಡಿತವಾಗಿ ಹೇಳಿಬಿಟ್ಟರೆ ಹೇಗೆ?

ಫ್ರೆ : ಆಗುವುದೇ ಇಲ್ಲ ಎಂದು ನಾನು ಮೊದಲೇ ಹೇಳಲಿಲ್ಲವೆ ?

ಪೀ : ಹೇಳಿದ್ದಿರಿ ; ಆದರೆ ...... ......

ಫ್ರೆ : ಬೇಡ ; ಬೇರೆ ತೋಟ ನೋಡುತ್ತೇನೆ. ಪ್ಯಾರಿಸ್ ನಗರದಲ್ಲಿ ಸೇಬು ದ್ರಾಕ್ಷಿಗಳ ತೋಟಕ್ಕೇನು ? ಬೇಕಾದಷ್ಟಿವೆ.

ಪೀ : ಇವೆ; ಇಲ್ಲ ಎಂದನೇ ನಾನೀಗ ?

ಫ್ರೆ : ಆ ಮಾತು ಬೇರೆ. ಜ್ಯಾಕ್‌ಸನ್‌ರವರು ಮೂರು ವರ್ಷಗಳಿಂದ ನಿಷ್ಠೂರ ಪಡಿಸುತ್ತಿದ್ದಾರೆ. 'ನೀನು ಕೊಟ್ಟಷ್ಟು ಕೊಡು ; ನನ್ನ ತೋಟ ಗುತ್ತಿಗೆ ಹಿಡಿ' ಎಂದು. ರೋಸಲಿನ್ ದೊರೆಸಾನಿ 'ಗುತ್ತಿಗೆ ಹಿಡಿದು ಮಾರಿದ ಮೇಲೆ ಸರಿಪಾಲು ಕೊಡಿ' ಎಂದು ಬಲವಂತ ಪಡಿಸುತ್ತಿದ್ದಾರೆ. ಹೆನ್ರಿಯವರೂ ಹಾಗೆಯೇ ಒತ್ತಾಯಪಡಿಸುತ್ತಿದ್ದಾರೆ. ಹೀಗಿರುವಾಗ ನಿಮ್ಮ ತೋಟದ ಗುತ್ತಿಗೆ ಹಿಡಿದೇ ಹಿಡಿಯಬೇಕೆಂಬ ಅವಸರವೆಲ್ಲಿಂದ ಬಂತು ? ಹಾಗೂ ಅವಶ್ಯವಾದರೆ ಮುಂದೆ ನೋಡಿಕೊಳ್ಳೋಣವಂತೆ.

ಫ್ರೆಡರಿಕನು ಬಡಪೆಟ್ಟಿಗೆ ಬಗ್ಗಲೊಲ್ಲ. ಬೇಡವೆಂದರೂ ಪೀಟರನು ಬಿಡಲೊಲ್ಲ. ಫ್ರೆಡರಿಕನು ಬೇಡವೆಂದಾಗ ಪೀಟರನ ಮುಖವು ಬಾಡಿಹೋಯಿತು. ತನ್ನ ಇಡೀಜೀವಮಾನದಲ್ಲೇ ಪೀಟರನು ಈ ರೀತಿ ಪೆಚ್ಚಾಗಿರಲಿಲ್ಲ. ಹಿಡಿದುದನ್ನು ಕಡೆತನಕ ಹಠದಿಂದ ಸಾಧಿಸುವುದೇ ಅವನ ಅಚಲವಾದ

ವಾಡಿಕೆಯಾಗಿದ್ದಿತು. ಆದರೆ ಈ ಸಲ ಅವನು ಸೋತವನಂತೆಯೇ ಸರಿ. ಅವನ ಅವಸರವು ಅಷ್ಟೊಂದು ಹಿರಿದಾಗಿದ್ದಿತು. ಅವನ ಎಪ್ಪತ್ತನೆಯ ಚೀಲ ..... ಅದು ರಾಕ್ಷಸನಂತೆ ಬಾಯಿ ತೆರೆದುಕೊಂಡು ಕುಳಿತಿದೆ. ಅದರ ಒಡಲನ್ನು ತುಂಬಬೇಕು. ಒಡಲು ತುಂಬಿ ಅದರ ಕಂಠದಲ್ಲಿ ತೇಗು ಬರಬೇಕು. ಅದುವರೆಗೂ ಅದು ಬಾಯಿ ಮುಚ್ಚುವಂತಿಲ್ಲ. ಆ ಚೀಲವು ಪೀಟರನ ಕಣ್ಣುಮುಂದೆ ಬಂದು ನಿಂತಂತಾಯಿತು. 'ನನ್ನ ಒಡಲಲ್ಲಿ ತುಂಬು; ಬೇಗ ತುಂಬು; ಹೊಟ್ಟೆ ಹಸಿದಿದೆ; ಉಂಡು ಮಲಗುತ್ತೇನೆ; ನಿದ್ದೆ ಹತ್ತಿದೆ; ಮಲಗಬೇಕು.' ಎನ್ನುವಂತಿತ್ತು. 'ಏಕೆ ನಿಧಾನ?' ಎಂದು ಅದು ಅರಚಿದಂತಾಯಿತು. 'ಆದೀತು' ಎನ್ನುತ್ತ ಮತ್ತೆ ಫ್ರೆಡರಿಕನನ್ನು ಕುರಿತು ಪೀಟರನು ಕೇಳಿದನು:

ಪೀ: ನಾನೂರಕ್ಕೆ ಮೇಲ್ಪಟ್ಟು ಆಗುವುದೇ ಇಲ್ಲವೆ?

ಫ್ರೆ: ಅದಕ್ಕೆ ಮೇಲ್ಪಟ್ಟು ಒಂದು ಬಿಡಿ ಹೊನ್ನನ್ನೂ ಕೊಡಲಾರೆ.

ಪೀ: ಆಗದೇ?

ಫ್ರೆ: ಆಗಲೇ ಆಗದೆಂದು ಮೊದಲೇ ಹೇಳಲಿಲ್ಲವೆ?

ಪೀ: ಒಳ್ಳೆಯದಾಯಿತು; ಗುತ್ತಿಗೆ ಒಪ್ಪಂದವನ್ನು ಬರೆದು ಮುಂಗಡ ಕೊಡಬೇಕು.

ಫ್ರೆ: ಬಲ್ಲೆ; ಇನ್ನೂರು ಹೊನ್ನು ತಂದಿದ್ದೇನೆ.

ಪೀ: ಇನ್ನೂರು! ನಾನೂರೂ ಈಗಲೇ ಕೊಡಿ.

ಫ್ರೆ: ಆಗದು; ಇರುವುದು ಇನ್ನೂರೇ.

ಪೀ: ನೋಡಿ; ನಾನೂರು ಕೊಡಿ. ಬೇಕಾದರೆ ಹತ್ತು ಬಿಟ್ಟು ಬಿಟ್ಟೇನು.

ಪೀಟರನ ಈ ಇಳಿತಾಯ ಮನೋಭಾವವನ್ನು ಕಂಡು ಫ್ರೆಡರಿಕನಿಗೂ ಸ್ಯಾಮ್ಯುಯಲ್ಲನಿಗೂ ಅತ್ಯಂತ ಆಶ್ಚರ್ಯವಾಯಿತು. 'ಮಕ್ಕಳು —

ಮರಿ ಇಲ್ಲದ ಒಬ್ಬೊಂಟಿಗನಾದ--ಈ ಶ್ರೀಮಂತನ ಅವಸರವಾದರೂ ಏನಿರ ಬಹುದು ? ' ಎಂದು ಅವರಿಬ್ಬರೂ ಯೋಚಿಸದೆ ಇರಲಿಲ್ಲ. ಫ್ರೆಡರಿಕನು ಹೇಳಿದನು :

ಫ್ರೆ : ಇನ್ನೂರು ಮಾತ್ರ ಈಗ ಕೊಡಬಲ್ಲೆ. ಇತರ ಮಾತು ಈಗ ಬೇಡ.

ಪೀಟರನಿಗೂ ಫ್ರೆಡರಿಕನಿಗೂ ಗುತ್ತಿಗೆ ಒಪ್ಪಂದವು ನಡೆಯಿತು. ಪತ್ರದಲ್ಲಿ ಅವರಿಬ್ಬರೂ ಸಹಿ ಮಾಡಿದರು. ಅದಕ್ಕೆ ಸ್ಯಾಮ್ಯುಯಲ್ಲನು ಸಾಕ್ಷಿಯಾಗಿ ಹೆಬ್ಬೆಟ್ಟಿನ ಗುರುತನ್ನು ಒತ್ತಿದ್ದನು. ಇನ್ನೂರು ಹೊನ್ನುಗಳ ನ್ನುಳ್ಳ ಒಂದು ಚೀಲವನ್ನು ಫ್ರೆಡರಿಕನು ಪೀಟರನ ಮುಂದಿರಿಸಿದನು. ಅದನ್ನು ಆದರದಿಂದ ಕೈಯಲ್ಲಿ ಹಿಡಿದೆತ್ತಿಕೊಂಡು ಪೀಟರನು ಬಂಗಲೆಯೊಳಗೆ ಹೋದನು. ಆದರೆ ಎಷ್ಟು ಹೊತ್ತಾದರೂ ಅವನು ಹೊರಗೆ ಬರಲೇ ಇಲ್ಲ. ಸ್ಯಾಮ್ಯುಯಲ್ಲನನ್ನು ಅವನು ಸಂಪೂರ್ಣವಾಗಿ ಮರೆತೇ ಬಿಟ್ಟನು. ತನ್ನ ಕಷ್ಟಗಳು ತಲೆಗೆ ಮಿಂಚಿ ಹೋಗಿದ್ದುದರಿಂದಲ್ಲವೆ ಸ್ಯಾಮ್ಯುಯಲ್ಲನು ಫ್ರೆಡ ರಿಕನನ್ನು ಒಡಂಬಡಿಸಿ ಪೀಟರನ ಬಳಿ ಕರೆತಂದದ್ದು ?

ಆದರೆ ಪೀಟರನ ಅವಸರ! ಅದು ಸ್ಯಾಮ್ಯುಯಲ್ಲನ ಅವಸರಕ್ಕೆ ಕಡಿಮೆಯಾಗಿದ್ದಿತೇ? ಇಲ್ಲದಿದ್ದರೆ ಬಡಪೆಟ್ಟಿಗೆ ನಾನೂರಕ್ಕೆ ಒಡಂಬಡುತ್ತಿ ದ್ದನೆ ? ನಿಜ; ಪೀಟರನ ದೃಷ್ಟಿಯಲ್ಲಿ ಅವನ ಎಪ್ಪತ್ತನೆಯ ಚೀಲವು ತುಂಬಲೇ ಬೇಕಾಗಿತ್ತು; ಅದೂ ತಕ್ಷಣದಲ್ಲಿ! ಮೊಹರು ಮಾಡಲ್ಪಟ್ಟು ನೆಲಮಾಳಿಗೆಯನ್ನು ಅತಿ ಕ್ಷಿಪ್ರದಲ್ಲಿ ಸೇರದಿದ್ದರೆ ಅಧಿಕಾರಿಗಳ ವಶವಾಗಿ ಬಿಡುವ ಅಪಾಯದ ಸಂಭವವಿತ್ತು.

ಇರಲಿ; ಸ್ಯಾಮ್ಯುಯಲ್ಲನ ವಿಚಾರ ಹೇಗೆ? ಅವನ ವೈಸಾಲ; ಲ್ಯೂಸಿ ಮತ್ತು ಆರ್ಥರ್ ಇವರಿಬ್ಬರು ತಂದ ಕೈಸಾಲಗಳು; ಇವೆಲ್ಲ ಸಾಲಗಳನ್ನೂ ಅತ್ಯವಸರವಾಗಿ ತೀರಿಸತಕ್ಕದಿತ್ತು. ಸಾಲದುದಕ್ಕೆ ಕುಟುಂಬದ ಕರ್ಚಿಗಾಗಿ ಕಡಿಮೆಯೆಂದರೆ ಹತ್ತಿಪ್ಪತ್ತು ಹೊನ್ನುಗಳಾದರೂ ಅವನಿಗೆ ಅತ್ಯವಸರವಾಗಿ ಬೇಕಿತ್ತು. ಪೀಟರನ ಅವಸರವು ಮಾನಸಿಕವಾ

ದುದು; ಆದರೆ ಸ್ವಾಮ್ಯಯಲ್ಲಿನ ಅವಸರವು ನೈಜವಾದುದು; ನಿಮಿಷ ಮಾತ್ರವೂ ತಡೆಮಾಡಕೂಡದಂತಹುದು.

ಪ್ರಪಂಚದಲ್ಲಿ ಬಡವರಿಗೂ ಭಾಗ್ಯವಂತರಿಗೂ ಈ ತೆರನಾದ ಸಾಮ್ಯ ರಹಿತ ಪೈಪೋಟಿಗಳು ಎಷ್ಟೋ ವ್ಯವಹಾರಗಳಲ್ಲಿ ನಡೆಯುತ್ತಲೇ ಇವೆ. ಇಂತಹ ಪೈಪೋಟಿಗಳಲ್ಲಿ ವಿಶೇಷವಾಗಿ ಗೆಲ್ಲುವವರು ಭಾಗ್ಯವಂತರೇ; ಸೋಲುವವರು ಬಡವರೇ. ಬಡವರು ಸೋತಷ್ಟೂ ಅವರ ಬಡತನವು ಮತ್ತಷ್ಟು ಮಿತಿ ಮಿಂಚಿ ಹೆಚ್ಚುತ್ತದೆ. ಬಡತನವೇ ಬಡವರ ಎಡೆಬಿಡದ ಮೃತ್ಯು. ಬಡವರು ಸೋತದ್ದನ್ನೆಲ್ಲ ಭಾಗ್ಯವಂತರು ದಕ್ಕಿಸಿಕೊಂಡಾರು; ದಕ್ಕಿಸಿ ಹಿಗ್ಗುತ್ತಾರೆ; ಕೊಬ್ಬುತ್ತಾರೆ. ಹೀಗೆ ಬಡವರನ್ನು ಸೋಲಿಸಿ, ಅವರ ಸಂಕಟ-ಸಮಸ್ಯೆಗಳನ್ನು ಹೆಚ್ಚಿಸಿ—ಹಲಕೆಲ ಶ್ರೀಮಂತರು ತಾವು ಗಳಿಸಿದ ನಿಧಿಯನ್ನು ಬಚ್ಚಿಡಬಯಸುತ್ತಾರೆ. ಅವರ ಉದ್ದೇಶವು ಇರ್ತೆರನಾಗಿರುತ್ತದೆ. ಒಂದನೆಯದು-ತೆರಿಗೆಯನ್ನು ಕೊಡದಿರುವುದು; ಎರಡನೆಯದು ಸರಕಾರವೂ, ಸಾರ್ವಜನಿಕ ಸಂಸ್ಥೆಗಳೂ ಸ್ಥಾಪಿಸುವ ಧರ್ಮಸಂಸ್ಥೆಗಳಿಗೆ ಉಚಿತ ಸಹಾಯ ನೀಡದೆ ತಪ್ಪಿಸಿಕೊಳ್ಳುವುದು; ಆದರೆ ಬಡವರ ಮಾತು ಹಾಗಲ್ಲ. ಅವರು ಭಿಕ್ಷುಕರ ಸಮಾನರು; 'ಇದು ಬೇಕು ಇದು ಬೇಡ' ಎಂದು ನಿರ್ಧರಿಸುವ ಭಾಗ್ಯವು ಅನೇಕವೇಳೆ ಅವರ ಹಣೆಯಲ್ಲಿ ಬರೆದಿರುವುದಿಲ್ಲ. ತಮಗೆ ನ್ಯಾಯವಾಗಿ ಸಲ್ಲಬೇಕಾದ ಹಣವನ್ನೂ, ಸೌಕರ್ಯಗಳನ್ನೂ ಪಡೆಯಲು ಎಷ್ಟೋ ವೇಳೆ ಅವರು ಪಡುವ ಪಾಡಂತೂ ಕನಿಕರಜನ್ಯವಾದುದು. ತಮಗೆ ಸಲ್ಲಬೇಕಾದ್ದು ಸಂದರೆ ಅವರು ತಮ್ಮ ಸಣ್ಣಪುಟ್ಟ ಸಾಲಗಳನ್ನು ಹರಿಸಿಕೊಳ್ಳಬಲ್ಲರು; ಇಂದಿನ ಸಮಸ್ಯೆಗಳನ್ನು ಸ್ವರೂಪಗೊಳಿಸಿಕೊಳ್ಳಬಲ್ಲರು; ಮುಂದಿನ ವ್ಯವಹಾರಗಳನ್ನೂ ಒಂದಷ್ಟು ಸಜ್ಜುಗೊಳಿಸಿ ಸರಿಹೊಂದಿಸಿಕೊಳ್ಳಬಲ್ಲರು; ತಮ್ಮ ದುಡಿತಕ್ಕೆ ತಟ್ಟುವ ಒಡಕು ತೊಡಕುಗಳನ್ನು ಅಷ್ಟಿಷ್ಟು ನಿವಾರಿಸಿಕೊಳ್ಳಬಲ್ಲರು. ತಮ್ಮ ಕಷ್ಟನಷ್ಟಗಳನ್ನು ಒಂದು ಬಗೆಯಲ್ಲಿ ಪರಿಹರಿಸಿಕೊಂಡು ಬಾಳ ನೌಕೆಯನ್ನು ಸುಗಮವಾಗಿ ನಡೆಸಬಲ್ಲ ಸುಯೋಗವನ್ನೂ ಪಡೆಯಬಲ್ಲರು. ಆದರೆ.......... ದೈವಾನುಗ್ರಹಕ್ಕೆ ಹೆಚ್ಚಿದ ಪ್ರಮಾಣದಲ್ಲಿ ಪಾತ್ರರಾದ ಶ್ರೀಮಂತರು ಉದಾರಿಗಳಾದರೆ

.........ಬಡವರ ಮೇಲೆ ತಮ್ಮ ಪ್ರೈಪ್ರೋಟಿಯನ್ನು ನಿಲ್ಲಿಸಿದರೆ........ ಬಡವರ ಬಾಳು ನೆಲೆಯುಳಿಯದೆ ನಿಂತು ನಡೆಯುವಂತೆ ಅವಕಾಶವನ್ನು ಕಲ್ಪಿಸಿ ಕೊಟ್ಟರೆ ......... ಅಂತಹವರ ರೀತಿನೀತಿಗಳು ಮಾನವ ಸಹಜವಾಗವೇ? ಮಾನವರ ಮೇಲ್ಮೆಯನ್ನು ಮುಂದುವರಿಸವೇ? ಸಮಾಜದ ದೃಷ್ಟಿಯಲ್ಲಿ ಸಮರ್ಪಕವಾಗವೇ? ದೇಶದ ದೃಷ್ಟಿಯಲ್ಲಿ ಹಿತಕಾರಿಯಾಗವೇ? ಜನತೆಯ ಮುನ್ನಡೆಗೆ ಸಹಾಯವಾಗವೇ? ಧರ್ಮಸೂಕ್ಷ್ಮಗಳನ್ನು ಸಮಂಜಸರೀತಿ ಯಲ್ಲಿ ಪರಿಪಾಲಿಸಲಾರವೇ? ಏಕೆ? ಸಹೃದಯದಿಂದ ಕೂಡಿದ-ಸಹಜೀವಿಗಳ ಸಂತೃಪ್ತ ಜೀವನಕ್ಕೆ ಬೆಂಬಲವಾಗುವ—ಶ್ರೀಮಂತರ ಅಂತಹ ಒಲವಾಂತ ಸನ್ನಡತೆಯು ಸೃಷ್ಟಿಕರ್ತನಿಗೆ ಸಮರ್ಪಕವಾಗಿರಲಾರದೇ? ಈ ವಿಚಾರವು ಪೀಟರನಿಗೆ ಮಾತ್ರವೇನು? ಅವನ ಇಂದಿನ ಮುಂದಿನ ತಲೆಮಾರಿನವರಲ್ಲಿ ಎಷ್ಟೋ ಶ್ರೀಮಂತರಿಗೆ ಅದು ಅರಿವಾಗದ್ದು ಎನ್ನಬಹುದು; ಕಠಿಣ ಮನೋಭಾವದ ಕೃಪಣರಿಗೆ ಉದಾತ್ತ ನೀತಿಗಳನ್ನು ಕಲಿತು ಆಚರಿಸುವ ಯೋಗವಾಗಲಿ--ಅವಕಾಶವಾಗಲಿ ಲಭಿಸುವುದು ಕಷ್ಟವೆಂದೇ ಹೇಳಬೇಕು.

ಫ್ರೆಡರಿಕನು ಕೊಟ್ಟ ಇನ್ನೂರು ಹೊನ್ನುಗಳನ್ನು ಪೀಟರನು ಬಂಗಲೆ ಯೊಳಗೆ ತೆಗೆದುಕೊಂಡು ಹೋದನಲ್ಲವೆ? ಆಗೇನಾಗಿದೆ? 'ನನ್ನ ಗತಿ ಹೇಗೆ' ಎಂದು ಹೊರಗಡೆ ಸ್ಯಾಮ್ಯುಯಲ್ಲನ ಚಿಂತೆ ...... .... 'ಚೀಲವು ತುಂಬೀತು' ಎಂದು ಒಳಗಡೆ ಪೀಟರನ ಆನಂದ. ಅವನು ನೆಮ್ಮದಿಯಾಗಿ ಕುಳಿತು ಫ್ರೆಡರಿಕನು ಕೊಟ್ಟ ಹೊನ್ನನ್ನು ತಿರುಗಿಸಿ ತಿರುಗಿಸಿ ಎಣಿಸುತ್ತಿದ್ದನು. ತಡೆಯುವಷ್ಟು ತಡೆದು ಇನ್ನೆಷ್ಟುಮಾತ್ರವೂ ತಡೆಯಲಾರದೆ ಸ್ಯಾಮ್ಯುಯ ಲ್ಲನು ಬಾಗಿಲ ಬಳಿ ಬಂದು ಕೂಗಿದನು:

ಸ್ಯಾ: ಧಣಿಗಳೇ!

ಪೀ: ನೀನು ಹೊರಡು ಸ್ಯಾಮ್ಯುಯಲ್! ಹೊತ್ತಾಯಿತು; ಹೊರಡು.

ಪೀಟರನ ಈ ಮಾತುಗಳನ್ನು ಕೇಳಿ ಸ್ಯಾಮ್ಯುಯಲ್ಲನ ತಲೆಯ ಮೇಲೆ ಸಿಡಿಲು ಬಡಿದಂತಾಯಿತು. ಅವನು ಯೋಚಿಸಸಾಗಿದನು:

" ದಿನಸಿ ಅಂಗಡಿಯವನಿಗೇನು ಕೊಡುವುದು ? ಮೊಂಡತನದಿಂದ ಮನೆಯ ಬಾಗಿಲಲ್ಲೆ ಕದಲದೆ ಕುಳಿತಿರುವ ಸಾಲಗಾರ ಟಾಮಿಲ್ಸನ್ನಿಗೇನೆಂದು ಹೇಳುವುದು ? ವಾಯಿದೆ ಮೇಲೆ ವರ್ಷವಾದರೂ ಹರಿಯದೆ ನಿಂತಿರುವ ಫಿಲಿಪ್ಸನಿಗೇನು ಉತ್ತರಕೊಟ್ಟು ಸಮಾಧಾನಪಡಿಸುವುದು ? ನೆಲಗಂದಾಯ ಹೇಗೆ ಕಟ್ಟುವುದು ? ಛಳಿಗಾಲಕ್ಕೆ ಉಣ್ಣೆಯ ಉಡುಪನ್ನು ಹೇಗೆ ಕೊಳ್ಳು ವುದು ? ಬೇಸಾಯದ ಆಳುಗಳಾದ ಪಾಲ್ ಮತ್ತು ಪೆರ್ಸಿಲಿ ಇವರಿಬ್ಬರಿಗೆ ಕೊಡಬೇಕಾದ ವರ್ಷದ ಸಂಬಳ ಹೇಗೆ ಕೊಟ್ಟು ತೀರಿಸುವುದು ? "

ಇವು — ಇತ್ಯಾದಿಯಾದ ಹತ್ತಾರು ಕೊರಳು ತರಿವ ಪ್ರಶ್ನೆಗಳು ಒಂದೊಂದಾಗಿ ಸ್ಯಾಮ್ಯುಯಲ್ಲನ ಕಣ್ಣಮುಂದೆ ಬಂದು ನಿಂತುವು. ಅವನಿಗೇನೂ ತೋರದೆ ಅವನು ಬೆಪ್ಪನಂತಾದನು.

" ಇದೇನು ? ದೈವಕ್ಕೆ ಹೀಗೂ ಪಕ್ಷಪಾತವೇ ? "

ಎಂದು ಸ್ಯಾಮ್ಯುಯಲ್ಲನು ನೊಂದು ಕಂಬನಿ ಸುರಿಸಿ ನಿಟ್ಟುಸಿರು ಬಿಟ್ಟನು. ಇವನ್ನು ಕಂಡು ಫ್ರೆಡರಿಕನು ಕನಿಕರದಿಂದ ಕೇಳಿದನು :

" ಯಾಕೆ ? ಏನಾಯಿತು ಸ್ಯಾಮ್ಯುಯಲ್ ? ಚಿಂತಿಸುತ್ತಿರುವೆಯೇಕೆ?"

" ನಿನಗೆ ತಿಳಿಯದೆ ಫ್ರೆಡರಿಕ್ ಅಣ್ಣಾ ? "

" ಚೀಲದಲ್ಲಿ ಹಣವನ್ನು ತುಂಬಿಕೊಂಡು ಧಣಿಗಳು ಒಳಗೆ ಹೋದರು. ಎಷ್ಟು ಹೊತ್ತಾದರೂ ಅವರು ಹೊರಗೆ ಬರಲೇ ಇಲ್ಲ. ನಾನು ಕೂಗಿದುದಕ್ಕೆ ಒಳಗಿನಿಂದಲೇ ' ಹೊತ್ತಾಯಿತು ; ಮನೆಗೆ ಹೋಗು ' ಎಂದು ಹೇಳುತ್ತಾರೆ. ಅವರೇನು ಬಲ್ಲರು ನನ್ನ ಕಷ್ಟಗಳನ್ನು ? ನನ್ನ ಪಾಲನ್ನು ಕೊಡಬೇಕೆಂದು ಅವರಿಗೆ ಮನಸ್ಸಾಗಲಿಲ್ಲ ಅಣ್ಣಾ ! ಇನ್ನು ಬಡವರಾದ ನಮ್ಮ ಪಾಡು ಹೇಗೆ ?

ಫ್ರೆ : ಹೆದರದಿರು ; ನಿನಗೆಷ್ಟು ಬರಬೇಕು ಸ್ಯಾಮ್ಯುಯಲ್ ?

ಸ್ಯಾ : ಈ ಮುಂಗಡದಲ್ಲಿ ಕಾಲು ಪಾಲು ; ಹಿಂದಿನದರಲ್ಲಿ ಐವತ್ತು ಹೊನ್ನು.

ಫ್ರೆ : ಇರಲಿ; ಭಯಪಡಬೇಡ. ನಿನ್ನ ಧಣಿಯನ್ನು ನನ್ನೆದುರಿನಲ್ಲಿ ಕೇಳು- ನಾನು ಕೊಡಿಸುತ್ತೇನೆ.

ಅಷ್ಟರಲ್ಲಿ ಒಂದು ನಾಣ್ಯವನ್ನು ಹಿಡಿದು ಪೀಟರನು ಅವರಿಬ್ಬರಿದ್ದೆಡೆಗೆ ಬಂದನು. ಅದನ್ನು ಫ್ರೆಡರಿಕನಿಗೆ ತೋರಿಸುತ್ತ ಹೇಳಿದನು :

"ಇದೋ ಈ ನಾಣ್ಯವು ಪೆಚ್ಚಾಗಿದೆ. ಇದಕ್ಕೆ ಬದಲು ಬೇರೆ ಕೊಡಿ."

ಪೀಟರನು ನಾಣ್ಯವನ್ನು ಫ್ರೆಡರಿಕನ ಕೈಯಲ್ಲಿ ಕೊಡಹೋದನು. ಆದರೆ ಅದನ್ನು ಈಸಿಕೊಳ್ಳಲು ಫ್ರೆಡರಿಕನು ಕೈ ನೀಡಲಿಲ್ಲ. ಪೀಟರನಿಗೆ ಅರ್ಥವಾಗಲಿಲ್ಲ.

ಫ್ರೆ : ಈ ನಾಣ್ಯವು ಮಾತ್ರವಲ್ಲ ಮಹಾಶಯ ! ನಿಮ್ಮ ಕೈಯಲ್ಲಿ ಕೊಟ್ಟಿರುವ ಎಲ್ಲ ನಾಣ್ಯಗಳೂ ಪೆಚ್ಚೇ !

ಪೀ : ಹಾಗೆಂದರೇನು ಫ್ರೆಡರಿಕ್ ?

ಫ್ರೆ : ಅವುಗಳೆಲ್ಲವನ್ನೂ ತಿರುಗಿಸಿ ಕೊಟ್ಟುಬಿಡಿ.

ಪೀ : ನನಗರ್ಥವಾಗಲಿಲ್ಲ ನಿಮ್ಮ ಮಾತು.

ಫ್ರೆ : ನನಗೂ ಅರ್ಥವಾಗಲಿಲ್ಲ ನಿಮ್ಮ ಕೃತ್ಯ !

ಪೀ : ಹಾಗೆಂದರೇನು ಫ್ರೆಡರಿಕ್ ? ಕರಾರು ಬರೆದು ಸಹಿ ಮಾಡಿಲ್ಲನೆ ?

ಫ್ರೆ : ಅದನ್ನು ರದ್ದು ಮಾಡಿಬಿಟ್ಟರಾಯಿತು ; ನಾನು ನಿಮ್ಮೊಡನೆ ವ್ಯವಹಾರ ನಡೆಸಲು ಸಮ್ಮತಿಸಲಾರೆ.

ಪೀಟರನಿಗೆ ನಿಜವಾಗಿಯೂ ಅರ್ಥವಾಗಲಿಲ್ಲ. ಅವನು ಒಮ್ಮೆ ಸ್ಯಾಮ್ಯುಯಲ್ಲನನ್ನೂ ಮತ್ತೊಮ್ಮೆ ಫ್ರೆಡರಿಕನನ್ನೂ ಭಾವಗರ್ಭಿತ ದೃಷ್ಟಿಯಿಂದ ನಿಟ್ಟಿಸಿ ನೋಡಿದನು. ಸ್ಯಾಮ್ಯುಯಲ್ಲನ ಮುಖದಲ್ಲಿ ನಿರಾಶೆಯು ಎದ್ದು ಕಾಣಿಸುತ್ತಿತ್ತು. ಫ್ರೆಡರಿಕನ ಮುಖದಲ್ಲಿ ಕ್ರೋಧವು ಉಕ್ಕಿ ಹರಿಯು

ತ್ತಿತ್ತು. ಪೀಟರನಿಗೆ ಪ್ರ ತ್ಯು ತ್ತ ರ ದೊರೆಯುವಂತಾಯಿತು. ಆದರೂ ಅವನು ಕೇಳಿದನು :

ಪೀ : ಏನಿದು ಫ್ರೆಡರಿಕ್ ? ಯಾತಕ್ಕೆ ?

ಫ್ರೆಡರಿಕನು ಸ್ಯಾಮ್ಯುಯಲ್ಲನನ್ನು ತೋ ೯ ರಿ ಸಿ ದ ನು. ಪೀಟರನು ಅವನನ್ನು ನೋಡಿ ಕೇಳಿದನು :

ಪೀ : ಇನ್ನೇನು ಸ್ಯಾಮ್ಯುಯಲ್ ! ಇವರೇಕೆ ಕೋಪಗೊಂಡಿದ್ದಾರೆ ?

ಸ್ಯಾ : ನನ್ನ ಪಾಲು ಧಣಿಗಳೇ !

ಪೀ ; ನಿನ್ನ ಪಾಲು ! ನಿನಗೂ ಈಗಲೇ ಅವಸರವೇ ಸ್ಯಾಮ್ಯುಯಲ್ ?

ಸ್ಯಾ : ಹಾಗೆಂದರೇನು ಧಣಿಗಳೇ ?

ಪೀ : ಆಗಲಿ; ಕೊಟ್ಟರಾಯಿತು. ಇದು ಅಷ್ಟಕ್ಕೂ ಮುಂಗಡ ತಾನೇ ?

ಸ್ಯಾ : ಅದರಲ್ಲಿ ನನ್ನ ಪಾಲು ಕೊಡಿ.

ಪೀ : ಅದೇಕೆ ? ಬಾಕಿ ಬಂದಾಗ ಕೊಟ್ಟರಾಗದೇ ?

ಸ್ಯಾ : ನಾಳೆ ಮಾತು ನಾಶ ; 'ನಾಳೆ' ಯನ್ನು ನಂಬಬಾರದು. ಇಂದಿನದು ಇಂದೇ ಆಗಲಿ.

ಪೀ : ಮುಂದೆ ನೋಡೋಣ ಸ್ಯಾಮ್ಯುಯಲ್ !

ಸ್ಯಾ : ಆಗದು ಧಣಿಗಳೇ ! ನನ್ನ ಹೆಂಡತಿ ಮಕ್ಕಳು ಹೊಟ್ಟೆಗಿಲ್ಲದೆ ಸಾಯು ತ್ತಿದ್ದಾರೆ. ಛಳಿಗಾಲವು ಬೇರೆ ಬಂದುಬಿಟ್ಟಿತು. ಶಾಖವಾದ ಉಡುಪು ಗಳನ್ನು ಕೊಂಡಿರಿಸಿಕೊಳ್ಳಬೇಕು. ಹೋದ ವರ್ಷ ಫಿಲಿಪ್ಸನು ಕೊಟ್ಟ ಉಣ್ಣೆ ಉಡುಪುಗಳಿಗೆ ಇನ್ನೂ ಹಣ ಕೊಟ್ಟಿಲ್ಲ. ಕೈಸಾಲ ತಿರುಗಿಸಿ ಕೊಟ್ಟ ಹೊರತು ಟಾಮಿಲ್‌ಸನ್ನನು ಮನೆಬಾಗಿಲು ಬಿಟ್ಟು ಆಚೆಗೆ ಕದಲುವುದಿಲ್ಲ ವಂತೆ. ಮೂರು ದಿವಸಗಳಿಂದ ರಂಪುಮಾಡುತ್ತ ಕುಳಿತು ಬಿಟ್ಟಿದ್ದಾನೆ.

ಕಂದಾಯಬೇರೆ ಕಟ್ಟಿಲ್ಲ. ವೈಸಾಲಕ್ಕೆ ವರಾತು ಬಂದಿದೆ. ದಿನಸಿ ವರ್ತಕ ಬೆನ್ನ ಹಿಂದೆ ಆಳು ಕಳುಹಿಸಿದ್ದಾನೆ. ಅರ್ಥರನ ಕೈಸಾಲ ತೀರದೆ ಅವನು ಮನೆಕಡೆ ಮುಖತೋರಿಸದೆ ಹುದುಗಿಕೊಂಡು ಅಲೆಯುತ್ತಿದ್ದಾನೆ. ಲ್ಯಾಸಿ ಸಾಲಗಳು ಅವಳನ್ನು ಕೊಲ್ಲುತ್ತಿವೆ. ಹೀಗೆ ಮಿತಿ ಮಿಂಚಿ ನನಗೂ ತಲೆಯ ಮೇಲೆ ಸಾಲಗಳು ಬೆಳೆದುಬಿಟ್ಟಿವೆ. ಬಡವನಾದ ನನಗೆ ಅದೇ ಬೆಟ್ಟದಂತೆ! ಅದಕ್ಕಾಗಿಯೇ ಫ್ರೆಡರಿಕನನ್ನು ಒಡಂಬಡಿಸಿ ಇಲ್ಲಿಗೆ ಕರೆತಂದೆನು. ಕೊಡಿ; ನನ್ನ ಪಾಲನ್ನು ಕೊಡಿ. ನಿಮಗೆ ಪುಣ್ಯ ಬರುತ್ತದೆ. ಈಗ ಕೊಟ್ಟರೆ ಸುಮ್ಮನೆ ಕೊಟ್ಟಂತಾಗುತ್ತದೆ.

ಪೀ : ಕೊಡುತ್ತೇನೆ ಸ್ಯಾಮ್ಯುಯಲ್! ಕೊಡದೆ ಎಲ್ಲಿ ಹೋಗುತ್ತೇನೆ? ಇಲ್ಲ ವೆಂದು ಹೇಳಿದೆನೆ ಈಗ? .........ಆದರೆ.........

ಸ್ಯಾ : ಆದರೆ .........ಗೀದರೆ ಬೇಡ. ಹಿಂದಿನ ಬಾಕಿ ಐವತ್ತು–ಅದನ್ನೂ ಕೊಡಿ.

ಪೀ : ಚೆನ್ನಾಯಿತು ಸ್ಯಾಮ್ಯುಯಲ್!

ಸ್ಯಾಮ್ಯುಯಲ್ಲನು ಹಿಂದೆಂದೂ ತನ್ನ ಧಣಿಯೊಂದಿಗೆ ಇಷ್ಟೊಂದು ಧೈರ್ಯದಿಂದ ಮಾತನಾಡಿರಲಿಲ್ಲ. ಇಂದವನಿಗೆ ಫ್ರೆಡರಿಕನ ಬೆಂಬಲವಿದ್ದಿತು; ಮೇಲಾಗಿ ತನ್ನ ಸತ್ಯದ ಬಲವೇ ಸ್ಯಾಮ್ಯುಯಲ್ಲನಿಗೆ ಹಿರಿಯ ಬಲವಾಗಿದ್ದಿತು. ಅವನೀಗ ನಿಜವಾಗಿ ಸಾಲಪೀಡಿತ. ಆವನ ಅವಸರವು ಅತ್ಯಂತ ಸಮಂಜಸವೂ, ಸಮಯೋಚಿತವೂ ಆಗಿದ್ದಿತು. ಧಣಿಯಿಂದ ಹಿಂದಿನ ಗುತ್ತಿಗೆ ಬಾಕಿ ಅವನಿಗೆ ಐವತ್ತು ಬರದೆ ನಿಂತಿದ್ದಿತು. ಈಗಿನದು–ಮುಂಗಡ ದಲ್ಲಿ ಕಾಲುಭಾಗ---ಐವತ್ತು ಬೇರೆ. ಇವೆರಡೂ ಬಂದರೆ ಅವನ ಬಾಳೂ ಕೋಲಾಹಲವಾಗಿ ನಲಿಯುವಂತಿತ್ತು. ಹೀಗೆ ನ್ಯಾಯವನ್ನೂ, ಸತ್ಯವನ್ನೂ ಫ್ರೆಡರಿಕನ ಸಹಾನುಭೂತಿಯನ್ನೂ ಹಿರಿಯ ಬಲವನ್ನಾಗಿರಿಸಿಕೊಂಡು ಅವನು ಪೀಟರನನ್ನು ಮತ್ತೆ ಕೇಳಿದನು:

ಸ್ಯಾ : ಆದರೆ ಗೀದರೆ ಎನ್ನುವ ಮಾತೊಂದೂ ಈಗ ಬೇಡ ಧಣಿಗಳೇ!

ಪೀ : ಏನಯ್ಯ ಹಾಗಂದರೆ?

ಸ್ಯಾ : ನೀವು ಒಬ್ಬೊಂಟಿಗರು.....ಧನವಂತರು.....ನಿಮಗೇ ಅವಸರವಿಷ್ಟರೆ..... ನಾನು ದೊಡ್ಡ ಕುಟುಂಬಿ......ಬಡವ.....ನನಗಿಲ್ಲವೆ ಅವಸರ?

ಪೀ : ಏನು ಮಾಡಬೇಕೆನ್ನುತ್ತಿ ಸ್ಯಾಮ್ಯುಯಲ್?

ಸ್ಯಾ : ನೀವು ನನಗೆ ಕೊಡಬೇಕಾದ್ದನ್ನು ಕೊಡಿ. ಇಲ್ಲದಿದ್ದರೆ ನಾನು ಪ್ರಾಣ ಕಳೆದುಕೊಳ್ಳುವಂತಾದೀತು ಧಣಿಗಳೇ! ಹಾಗೇನಾದರೂ ಆದಲ್ಲಿ ನನ್ನ ಆರ್ಥರನು ಸಿಟ್ಟಿಗೆದ್ದಾನು. ತಲೆ ಕಾಲು ತಿಳಿಯದೆ ಕುಣಿದಾಡಿಬಿಟ್ಟಾನು. ಕೊಡಿ; ಕೊಡಿ. ಸಮಯಕ್ಕಿಲ್ಲದ ಅರ್ಥ ಸಾವಿರವಿದ್ದರೂ ವ್ಯರ್ಥ!

ಸ್ಯಾಮ್ಯುಯಲ್ಲನು ಧೈರ್ಯದಿಂದಲೇ ಮಾತನಾಡಿದ. ಇದನ್ನು ಕಂಡು ಪೀಟರನಿಗೆ ಆಶ್ಚರ್ಯವಾಯಿತು. ಅವನೀಗ ಯೋಚನೆಯಲ್ಲಿ ಮಗ್ನ ನಾದನು. ಎಲ್ಲವನ್ನೂ ಕೇಳುತ್ತ ಫ್ರೆಡರಿಕನು ಬೇರೆ ತನ್ನ ಮುಂಗಡ ಕಾಣಿತಿ ದ್ದಾನೆ. ಆ ಇನ್ನೂರು -- ಮುಂಗಡ ಹಣ — ಅಂದೇ .... ಆ ಅತ್ಯವಸರ ಕಾಲಕ್ಕೇ ಬಂದೀತೆಂದು -- ಅವನು ನಿರೀಕ್ಷಿಸಿರಲಿಲ್ಲ. ಆದರೆ? ಪೀಟರನು ಯೋಚಿಸಿದನು:

"ಅಕಸ್ಮಾತ್ತಾಗಿ ಒದಗಿಬಂದ ಈ ಹಣವನ್ನು ಕಂಡು ನಾನು ಹರ್ಷಿತ ನಾಗಿದ್ದೆ. ಆದರೆ ಇದೇನಿದು? ಕೊಟ್ಟ ಹಾಗೆ ಕೊಟ್ಟು ಮರುಕ್ಷಣದಲ್ಲಿಯೇ ಅದನ್ನು ನನ್ನಿಂದ ಕಸಿದುಕೊಳ್ಳುವ ಹಂಚಿಕೆಯನ್ನು ಇವರಿಬ್ಬರೂ ಹೂಡಿದ್ದಾರೆ. ಒಂದೆಡೆ--ಫ್ರೆಡರಿಕ್ ..... ಮುಂಗಡವನ್ನೇ ತಿರುಗಿಸಿಕೊಡು ವಂತೆ ಇವನು ಒತ್ತಾಯಪಡಿಸುತ್ತಿದ್ದಾನೆ. ಮತ್ತೊಂದೆಡೆ—ಸ್ಯಾಮ್ಯು ಯಲ್.....'ಈಗಿನ ಪಾಲನ್ನು ಕೊಡಿ; ಹಿಂದಿನ ಪಾಲಿನ ಬಾಕಿಯನ್ನೂ ಕೊಟ್ಟುಬಿಡಿ' ಎಂದು ಇವನು ಹಠತೊಟ್ಟು ಇದ್ದಡೆಯನ್ನು ಬಿಟ್ಟು ಕದಲದೆ ಕುಳಿತಿದ್ದಾನೆ. ಏನು ಮಾಡಲಿ? ..... ಈಗ ಏನನ್ನು ತಾನೇ ಮಾಡಲಿ? ಈ ಕೊನೆಯ ಚೀಲ .... ನನ್ನ ಅವಸರವನ್ನು ಇವರಿಬ್ಬರೇನು ಬಲ್ಲರು? ಅದರ ವಿಚಾರ ಇವರಲ್ಲಿ ..... ಏಕೆ? ಯಾರಲ್ಲಿಯೂ ನಾನು ಹೇಳಿ ಕೊಳ್ಳುವಂತೆಯೇ ಇಲ್ಲ."

ಹೌದು; ಪೀಟರನ ಚಿಂತೆ ಪ್ರಬಲವಾಯಿತು. ಎಷ್ಟು ಬಂದರೂ ತೆಗೆದುಕೊಳ್ಳಲು ಅವನೂ ಸದಾ ಸಿದ್ಧ. ಆದರೆ ಕೊಡಬೇಕಾದುದನ್ನು ಕೊಡಿ ಎಂದು ಅವನನ್ನು ಯಾರಾದರೂ ಕೇಳಿದರೆ ಅವನಿಗೆ ಎಲ್ಲಿಲ್ಲದ ಕೋಪ; ಅತ್ಯಂತ ಸಂಕಟ. 'ಈಗ ಬಾ, ಆಗ ಬಾ, ಹೋಗಿ ಬಾ' ಎಂದು ಹೆಣಗಾಡಿಸುವ ಪ್ರಕೃತಿ ಅವನದು. ಏತನ್ಮಧ್ಯೆ 'ಎಪ್ಪತ್ತನೆಯ ಚೀಲವು ತುಂಬುವುದಕ್ಕೆ ಎಷ್ಟೊಂದು ಎಡರು ತೊಡರುಗಳು?' ಎಂಬ ವಿಷಾದ ಬೇರೆ—ಪೀಟರನ ಮನಸ್ಸಿನಲ್ಲಿ. ಹೇಗಾದರೂ ಕೊನೆಯ ಚೀಲವನ್ನು ತುಂಬಿ, ಮೊಹರು ಮಾಡಿ, ನೆಲಮಾಳಿಗೆಯೊಳಗಿರಿಸಿ ಬರಬೇಕೆಂಬ ಕಾತುರತೆ—ಅವನಿಗೆ. ಆದಕ್ಕೆ ಫ್ರೆಡರಿಕನ—ಸ್ಯಾಮ್ಯುಯಲ್ಲನ—ಅಡಚಣೆ. ಮಾತ್ರವಲ್ಲ; ಫ್ರೆಡರಿಕನನ್ನು ಬೇರೆ ಸಾಕ್ಷಿ ಇಟ್ಟು ಅನಿರೀಕ್ಷಿತವಾಗಿ ಸ್ಯಾಮ್ಯುಯಲ್ಲನು ತನ್ನ ಮುಂದೆ ತಂದೊಡ್ಡಿದ ಸಮಸ್ಯೆಯನ್ನು ಬಗೆಹರಿಸಲಾರದೆ, ಬೇಸತ್ತು, ಕೈ ಕೈ ಹಿಸುಕುತ್ತ ಪೀಟರನು ಕೇಳಿದನು:

"ಏನು ಮಾಡಲಿ ಸ್ಯಾಮ್ಯುಯಲ್? ನನಗೂ ಅವಸರವಾಗಿ ಹಣವು ಬೇಕಾಗಿದೆ."

ಸ್ಯಾ: ನಿಮಗೆ ಬೇಡದ್ದು ಯಾವಾಗ? ಏತಕ್ಕೆ ಎಂದು ಮಾತ್ರ ತಿಳಿಯಲಿಲ್ಲ.

ಪೀ: ಅದನ್ನೆಲ್ಲ ಕಟ್ಟಿಕೊಂಡು ನಿಮಗೇನು?

ಸ್ಯಾ: ಡೇನಿಯಲ್ ಅಣ್ಣನಿಗೆ ಹೋದ ತಿಂಗಳಿನ ಸಂಬಳ ಇನ್ನೂ ಕೊಟ್ಟಿಲ್ಲವಂತೆ!

ಈ ಮಾತುಗಳು ಕಿವಿಯಲ್ಲಿ ಬಿದ್ದರೂ ಬೀಳದಂತೆ ನಟಿಸುತ್ತ ಪೀಟರನು ಹೇಳಿದನು:

"ಅವಸರವಾಗಿ ಹಣವು ಬೇಕಾಗಿದ್ದುದರಿಂದಲೇ ನಾನೂರಕ್ಕೆ ನಾನು ಒಪ್ಪಿದ್ದು.....ಇಲ್ಲದಿದ್ದರೆ.....ಅದಿರಲಿ..... ಈಗಲೇ ನೀನೂ ಬೇಕೆನ್ನುತ್ತಿರುವೆ. ಏನು ಮಾಡಲಿ?

ಸ್ಯಾ: ಸುಳ್ಳು ಹೇಳುವುದು ನನಗೆ ಬಾರದು ಧಣಿಗಳೇ? ಆದರೆ ಸುಳ್ಳು

ಹೇಳುವವರನ್ನು ಕಂಡರೆ ನನಗೆ ಕೆಂಡದಂತೆ ಕೋಪ. ಅತ್ಯಗತ್ಯವಾಗಿ– ಅತ್ಯವಸರವಾಗಿ ಬೇಕು. ಬೇಡದಿದ್ದರೆ ನಾನು ಖಂಡಿತವಾಗಿಯೂ ತೊಂದರೆ ಕೊಡತಕ್ಕವನಲ್ಲ. ಹಿಂದಿನ ಬಾಕಿ ಐವತ್ತು ಹೊನ್ನು ನಿಮ್ಮ ಮೇಲೆಯೇ ಇಲ್ಲವೆ? ಹತ್ತು ವರ್ಷಗಳಿಂದಲೂ ನನ್ನನ್ನು ಬಲ್ಲಿರಿ.

ಪೀ : ಬಲ್ಲೆ ಸ್ಯಾಮ್ಯುಯಲ್! ಇಲ್ಲ ಎನ್ನಲಿಲ್ಲ.

ಸ್ಯಾ : ಆದರೂ ನನ್ನ ಗುಣವನ್ನು ನೀವು ಕಂಡು ಕೊಳ್ಳಲಿಲ್ಲ. ನೋಡಿ ನನ್ನ ಜತೆಗಾರರು — ನನ್ನೊಡನೆ ತೋಟದ ಗುತ್ತಿಗೆಗಳನ್ನು ಹಿಡಿದವರು —ಈಗ ಸ್ವಂತವಾಗಿ ತೋಟದ ಮಾಲಕರಾಗಿದ್ದಾರೆ. ನಿಮ್ಮ ಬಳಿ ಗುತ್ತಿಗೆಗೆ ನಿಂತ ನನ್ನ ಪಾಡು ನೋಡಿ ಹೇಗಿದೆ? ನನ್ನ ಬಡತನವನ್ನು ಕಂಡು ನನಗೇ ನಾಚಿಕೆಯಾಗಿದೆ. ಈ ವೇಳೆಗೆ ಎಷ್ಟೋ ಮಾಲೀಕರು ನನ್ನನ್ನು ಕರೆದರು. ನಿಮ್ಮನ್ನು ಬಿಡಲು ನನ್ನ ಮನಸ್ಸು ಒಡಂಬಡಲಿಲ್ಲ. ನಿಮ್ಮಲ್ಲಿ ನಾನು ಹೇಗೆ ಬಂದು ಸೇರಿದನೋ ನನಗೇ ಗೊತ್ತಾಗದೆ ಇದೆ. ದೇವರ ಇಚ್ಛೆ! ಅದನ್ನು ಕಂಡವರಾರು?

ಇಷ್ಟು ಹೇಳಿಸಿಕೊಂಡರೂ ಪೀಟರನು ನೋಲಲಿಲ್ಲ. ಅವನ ಎದೆ ಉಕ್ಕಿಗಿಂತಲೂ ಕಠಿಣವಾಗಿತ್ತು.

ಪೀ : ಆಗಬಹುದು ಸ್ಯಾಮ್ಯುಯಲ್! ಇರಲಿ ನೋಡೋಣ.

ಸ್ಯಾ : ಹಾಗೆಂದರೇನು ಧಣಿಗಳೇ?

ಪೀ : ಇರಲಿ, ನೋಡೋಣ. ಕೊಟ್ಟರಾಯಿತು; ಕೊಡೋಣ.

ಸ್ಯಾ : ಯಾವಾಗ? ಈಗ ಬೇಕು.

ಪೀ : ಈಗ?

ಸ್ಯಾ : ಹೌದು; ಈಗ.

ಪೀ : ಈಗ ಇನ್ನೂರು ಮಾತ್ರ ಬಂದಿದೆ ...... ಅದರಲ್ಲಿಯೂ ಒಂದು ನಾಣ್ಯ

ಪೆಚ್ಚಾಗಿದೆ. ಇರಲಿ; ಅದರ ಮಾತು ಹಾಗಿರಲಿ.

ಸ್ಯಾ : ನಿಮ್ಮ ಕಣಿ ಕೇಳಿಕೊಂಡಿರುವಷ್ಟು ವ್ಯವಧಾನ ನನಗಿರಬೇಕಲ್ಲ ?

ಪೀ : ಆಗಲಿ; ಉಳಿದ ಮುಂಗಡ ಇನ್ನೂರು ಬರಲಿ. ಆಗ ನಿನ್ನ ಪಾಲು ನೂರು ಕೊಡುತ್ತೇನೆ. ಹೇಳು ..... ನಿನ್ನ ಸಾಲಗಾರರಿಗೆ ಹೇಳು; 'ಬರುವುದಿದೆ : ಕೊಡುತ್ತೇನೆ' ಎನ್ನು. ಏನು ಮಾಡುತ್ತಾರೆ? 'ಆಗಲಿ' ಎಂದು ಒಪ್ಪಿಕೊಳ್ಳುತ್ತಾರೆ.

ಪೀಟರನ ಈ ಮೆತ್ತನೆಯ ಮಾತುಗಳನ್ನು—ಜಾರಿಕೊಳ್ಳುವ ಕಪಟದ ಮಾತುಗಳನ್ನು ಕೇಳಿ ಸ್ಯಾಮ್ಯುಯಲ್ಲನಿಗೆ ಹೊಟ್ಟೆಯಲ್ಲಿ ಬೆಂಕಿ ಹೊತ್ತಿಸಿ ಇಟ್ಟಂತಾಯಿತು.

ಸ್ಯಾ : ಹಾಗಾಗದು ಧಣಿಗಳೇ ! ಈಗ ನೂರು ಕೊಡಿ; ಉಳಿದ ಮುಂಗಡ ಬಂದಾಗ ಐವತ್ತು ಕೊಟ್ಟು ಮಿಕ್ಕಿದ್ದನ್ನು ನೀವೇ ಇಟ್ಟುಕೊಳ್ಳಿ.

ಪೀ : ನೂರು !

ಸ್ಯಾ : ಏಕೆ ಧಣಿಗಳೇ? ಇನ್ನೂರರಲ್ಲಿ ಕಾಲು ಪಾಲು ಐವತ್ತು; ಹಿಡಿದಿಟ್ಟಿರುವ ಹಿಂದಿನ ಬಾಕಿ ಐವತ್ತು; ನೂರಾಗಲಿಲ್ಲವೆ ?

ಪೀ : ಸ್ಯಾಮ್ಯುಯಲ್ ! ಏನಿದು ನಿನ್ನ ಹುಚ್ಚು ಮಾತು ?

ಸ್ಯಾ : ಇರಬಹುದು; ನೀವಾಡಿದುದು ಅಚ್ಚುಮೆಚ್ಚಿನ ಮಾತು; ನಾನಾಡುವುದು ಹುಚ್ಚು ಮಾತು !

ಪೀ : ಹೌದಯ್ಯ ! ಹುಚ್ಚಲ್ಲದೆ ಮತ್ತೇನು ?

ಸ್ಯಾ : ಹುಚ್ಚು ಹಿಡಿಸಿದವರೇ ನೀವು !

ಪೀ : ಏನೆಂದೆ ? ..... ..... ಹೋಗಲಿ ..... ಅಲ್ಲ; ಐವತ್ತೇ ಇವತ್ತಾಗದು ಎಂದು ನಾನು ಹೇಳುತ್ತಿರುವಾಗ ..... .....

ಸ್ಯಾ : ನಿಮ್ಮನ್ನು ಕೇಳಿದರೆ ಐವೂ ಆಗದು ಎಂದೀರಿ ....

ಪೀ : ಇರಲಿ ; ಐವತ್ತಾಗದು ಎಂದಾಗ ನೂರು ಕೊಡು ಎಂದು ಧಾರಾಳವಾಗಿ ಕೇಳಿಬಿಟ್ಟೆಯಲ್ಲ. ಅಲ್ಲ ..... ಕೇಳುವುದಕ್ಕೆ ನಿನಗೆ ಬಾಯಾದರೂ ಹೇಗೆ ಬಂತು ಎನ್ನುತ್ತೇನೆ.

ಸ್ಯಾ : ' ಬಾಯಿಲ್ಲದೆ ಬಡವ ಕೆಟ್ಟ ; ಬಾಯಿ ಬಡಿದು ಭಾಗ್ಯವಂತ ಕೆಟ್ಟ ' ಎಂದು ಗಾದೆ ಇದೆ ಧಣಿಗಳೇ !

ಪೀ : ಗಾದೆಗಳಿಗೇನಯ್ಯ ? ಸೋಮಾರಿಗಳ ತಲೆಯಲ್ಲಿ ಮೊಳೆತು ಬೆಳೆದಾವು ಬೇಕಾದಷ್ಟು !

ಸ್ಯಾ : ಸೋಮಾರಿಗಳ ಗುಂಪಿಗೆ ಸೇರಿದವನೇ ನಾನು ?

ಪೀ ; ಛೀ ! ಛೀ ! ಹಾಗೆನ್ನಬೇಡ ಸ್ಯಾಮ್ಯುಯಲ್ ! ನಿನ್ನನ್ನು ಸೋಮಾರಿ ಎಂದು ಕರೆಯಲೇ ? ಏನು ಮಾತು ಇದೆಲ್ಲ ?

ಸ್ಯಾ : ಹೇಗಾದರೂ ಆಗಲಿ ; ಕೊಡಿ. ಹಣವನ್ನು ಕೊಡಿ.

ಪೀ : ಕೊಡುತ್ತೇನೆ ; ಸ್ವಲ್ಪ ತಡಿ.

ಸ್ಯಾ : ಅದಕ್ಕೇ ಹೇಳಿದ್ದು. ಕೇಳಿದರೂ ಕೊಡದವರು ನೀವು — ಇನ್ನು ಕೇಳದೆಯೇ ಇದ್ದರೆ ಕೊಟ್ಟೀರಾ ?

ಪೀ : ಕೊಡಲಾರೆ ಎಂದನೇ ಈಗ ?

ಸ್ಯಾ : ಅಂದದ್ದಾದರೂ ಏನಂತೆ ? ಕರೆದರೇನೇ ಔತಣಕ್ಕೆ ಬಾರದವನು ಕರೆಯದೆಯೇ ಬಂದಾನೇ ? ನೀವು ಕೊಡುಗಿಡುವ ಮಾತು ನೆಚ್ಚಿಕೆ ಸಾಲದು. ಎಂದೋ ಯಾವಾಗಲೋ ಕೊಡುವ ಮಾತು ಬೇಡ.

ಪೀ : ಅಲ್ಲಿಗೆ ನೀನು ಹೇಳುವುದಾದರೂ ಏನು ?

ಸ್ಯಾ : ಹೊತ್ತು ಮುಳುಗುತ್ತಿದೆ ಧಣಿಗಳೇ ! ಹೇಳುವುದೇನು ? ಕೇಳುವುದೇನು ? ಹೇಳಿ ಕೇಳುವ ಕಾಲವೆಲ್ಲ ಹೋಯಿತು. ಕೊಟ್ಟು

ಹರಿಸಿಕೊಳ್ಳುವ ಕಾಲ ಇದು.

ಪೀ : ಹುಂ! ಆಯಿತಪ್ಪ! ಆಮೇಲೆ?

ಸ್ಯಾ : ಇಂದಿನದು ಐವತ್ತು — ಹಿಂದಿನದು ಐವತ್ತು —ಒಟ್ಟು ನೂರು ಕೊಟ್ಟು ಬಿಡಿ.

ಪೀ : ಇಷ್ಟೊಂದು ಖಂಡಿತವಾದರೆ ಹೇಗಯ್ಯ?

ಸ್ಯಾ : ಕೊಡಬೇಕಾಗಿದ್ದುದನ್ನು ಕೇಳದೆಯೇ ಕೊಡುವವರ ಬಳಿ—ದಣಿಸದೆ ಕೊಡುವವರ ಬಳಿ — ಖಂಡಿತವಾಗಿ ಆಡಕೂಡದು. ಆದರೆ ಕೇಳಿದರೂ ಕೊಡದ ನಿಮ್ಮ ಬಳಿ ...... ......

ಪೀ : ಏನು? ಏನಯ್ಯ ನೀನು ಹೇಳುತ್ತಿರುವುದು?

ಸ್ಯಾ : ಇಷ್ಟೇ – ನೂರು ಕೊಟ್ಟು ಬಿಡಿ. ತೋಟಕ್ಕೆ ಬೇರೆ ಏರ್ಪಾಡು ಮಾಡಿಕೊಳ್ಳಿ — ನಾಳೆಯಿಂದ. ಮಿತಿಮೀರಿ ದುಡಿದೂ ನ್ಯಾಯವಾಗಿ ಬರಬೇಕಾದ ಹಣಕ್ಕಾಗಿ ಹೀಗೆ ದಣಿಯುವುದು ನನ್ನ ಹಣೆಯಲ್ಲಿ ಬರೆಯಬೇಕಾಗಿತ್ತೇ? ಇಲ್ಲ; ಇದು ನನಗೆ ಸಾಧ್ಯವಿಲ್ಲ. ನನ್ನ ಮಾನ ಜೆಲ್ಲಾಡಿ ಹೋಗುತ್ತಿದೆ. ನನ್ನ ಕಷ್ಟ ನಷ್ಟಗಳನ್ನು ಭಗವಂತನೇ ಬಲ್ಲ. ಇಲ್ಲದಿದ್ದರೆ ಯಾತಕ್ಕಾದರೂ ಇವರನ್ನು ಇಲ್ಲಿಗೆ ಬ ಲ ವ ಂ ತ ಪ ಡಿ ಸಿ ಕರೆತರಬೇಕಾಗಿದ್ದಿತು? ಯೋಚಿಸಿ ನೋಡಿ — ನಿಧಾನವಾಗಿ.

ಪೀ : ಕರೆತಂದುದೇನೋ ಒಳ್ಳೆಯದಾಯಿತು ಸ್ಯಾಮ್ಯುಯಲ್!

ಸ್ಯಾ : ಒಳ್ಳೆಯದಲ್ಲದ್ದು ಯಾವುದು ಹಾಗಾದರೆ?

ಪೀ : ಆದರೆ ' ಈಗಲೇ ಐವತ್ತು ಕೊಡಿ; ನೂರು ಕೊಡಿ; ' ಎಂದೆಲ್ಲ ನೀನು ಕುತ್ತಿಗೆ ಹಿಸುಕುವುದು ಸರಿಯಲ್ಲ ಸ್ಯಾಮ್ಯುಯಲ್! ನಿನ್ನ ಮಾತು ನನಗರ್ಥವಾಗಲಿಲ್ಲ.

ಸ್ಯಾ : ಅರ್ಥವಾಗದೇನಂತೆ?; ನಾನು ಹೇಳಿದುದೆಲ್ಲ ಸತ್ಯವೇ. ಸತ್ಯಕ್ಕೆ

ಅರ್ಥವಿಲ್ಲವೆ ಪ್ರಭು ? ಹಾಗಿದ್ದರೆ ಇವರನ್ನು ಕರೆತಂದುದರಲ್ಲಿಯೂ ಅರ್ಥವಿಲ್ಲವೆ ?

ಷೀ : ಛೀ ! ಛೀ ! ಸ್ಯಾಮ್ಯುಯಲ್ ! ಕರೆತಂದುದು ಬಹಳ ಒಳ್ಳೆಯ ದಾಯಿತು; ಅದು ತಪ್ಪೆಂದು ನಾನು ಹೇಳಲಿಲ್ಲ. ಅದಕ್ಕಲ್ಲ ........... .... ಸ್ಯಾಮ್ಯುಯಲ್ ! ಅದಕ್ಕಲ್ಲ ...... ..... ನನಗೂ ಅತ್ಯವಸರವಾಗಿ ಹಣ ಬೇಕಾಗಿದೆ ...... ......

ಸ್ಯಾ : ನಿಮ್ಮ ಮಾತೇ ನಿಮಗೆ. ಫ್ರೆಡರಿಕ್ ಅಣ್ಣನನ್ನು ಕರೆತಂದುದು ಒಳ್ಳೆಯದೇ ಆಯಿತೆಂದಿರಿ. ಹಾಗಾದರೆ ಮತ್ತಾವುದು ತಪ್ಪು ಧಣಿಗಳೇ? ಅವರಿಂದ ಹಣ ಕೊಡಿಸಿದುದೂ ಒಳ್ಳೆಯದು. ಆ ಹಣದಲ್ಲಿ ನನಗೆ ನ್ಯಾಯವಾಗಿ ಬರಬೇಕಾದ ಪಾಲನ್ನು ಕೇಳುವುದು ತಪ್ಪೇ ? ಹಿಂದಿನ ಬಾಕಿ ಐವತ್ತು ಕೊಡಿ ಎಂದು ಕೇಳಿದ್ದೂ ತಪ್ಪೇ ? ಬೇಡ, ಬಿಡಿ ; ನನ್ನಲ್ಲಿ ಬೇಸರವಾದರೆ ಬೇರೆ ತೋಟಗಾರನನ್ನು ಇಟ್ಟುಕೊಳ್ಳಿ ; ಬೇಡವೆನ್ನಲಿಲ್ಲ.

ಈ ತೆರನೆ ಸ್ಯಾಮ್ಯುಯಲ್ಲನು ನಿರ್ಭಯನಾಗಿ ಹಿಂದೆಂದೂ ಕೇಳದ ರೀತಿಯಲ್ಲಿ ತಾನು ಕೇಳಬೇಕಾದುದನ್ನೆಲ್ಲ ಒಡೆದೊಡೆದು ಕೇಳಿಯೇ ಬಿಟ್ಟನು. ಮೊದಲೇ ಹೇಳಿದಂತೆ ಅವನಿಗೆ ಈ ಸಲ ಫ್ರೆಡರಿಕನ ಬೆಂಬಲ ಚೆನ್ನಾಗಿತ್ತು. ಹೀಗೆ ಧಣಿಯನ್ನು ಸ್ಪಷ್ಟವಾಗಿ ಕೇಳಿ ಬರಬೇಕಾದುದನ್ನು ಸಕಾಲದಲ್ಲಿ ತೆಗೆದು ಕೊಳ್ಳುವುದಿಲ್ಲನೆಂದೂ, ಅದರಿಂದಲೇ ಸಾಲಸೋಲಗಳು ಹೆಚ್ಚಿ ಕುಟುಂಬವು ಇಕ್ಕಟ್ಟಿನಲ್ಲಿ ಸಿಲುಕಿ ಬೀಳುವಂತಾಯಿತೆಂದೂ, ಲ್ಯೂಸಿಯೂ, ಆರ್ಥರನೂ, ಸ್ಯಾಮ್ಯುಯಲ್ಲನನ್ನು ನಿಷ್ಠೂರಪಡಿಸುತ್ತಿದ್ದರು. ತತ್ಕಾರಣದಿಂದಲೇ ಅನೇಕ ತಡವೆ ಅವರ ನಡುವೆ ವಿರಸವು ಹುಟ್ಟಿ ಬೆಳೆಯುತ್ತಿತ್ತು. ಸತಿಸುತರ ಆಕ್ಷೇಪಣೆಗಳಿಗೆ ಸ್ಯಾಮ್ಯುಯಲ್ಲನು ಈ ಸಲ ಸರಿಯಾದ ಸಮಾಧಾನವನ್ನೇ ಹೇಳಿದಂತಾಯಿತು.

ಆ ಮಾತು ಹಾಗಿರಲಿ ; ಸ್ಯಾಮ್ಯುಯಲ್ಲನು ಆಡಿದ ಮಾತುಗಳಿಂದ ಷೀಟರನ ಎದೆಯಲ್ಲಿ ಜ್ವಾಲಾಮುಖಿಯು ಆಸ್ಫೋಟನವಾದಂತಾಯಿತು.

“ ಬೇಡ, ಬಿಡಿ; ನನ್ನಲ್ಲಿ ಬೇಸರವಾದರೆ ಬೇರೆ ತೋಟಗಾರನನ್ನು ಇಟ್ಟುಕೊಳ್ಳಿ ; ಬೇಡವೆನ್ನಲಿಲ್ಲ. ”

ಸ್ಯಾಮ್ಯುಯಲ್ಲನ ಇಂತಹ ಸ್ಪಷ್ಟವಾದ ಮಾತುಗಳನ್ನು ಪೀಟರನು ನಿರೀಕ್ಷಿಸಿರಲಿಲ್ಲ; ಅದಕ್ಕೆ ಸಿದ್ಧನಾಗಿರಲಿಲ್ಲ; ಅದೂ ಎಪ್ಪತ್ತನೆಯ ಚೀಲವು ನೆಲಮಾಳಿಗೆಯ ಕಡೆ ಹೊರಡಬೇಕಾಗಿದ್ದ ಸಂಧಿಗ್ಧ ಸನ್ನಿವೇಶದಲ್ಲಿ! ನಮ್ರನಾದ ಸ್ಯಾಮ್ಯುಯಲ್ಲನಲ್ಲಿಯೂ ಇಷ್ಟೊಂದು ಪೌರುಷವಿದ್ದೀತೆಂದು ಅವನು ನಂಬಿರಲಿಲ್ಲ. ಮೇಲಾಗಿ ನೆಲಮಾಳಿಗೆಯನ್ನು ಕಟ್ಟಿಸುವಾಗ ಅವನನ್ನು ಹೊರಗೆ ಕರೆದು ರಹಸ್ಯ ರಕ್ಷಣೆಗಾಗಿ ಹತ್ತು ಹೊನ್ನುಗಳನ್ನು ಬಹುಮಾನವೆಂದು ಕೊಟ್ಟಾಗ ‘ ಇಷ್ಟೇಕೆ ಧಣಿಗಳೇ ? ’ ಎಂದು ಕೇಳಿದ್ದ ಅವನು ಇಂದು ಇಷ್ಟೊಂದು ಮಾತನಾಡಿದುದು ನಿಜವಾಗಿಯೂ ಅನಿರೀಕ್ಷಿತವೇ. ಅದೊಂದೆಡೆ ಇರಲಿ; ಬಹುಮಾನ ಪಡೆದ ಅವನು ತನ್ನ ರಹಸ್ಯವನ್ನು ಹೆಚ್ಚುಕಮ್ಮಿ ಬಲ್ಲವನಾಗಿದ್ದನು. ಗುತ್ತಿಗೆ ಹಣದ ವಿಚಾರವಾಗಿ ಇಂದವನು ತನ್ನ ಮೇಲೆ ತಿರುಗಿ ಬಿದ್ದಿದ್ದಾನೆ. ಹೀಗಾಗುತ್ತದೆಂದು ಪೀಟರನು ಎಳ್ಳಷ್ಟೂ ಎದಿರುನೋಡಿರಲಿಲ್ಲ. ಸಾಲದುದಕ್ಕೆ ಕೊಡಬೇಕಾದ್ದನ್ನು ಕೊಟ್ಟು ಬಿಟ್ಟು ‘ ಬೇರೆ ತೋಟಗಾರನನ್ನು ಇಟ್ಟು ಕೊಳ್ಳಿ ’ ಎಂದು ಬೇರೆ ಹೇಳಿಬಿಟ್ಟಿದ್ದಾನೆ. ಅಲ್ಲಿಗೆ ತನ್ನ ರಸಹ್ಯವು ಅವನಲ್ಲಿ ಕ್ಷೇಮವಾಗಿ ಉಳಿಯದು ಎಂಬ ಸಂಶಯವೂ, ಸಂಕಟವೂ ಪೀಟರನಲ್ಲಿ ತಲೆದೋರಿದುವು. ‘ ಇದಕ್ಕೂ ಮಿಂಚಿ ನೆಲಮಾಳಿಗೆಯ ವಿಚಾರವನ್ನು ಸ್ಯಾಮ್ಯುಯಲ್ಲನು ಫ್ರೆಡರಿಕನಲ್ಲಿ ಹೇಳಿರಬಹುದೇ ? ಅಥವಾ, ಹೇಳದೆ ಇದ್ದಾನೆಯೇ ? ಫ್ರೆಡರಿಕನು ಸರಕಾರಕ್ಕೆ ದೂರು ಕೊಟ್ಟರೆ? ಪೀಟರನಿಗೆ ಆಕಾಶವೇ ಕಳಚಿ ತಲೆಯಮೇಲೆ ಬಿದ್ದಂತಾಯಿತು. ಅಸತ್ಯಕ್ಕೆ ಅರುವತ್ತು ಕಡೆಗಳಿಂದಲೂ ಅಡ್ಡಿ ಅಡಚಣೆಗಳು. ‘ ಅಕ್ಕಿಯ ಮೇಲೆ ಆಸೆ, ನಂಟರ ಮೇಲೆ ಪ್ರೀತಿ ’ ಎಂಬಂತೆ ಪೀಟರನಿಗೀಗ ಉಭಯ ಸಂಕಟ. ‘ ಅವನು ಕೊಡ, ಇವನು ಬಿಡ ’ ಎಂಬಂತೆ ಆಯಿತು. ಪ್ರಾಣದೊಂದಿಗೆ ಪೀಟರನು ಕೊಡಲಾರ; ಪ್ರಾಣ ಹೋದರೂ ಕೊಟ್ಟ ಹೊರತು ಸ್ಯಾಮ್ಯುಯಲ್ಲನು ಬಿಡಲಾರ. ಅವನಿಗೆ ಕೊಡಬೇಕಾದ

ಪಾಲನ್ನೂ ಹಿಂದಿನ ಬಾಕಿಯನ್ನೂ ಕೊಟ್ಟುಬಿಟ್ಟನಂತರವೂ ಸ್ಯಾಮ್ಯುಯಲ್ಲನು ತನ್ನ ಬಳಿ ತೋಟಗಾರನಾಗಿನಿಲ್ಲಲಾರನೆಂಬ ಶಂಕೆ ಬೇರೆ ಪೀಟರನ ಮನಸ್ಸಿನಲ್ಲಿ ನೆಲಸಿ ಬೇರೂರಿತು. ಈ ಸಲ ಸ್ಯಾಮ್ಯುಯಲ್ಲನ ಧೋರಣೆ ಹಾಗಿದ್ದಿತು. ಪೀಟರನು ಇನ್ನೂ ಯೋಚಿಸಿ ನೋಡಿದನು :

" ಸ್ಯಾಮ್ಯುಯಲ್ ನನ್ನನ್ನು ಬಿಟ್ಟರೆ ..... ತೋಟದ ಗತಿ ? ಹಣ್ಣು ಹಂಪಲುಗಳಿಗೆ ಕಾವಲುಗಾರನಿಲ್ಲದಮೇಲೆ ...... ಫ್ರೆಡರಿಕನ ಮುಂಗಡ ..... ..... ಉಳಿದ ಬಾಕಿ ..... ಅದನ್ನು ಫ್ರೆಡರಿಕನು ಕೊಟ್ಟಾನೇ ? ತೋಟದ ವ್ಯವಸ್ಥೆ ನೋಡುವುದಕ್ಕೆ ತೋಟಗಾರನಿದ್ದೇ ಇರಬೇಕು. ಅಲ್ಲಿಗೆ ? ...... ...... ..... ಸ್ಯಾಮ್ಯುಯಲ್ಲನು ಕೇಳಿದ್ದನ್ನು ಅವನಿಗೆ ಕೊಟ್ಟೇ ತೀರಬೇಕು .... ಕೊಡದಿದ್ದರೆ ಅವನು ನಿಲ್ಲಲಾರ ..... ಅವನು ಹೋದರೆ ತೋಟದ ಪಾಡು ..... ? ನೆಲ ಮಾಳಿಗೆಯ ರಹಸ್ಯ ..... ? ಇದರಲ್ಲಿ ಫ್ರೆಡರಿಕನು ಬೇರೆ ಕೊಟ್ಟ ಮುಂಗಡ ವನ್ನು ಹಿಂತಿರುಗಿಸಿ ಕೊಟ್ಟುಬಿಡುವಂತೆ ಕೇಳುತ್ತಿದ್ದಾನೆ. ಕೊಟ್ಟು ಬಿಡಲೆ? ...... ಆಗ ಎಪ್ಪತ್ತನೆಯ ಚೀಲ ? ...... ... . ಅದು ತುಂಬುವುದೆಂತು ? ಹಿಂದಿನ ಬಾಕಿ ಐವತ್ತು ಸ್ಯಾಮ್ಯುಯಲ್ಲನಿಗೆ ಕೊಡಬೇಕು .... (ಧಿಕ್ ! ಧಿಕ್ ! ಮನಸ್ಸಾಕ್ಷಿ ! ' ಏಕೆ ? ಸರಿಯಾಗಿ ಲೆಕ್ಕಹಾಕಿ ನೋಡು ..... ತೋಟಗಾರನು ಕಾಣದಂತೆ ಅವನ ಪಾಲನ್ನು ಮಾರಿದ್ದಿ..... ಅದರ ಬೆಲೆ ಲೆಕ್ಕಕ್ಕೆ ಬರವೊಲ್ಲದೆ? ಲೆಕ್ಕಹಾಕಿ ನೋಡು ...... ನೂರೈವತ್ತೇ ಕೊಡಬೇಕಾದೀತು.') ಹೌದು; ಬಾಕಿ ಐವತ್ತು ಕೊಡಬೇಕು. ಎಲ್ಲಿಂದ ಕೊಡುವುದು ? .... ತುಂಬದ ಚೀಲದಿಂದಲೇ? ಆಗ ಅದು ಇದ್ದುದೂ ಬಡವಾಗುತ್ತದೆ. ಕೊಡದೆ ಇರಲೇ ? ..... ..... ಆಗ ಸ್ಯಾಮ್ಯುಯಲ್ಲನು ಗುತ್ತಿಗೆ ಬಿಡುತ್ತಾನೆ. ಕೊಟ್ಟಮೇಲೂ ಬಿಟ್ಟುಬಿಡತಕ್ಕ ವನು ಅವನು. ಇನ್ನು ಕೊಡದಿದ್ದರೆ ಗುತ್ತಿಗೆ ಹಿಡಿದು ನಿಂತಾನೇ ? ಅವನು ಹಾಗೆ ನನ್ನಿಂದ ಅಗಲಿ ಹೋದರೆ? ನನ್ನ ರಹಸ್ಯವನ್ನು ಬಯಲಿಗೆಳೆದರೆ ? ನನ್ನ ವಿಚಾರ ಅವನಿಗೇನೇನೂ ತಿಳಿಯದು ಎಂದಿದ್ದೆ..... ಆದರೆ ಡೇನಿಯಲ್ಲನಿಗೆ ಸಂಬಳ ಕೊಡದಿರುವುದನ್ನೂ ಅವನು ಬಲ್ಲ ! ಅವನಾಡುವ ಮಾತುಗಳನ್ನು ನೋಡಿದರೆ ತೋರಿಕೆಗೆ ಕಾಣುವಂತೆ ಅವನೇನೂ ದಡ್ಡನಲ್ಲ. ಅವನು ಬೇರೆ

ಹೋದಾನು ........... ರಹಸ್ಯವು ಬಯಲಾದೀತು. ಏನು ಮಾಡಲಿ ? ಹೌದು; ಬಯಲಾದೀತು ; ಖಂಡಿತ ! ಆಗ .... ಆಗ ? ಅಧಿಕಾರಿಗಳು ಬಂದಾರು ; ನೆಲಮಾಳಿಗೆಯನ್ನು ಶೋಧಿಸಿಯಾರು; ಅದರಲ್ಲಿರುವ ಎಪ್ಪತ್ತು ಚೀಲ ಹೊನ್ನನ್ನೂ ಹೊರಿಸಿ ಹೊರತಂದಾರು; ಸರಕಾರದ ಭಂಡಾರಕ್ಕೆ ಸೇರಿಸಿ ಯಾರು. ನಾನಾಗಿ ನನ್ನ ತಲೆಯ ಮೇಲೆ ಕಲ್ಲೆಳೆದುಕೊಳ್ಳಲೇ ? ”

ಪೀಟರನು ಯೋಚಿಸಿದನು; ಮತ್ತೆ ಮತ್ತೆ ಯೋಚಿಸಿದನು ; ಹತ್ತಾರು ಸಲ ಯೋಚಿಸಿದನು; ಯೋಚಿಸಿ ಕಂಗೆಟ್ಟನು.

“ ಸ್ಯಾಮ್ಯುಯಲ್ಲನನ್ನು ಬಿಟ್ಟುಕೊಟ್ಟರೆ ಸರ್ವನಾಶ ! ಅನಂತವಾದ ಅನರ್ಥ ! ಹೊನ್ನೆಲ್ಲ ಹೋಗುವುವರೊಂದಿಗೆ ನಾನೂ ಉಸಿರಿರುವವರೆಗೆ ಸೆರೆ ಮನೆಯಲ್ಲಿನ ಕತ್ತಲೆ ಕೋಣೆಯೊಳಗೆ ಕೊಳೆಯಬೇಕಾದೀತು. ‘ ಬೇಕಾದರೆ ಹಿಡಿ ಹೊನ್ನು ಈ ಚೀಲದಿಂದ ಹಿಡಿದುಕೊಂಡು ಹೋಗಿ ’ ಎಂದು ಅಧಿಕಾರಿ ಗಳಿಗೆ ಹೇಳಿಬಿಡಲು ನಿರ್ಧರಿಸಿದ್ದೆ. ಹಾಗಿದ್ದೂ ಸ್ಯಾಮ್ಯುಯಲ್ಲನಿಗೆ ನಾನು ನ್ಯಾಯವಾಗಿ ಕೊಡಬೇಕಾದ್ದನ್ನು ಸಲ್ಲಿಸಲು ನಾನೇಕೆ ಹಿಂಜರಿಯುತ್ತಿದ್ದೇನೆ ? ಮತ್ತೆ ಮನಸ್ಸಿನ ಕೋಟಲೆ ! ಸ್ಯಾಮ್ಯುಯಲ್ಲನನ್ನು ಸರ್ವಥಾ ಶತ್ರು ಪಕ್ಷಕ್ಕೆ ಹೋಗಲು ಬಿಟ್ಟು ಕೊಡಕೂಡದು. ಹಾಗೆ ಮಾಡುವುದು ಮೂಢತನ ! ನನ್ನ ಭಾಗ್ಯಮಂದಿರದ ತಳಹದಿಗೆ ನಾನೇ ಸುರಂಗವನ್ನಿಟ್ಟು ಕೆಳ ಗುರುಳಿಸಲೇ ? ಛೀ ! ಕೂಡದು ; ಸಾವಿರ ಸಲ ಕೂಡದು. ”

ಅಷ್ಟರಲ್ಲಿ ಸ್ಯಾಮ್ಯುಯಲ್ಲನಿಗೆ ಸಹನೆ ಮಿಂಚಿತು. ಅವನು ಕೇಳಿದನು :

“ ಹಾಗಾದರೆ ಏನು ಹೇಳುವಿರಿ ಧಣಿಗಳೇ ? ”

ಪೀ : ಇನ್ನೊಂದು ತಿಂಗಳು ಸುಧಾರಿಸಲಾರೆಯೇನಯ್ಯ ?

ಸ್ಯಾ : ತಿಂಗಳೇಕೆ ? ಒಂದು ದಿನವೂ ಆಗದು ; ಒಂದು ಗಂಟೆಯೂ ಆಗದು; ಏಕೆ ? ಒಂದು ಕ್ಷಣವೂ ಆಗದು. ಈಗ .... .... ಈ ಕ್ಷಣದಲ್ಲಿ ಕೊಟ್ಟು ಬಿಡಿ. ನಿಮ್ಮ ಗುತ್ತಿಗೆ ಕೆಲಸ ಸಾಕು.

ಪೀ : ಹಾಗೆನ್ನಬೇಡ ಸ್ಯಾಮ್ಯುಯಲ್ ! ದುಡುಕಬಾರದು ; ' ಸಾಕು ' ಎನ್ನುವುದು ಎಷ್ಟರಲ್ಲಿದೆ ? ಸುಧಾರಿಸಬೇಕು ; ಸಮಯ ಸಂದರ್ಭ ನೋಡಿ ಸುಧಾರಿಸಬೇಕು.

ಸ್ಯಾ : ವಿವೇಕ ಹೇಳಬಹುದು ; ಉಪಚಾರದ ಮಾತು ಹೇಳಬಹುದು ; ಅದರಿಂದ ಹೊಟ್ಟೆ ತುಂಬಿದಂತಾಗುತ್ತದೆಯೆ ? ಹಾಗೆಲ್ಲಾ ಹೊಟ್ಟೆ ತುಂಬುವುದಾಗಿದ್ದರೆ ನಾನೇಕೆ ಹಣಕ್ಕಾಗಿ ಇಷ್ಟೊಂದು ಒತ್ತಾಯಪಡಿಸ ಬೇಕಾಗಿತ್ತು ?

ಆ ವೇಳೆಗೆ ಹಳ್ಳಿಯಿಂದ ಅವಸರವಸರವಾಗಿ ಓಡಿಬಂದಿದ್ದ ಆರ್ಥರನು ತನ್ನ ತಂದೆಯನ್ನು ಕಂಡು ಹೇಳಿದನು :

" ಏನಪ್ಪ ಇದು ? ಯಾವ ಕಾಲಕ್ಕೆ ನೀನು ಹಳ್ಳಿಗೆ ಹಿಂತಿರುಗಿ ಬರುವುದು ? ಟಾಮಿಲ್‌ಸನ್ ಹಸುಕರುಗಳನ್ನು ಹಿಡಿದುಕೊಂಡು ಹೋದ ; ಕುರಿಕೋಳಿಗಳನ್ನು ತನಗೆ ಬರಬೇಕಾದ ಹಣಕ್ಕೆ ಉತ್ತಾರ ಹಾಕಿಕೊಳ್ಳುತ್ತಾನಂತೆ. ' ಇನ್ನೇನು ಗತಿ ? ' ಎಂದು ತಲೆಯ ಮೇಲೆ ಕೈಯಿಟ್ಟು ಅವ್ವ ಅಳುತ್ತ ಕುಳಿತಿದ್ದಾಳೆ. ಕುಟುಂಬದ ಕಷ್ಟ ನಿನಗೇನೂ ಗೊತ್ತಾದಂತೆ ಕಾಣಿಸಲಿಲ್ಲ. ನಡಿ ಹೋಗೋಣ. ಇವರು ಕೊಟ್ಟರೆ ಕೊಡಲಿ ; ಬಿಟ್ಟರೆ ಬಿಡಲಿ. ' ಧಣಿಗಳು ಕೊಟ್ಟಾರು ; ಕೊಡದೆಲ್ಲಿ ಹೋದಾರು ? ' ಎಂದೆಯಲ್ಲ ಅವತ್ತು : ನೋಡಿದೆಯೋ ಇಲ್ಲವೋ ಇವರು ಕೊಡುವುದನ್ನ ! ' ತಿಂಗಳಿಗೆ ಕೊಟ್ಟರಾಗದೇ ? ' ಎಂದು ಕೇಳುತ್ತಿದ್ದರು. ಕೊಡದಿದ್ದರೆ ನುಂಗಿಕೊಳ್ಳಲಿ. ಸ್ಯಾಮ್‌ಸನ್ನರ ತೋಟ ಗುತ್ತಿಗೆ ಹಿಡಿದರೆ ಸರಿಪಾಲು ಕೊಡುತ್ತಾರಂತೆ : ಮುಂಗಡ ಮುನ್ನೂರು ಹೊನ್ನು ಕೊಡುತ್ತಾರಂತೆ. ಬರುವಾಗ ಹೇಳಿದರು. ತೆಗೆದುಕೊಂಡು ಹೋಗೋಣ ನಡಿ. "

ಆರ್ಥರನಂದ ಮಾತನ್ನು ಪೀಟರನೂ ಫ್ರೆಡರಿಕನೂ ಕೇಳಿದರು. ಪೀಟರನಿಗಂತೂ ಮೇಲಿಂದ ಮೇಲೆ ಹೊಡೆತ ಬಿದ್ದಂತೆ ಆಯಿತು. ಸ್ಯಾಮ್ಯುಯಲ್ಲನು ಆಗ ಧಣಿಯನ್ನು ಕುರಿತು ಹೇಳಿದನು :

ಹೋದಾನು ........... ರಹಸ್ಯವು ಬಯಲಾದೀತು. ಏನು ಮಾಡಲಿ ? ಹೌದು; ಬಯಲಾದೀತು ; ಖಂಡಿತ ! ಆಗ .... ಆಗ ? ಅಧಿಕಾರಿಗಳು ಬಂದಾರು ; ನೆಲಮಾಳಿಗೆಯನ್ನು ಶೋಧಿಸಿಯಾರು; ಅದರಲ್ಲಿರುವ ಎಪ್ಪತ್ತು ಚೀಲ ಹೊನ್ನನ್ನೂ ಹೊರಿಸಿ ಹೊರತಂದಾರು; ಸರಕಾರದ ಭಂಡಾರಕ್ಕೆ ಸೇರಿಸಿಯಾರು. ನಾನಾಗಿ ನನ್ನ ತಲೆಯ ಮೇಲೆ ಕಲ್ಲೆಳೆದುಕೊಳ್ಳಲೇ ? "

ಪೀಟರನು ಯೋಚಿಸಿದನು; ಮತ್ತೆ ಮತ್ತೆ ಯೋಚಿಸಿದನು ; ಹತ್ತಾರು ಸಲ ಯೋಚಿಸಿದನು; ಯೋಚಿಸಿ ಕಂಗೆಟ್ಟನು.

" ಸ್ಯಾಮ್ಯುಯಲ್ಲನನ್ನು ಬಿಟ್ಟುಕೊಟ್ಟರೆ ಸರ್ವನಾಶ ! ಅನಂತವಾದ ಅನರ್ಥ ! ಹೊನ್ನೆಲ್ಲ ಹೋಗುವುದರೊಂದಿಗೆ ನಾನೂ ಉಸಿರಿರುವವರೆಗೆ ಸೆರೆಮನೆಯಲ್ಲಿನ ಕತ್ತಲೆ ಕೋಣೆಯೊಳಗೆ ಕೊಳೆಯಬೇಕಾದೀತು. ' ಬೇಕಾದರೆ ಹಿಡಿ ಹೊನ್ನು ಈ ಚೀಲದಿಂದ ಹಿಡಿದುಕೊಂಡು ಹೋಗಿ' ಎಂದು ಅಧಿಕಾರಿಗಳಿಗೆ ಹೇಳಿಬಿಡಲು ನಿರ್ಧರಿಸಿದ್ದೆ. ಹಾಗಿದ್ದೂ ಸ್ಯಾಮ್ಯುಯಲ್ಲನಿಗೆ ನಾನು ನ್ಯಾಯವಾಗಿ ಕೊಡಬೇಕಾದ್ದನ್ನು ಸಲ್ಲಿಸಲು ನಾನೇಕೆ ಹಿಂಜರಿಯುತ್ತಿದ್ದೇನೆ ? ಮತ್ತೆ ಮನಸ್ಸಿನ ಕೋಟಲೆ ! ಸ್ಯಾಮ್ಯುಯಲ್ಲನನ್ನು ಸರ್ವಥಾ ಶತ್ರು ಪಕ್ಷಕ್ಕೆ ಹೋಗಲು ಬಿಟ್ಟು ಕೊಡಕೂಡದು. ಹಾಗೆ ಮಾಡುವುದು ಮೂಢತನ ! ನನ್ನ ಭಾಗ್ಯಮಂದಿರದ ತಳಹದಿಗೆ ನಾನೇ ಸುರಂಗವನ್ನಿಟ್ಟು ಕೆಳಗುರುಳಿಸಲೇ ? ಛೇ ! ಕೂಡದು ; ಸಾವಿರ ಸಲ ಕೂಡದು. "

ಅಷ್ಟರಲ್ಲೆ ಸ್ಯಾಮ್ಯುಯಲ್ಲನಿಗೆ ಸಹನೆ ಮಿಂಚಿತು. ಅವನು ಕೇಳಿದನು :

" ಹಾಗಾದರೆ ಏನು ಹೇಳುವಿರಿ ಧಣಿಗಳೇ ? "

ಪೀ : ಇನ್ನೊಂದು ತಿಂಗಳು ಸುಧಾರಿಸಲಾರೆಯೇನಯ್ಯ ?

ಸ್ಯಾ : ತಿಂಗಳೇಕೆ ? ಒಂದು ದಿನವೂ ಆಗದು ; ಒಂದು ಗಂಟೆಯೂ ಆಗದು; ಏಕೆ ? ಒಂದು ಕ್ಷಣವೂ ಆಗದು. ಈಗ .... ..... ಈ ಕ್ಷಣದಲ್ಲಿ ಕೊಟ್ಟು ಬಿಡಿ. ನಿಮ್ಮ ಗುತ್ತಿಗೆ ಕೆಲಸ ಸಾಕು.

ಪೀ : ಹಾಗೆನ್ನಬೇಡ ಸ್ಯಾಮ್ಯುಯಲ್ ! ದುಡುಕಬಾರದು; 'ಸಾಕು' ಎನ್ನುವುದು ಎಷ್ಟರಲ್ಲಿದೆ ? ಸುಧಾರಿಸಬೇಕು ; ಸಮಯ ಸಂದರ್ಭ ನೋಡಿ ಸುಧಾರಿಸಬೇಕು.

ಸ್ಯಾ : ವಿವೇಕ ಹೇಳಬಹುದು ; ಉಪಚಾರದ ಮಾತು ಹೇಳಬಹುದು ; ಅದರಿಂದ ಹೊಟ್ಟೆ ತುಂಬಿದಂತಾಗುತ್ತದೆಯೆ ? ಹಾಗೆಲ್ಲಾ ಹೊಟ್ಟೆ ತುಂಬುವುದಾಗಿದ್ದರೆ ನಾನೇಕೆ ಹಣಕ್ಕಾಗಿ ಇಷ್ಟೊಂದು ಒತ್ತಾಯಪಡಿಸಬೇಕಾಗಿತ್ತು ?

ಆ ವೇಳೆಗೆ ಹಳ್ಳಿಯಿಂದ ಅವಸರವಸರವಾಗಿ ಓಡಿಬಂದಿದ್ದ ಆರ್ಥರನು ತನ್ನ ತಂದೆಯನ್ನು ಕಂಡು ಹೇಳಿದನು :

" ಏನಪ್ಪ ಇದು ? ಯಾವ ಕಾಲಕ್ಕೆ ನೀನು ಹಳ್ಳಿಗೆ ಹಿಂತಿರುಗಿ ಬರುವುದು ? ಟಾಮಿಲ್‌ಸನ್ ಹಸುಕರುಗಳನ್ನು ಹಿಡಿದುಕೊಂಡು ಹೋದ; ಕುರಿಕೋಳಿಗಳನ್ನು ತನಗೆ ಬರಬೇಕಾದ ಹಣಕ್ಕೆ ಉತ್ತಾರ ಹಾಕಿಕೊಳ್ಳುತ್ತಾನಂತೆ. 'ಇನ್ನೇನು ಗತಿ ?' ಎಂದು ತಲೆಯ ಮೇಲೆ ಕೈಯಿಟ್ಟು ಅವ್ವ ಅಳುತ್ತ ಕುಳಿತಿದ್ದಾಳೆ. ಕುಟುಂಬದ ಕಷ್ಟ ನಿನಗೇನೂ ಗೊತ್ತಾದಂತೆ ಕಾಣಿಸಲಿಲ್ಲ. ನಡಿ ಹೋಗೋಣ. ಇವರು ಕೊಟ್ಟರೆ ಕೊಡಲಿ; ಬಿಟ್ಟರೆ ಬಿಡಲಿ. 'ಧಣಿಗಳು ಕೊಟ್ಟಾರು ; ಕೊಡದೆಲ್ಲಿ ಹೋದಾರು ?' ಎಂದೆಯಲ್ಲ ಅವತ್ತು: ನೋಡಿದೆಯೋ ಇಲ್ಲವೋ ಇವರು ಕೊಡುವುದನ್ನ ! 'ತಿಂಗಳಿಗೆ ಕೊಟ್ಟರಾಗದೇ ?' ಎಂದು ಕೇಳುತ್ತಿದ್ದರು. ಕೊಡದಿದ್ದರೆ ನುಂಗಿಕೊಳ್ಳಲಿ. ಸ್ಯಾಮ್‌ಸನ್ನರ ತೋಟ ಗುತ್ತಿಗೆ ಹಿಡಿದರೆ ಸರಿಪಾಲು ಕೊಡುತ್ತಾರಂತೆ : ಮುಂಗಡ ಮುನ್ನೂರು ಹೊನ್ನು ಕೊಡುತ್ತಾರಂತೆ. ಬರುವಾಗ ಹೇಳಿದರು. ತೆಗೆದುಕೊಂಡು ಹೋಗೋಣ ನಡಿ. "

ಆರ್ಥರನಂದ ಮಾತನ್ನು ಪೀಟರನೂ ಫ್ರೆಡರಿಕನೂ ಕೇಳಿದರು. ಪೀಟರನಿಗಂತೂ ಮೇಲಿಂದ ಮೇಲೆ ಹೊಡೆತ ಬಿದ್ದಂತೆ ಆಯಿತು. ಸ್ಯಾಮ್ಯುಯಲ್ಲನು ಆಗ ಧಣಿಯನ್ನು ಕುರಿತು ಹೇಳಿದನು :

ಸ್ಯಾ : ಈಗಲಾದರೂ ಗೊತ್ತಾಯಿತೇ ಧಣಿಗಳೇ !

ಪೀ ; ಏನು ?

ಸ್ಯಾ : ನನ್ನ ಮಾತು ಸುಳ್ಳೋ—ನಿಜವೋ ಎಂಬುದು.

ಪೀಟರನಿಗೆ ಮಾತು ಹೊರಡಲಿಲ್ಲ. ಅವನು ಮೌನವಾಗಿದ್ದನು. ಆಗ ಫ್ರೆಡರಿಕನು ಇನ್ನೆಷ್ಟುಮಾತ್ರವೂ ತಡೆಯಲಾರದೆ ಪೀಟರನನ್ನು ಕುರಿತು ಹೇಳಿದನು :

ಈ ಬಡರೈತನನ್ನು ನಾನು ಹತ್ತಾರು ವರುಷಗಳಿಂದ ಬಲ್ಲೆ. ಈಗಿನ ಇವನ ಪರಿಸ್ಥಿತಿಯನ್ನು ಕಂಡು ಇವನಿಗೊಂದು ಬಗೆಯಲ್ಲಿ ಸಹಾಯ ಮಾಡಲೆಣಿಸಿದೆ. ಇವನೊಡನೆ ನಾನಿಲ್ಲಿಗೆ ಬರಲೊಪ್ಪಿದುದು ; ಕರಾರನ್ನು ಬರೆಯಿಸಿ ಸಹಿ ಮಾಡಿ ಮುಂಗಡ ಹಣವನ್ನು ಕೊಟ್ಟುದು ; ಎಲ್ಲ ಇವನಿಗಾಗಿಯೇ. ಒಂದು ತಾಮ್ರದ ನಾಣ್ಯವನ್ನೂ ಮುಂಗಡವಾಗಿ ಕೊಡದೆಯೇ ಈ ನಗರದಲ್ಲಿ ಯಾವ ತೋಟವನ್ನು ಬೇಕಾದರೂ ನಾನು ಗುತ್ತಿಗೆ ಹಿಡಿಯಬಲ್ಲೆ. ಗುತ್ತಿಗೆಗೆ ಬಿಡುವ—ಗುತ್ತಿಗೆಗೆ ಹಿಡಿಯುವ ಎಲ್ಲ ತೋಟಗಾರರಿಗೂ ನನ್ನಲ್ಲಿ ನಂಬಿಕೆ ಉಂಟು. ನಿಮ್ಮಲ್ಲಿ ನಾನು ಮಾಡಿಕೊಂಡ ಗುತ್ತಿಗೆ ಒಪ್ಪಂದವು ಮುರಿದು ಬಿತ್ತೆಂದು ತಿಳಿಯಿರಿ. ನಾನು ಕೊಟ್ಟ ಮುಂಗಡವನ್ನು ತಿರುಗಿಸಿ ಕೊಟ್ಟುಬಿಡಿ. ಈ ಸ್ಯಾಮ್ಯುಯಲ್ಲನು ಸತ್ಯವಂತ. ಅವನನ್ನು ನೀವಿಷ್ಟು ಹೆಣಗಾಡಿಸುತ್ತ ಇದ್ದೀರಿ. ಇದನ್ನು ಕಂಡು ನನ್ನ ಮನಸ್ಸು ಹುಣ್ಣಾಗಿದೆ. ಬಡವರ ಗೋಳನ್ನು ಕಂಡು ಕನಿಕರದಿಂದ ಕಣ್ಣೀರು ಹರಿಸದವರು ನೀವು; ನಿಮ್ಮಂತಹ ನಾಸ್ತಿಕರೊಡನೆ ನಾನು ವ್ಯವಹಾರ ನಡೆಸಲಾರೆ. ನಿಮಗೆ ವಿಶೇಷ ಧನವಿರಬಹುದು ; ನನಗೂ ಅಲ್ಪ ಸ್ವಲ್ಪ ಇದೆ. ಆದರೆ ಆ ಧನವು ದೇವದತ್ತವಾದುದು ಎಂದು ನಾನು ಮನಗಂಡಿದ್ದೇನೆ. ದೈವವು ನಮಗೆ ಕರುಣಿಸಿದ ಅನುಕೂಲಗಳನ್ನು ಆದಷ್ಟು ಇತರರೊಂದಿಗೆ ಹಂಚಿಕೊಳ್ಳಬೇಕು ; ಅವರನ್ನೂ ನಮ್ಮಂತೆಯೇ ಹರ್ಷಿತರನ್ನಾಗಿ ಮಾಡಬೇಕು. ಹಾಗಲ್ಲದೆ ಹಣವೇ ನಮ್ಮ ಸರ್ವಸ್ವ ........... ಅದಕ್ಕಾಗಿ ಸಹಜೀವಿಗಳನ್ನು ಸಂಕಟಕ್ಕೆ

ಗುರಿಮಾಡಬಹುದು ಎಂಬ ಭಾವನೆ ಶುದ್ಧ ತಪ್ಪಾದುದು. ಧನವು ನಶ್ವರವಾದುದು; ಅದನ್ನು ನಾನು ಎಂದೋ ಮನಗಂಡಿದ್ದೇನೆ. ಅದಕ್ಕಾಗಿ ನಾನು ಬಡವರ ಬಾಯಿ ಬಡಿವ ಭಾಗ್ಯವಂತರಿಗೆ ನೆರವಾಗಲಾರೆ. ನಿಮ್ಮೊಡನೆ ಒಪ್ಪಂದ ಮಾಡಿಕೊಳ್ಳಲು ನಾನು ಒಡಂಬಡಲಾರೆ- ”

ಪೀ : ಅಷ್ಟು ಖಂಡಿತವಾಗಿ ಹೇಳಿಬಿಟ್ಟರೆ ಹೇಗೆ ಫ್ರೆಡರಿಕ್ ?

ಫ್ರೆ : ಸತ್ಯಕ್ಕೆ ಒಂದೇ ಹಾದಿ; ಅದನ್ನು ನುಡಿವಾಗ ಖಂಡಿತದಿಂದಿರಬಾರದೇತಕ್ಕೆ ?

ಪೀ : ನಾನು ಅಸತ್ಯವನ್ನು ನುಡಿಯುತ್ತಿರುವೆನೆ ಹಾಗಾದರೆ ?

ಫ್ರೆ : ನಿಮ್ಮ ಅಂತರಂಗವನ್ನು ಹುಡುಕಿ ನೋಡಿ ; ಅಲ್ಲಿದೆ ನಿಮ್ಮ ಪ್ರಶ್ನೆಗೆ ಉತ್ತರ.

ಪೀ : ಎಂದರೆ .... ನೀವು ಹೇಳುವುದಾದರೊ ........

ಫ್ರೆ : ಮನಸ್ಸಾಕ್ಷಿಯನ್ನು ತುಳಿದವರು ಮಾನವಗಣದ ಶತ್ರುಗಳು.

ಪೀ : ಈಗೇನು ನೀವು ಹೇಳುತ್ತಿರುವುದು ?

ಫ್ರೆ : ಇಷ್ಟೆ ; ಈ ನಗರದಲ್ಲಿ ನೂರಾರು ತೋಟಗಳಿವೆ. ಉತ್ತಮ ಬೇಸಾಯಗಾರರಿಗೆ — ಅದರಲ್ಲಿಯೂ ಸ್ವಾಮ್ಯವಿಲ್ಲದಂತಹ ಪ್ರಾಮಾಣಿಕರಿಗೆ ಬೇಕಾದಷ್ಟು ಗುತ್ತಿಗೆಗಳಿವೆ.

ಪೀ : ಇರಬಹುದು.

ಫ್ರೆ : ಮಾತ್ರವಲ್ಲ ; ಸರಿಪಾಲು ಕೊಡುವ ಗುತ್ತಿಗೆಗಳಿವೆ.

ಪೀ : ನಾನು ನಂಬಲಾರೆ.

ಫ್ರೆ : ಸತ್ಯವನ್ನು ನಂಬದಿರುವುದು ಸಾಂಕ್ರಾಮಿಕ ವ್ಯಾಧಿಗಳಲ್ಲೆಲ್ಲ ಅತ್ಯುಗ್ರವಾದುದು. ನೋಡಿ, ನಂಬಿ, ನಿರ್ಧರಿಸಿ.

ಪೀ : ಆಗಲಿ; ಆಮೇಲೆ?

ಫ್ರೆ : ಸರಿಪಾಲು ಕೊಡುವ ಗುತ್ತಿಗೆಗಳಿವೆ: ಕೊಡುವ ಸಹೃದಯ ಮಾಲೀಕರಿದ್ದಾರೆ. ಹಾಗಿದ್ದರೂ ನೀವು ಹತ್ತಾರು ವರ್ಷಗಳಿಂದ ಇವನಿಗೆ ಕೊಡುತ್ತಿರುವುದು ಕಾಲು ಭಾಗವೇ. ಕೊಡಬೇಕಾದ್ದರಲ್ಲಿಯೂ ವರ್ಷದಿಂದ ಐವತ್ತು ಬಾಕಿ; ಈಗ ಬಂದುದರಲ್ಲಿಯೂ ಕೊಡುವ ಯೋಚನೆ ನಿಮಗಿಲ್ಲ.

ಪೀ : ಛೀ! ಛೀ! ಹಾಗೆಂದರಾದೀತೇ? ಕೊಡದೆ ಉಂಟೆ?

ಫ್ರೆ : ಯಾವಾಗ?

ಪೀ : ಅದೇ--ಒಂದು ತಿಂಗಳಾಗಲಿ ಎಂದೆನಲ್ಲ ........

ಫ್ರೆ : ಆ ವೇಳೆಗೆ ಕೊರಳಿಗೆ ಬಂದ ವಿಪತ್ತುಗಳನ್ನೆಲ್ಲ ಜಯಿಸಿ ಅವನೂ ಅವನ ಕುಟುಂಬದವರೂ ಜೀವದೊಂದಿಗಿದ್ದರೆ........

ಪೀ : ಹಾಗೆನ್ನದಿರಿ........ಅವನೇಕೆ....ಅಲ್ಲ.....ಇರಲಿ....ನೀವೇನೆಂದಿರಿ?

ಫ್ರೆ : ಅದೇ; 'ಕೊಟ್ಟರೆ ಕೆಟ್ಟೆ' ಎನ್ನುವವರ ಗುಂಪಿಗೆ ಸೇರಿದವರು ನೀವು. ಕೊಡಬೇಕಾದ್ದನ್ನು ಕೊಟ್ಟುಬಿಟ್ಟರೆ ತೋಟವನ್ನು ಬಿಟ್ಟು ಓಡಿಹೋದಾನು ಎಂಬ ಹೆದರಿಕೆ ನಿಮಗೆ. ಅದಕ್ಕೇ ಕೊಡದೆ ಬಿಗಿಹಿಡಿದು ಹೆಣಗಾಡಿಸುತ್ತಿದ್ದೀರಿ.

ಪೀ : ಎಲ್ಲಿಯಾದರೂ ಉಂಟೆ?

ಫ್ರೆ : ಇನ್ನೇನಷ್ಟಿಲ್ಲದೆ? ಬಡವನ ಬೆನ್ನುಮೂಳೆ ಮುರಿದು ಅವನನ್ನು ನರಳಿಸುವುದು ಇದೆಂತಹ ಲಕ್ಷಣ ಭಾಗ್ಯವಂತನಿಗೆ!

ಪೀ : ನನ್ನಮೇಲೆ ದೋಷವನ್ನು ಹೊರಿಸುತ್ತಿದ್ದೀರಿ—ಅಷ್ಟೆ.

ಫ್ರೆ : ದೋಷವೇನು ಬಂತು? ಹೀಗೆಲ್ಲ ಬಡವರನ್ನು ದಣಿಸುವುದೆಂದರೆ ಅದೊಂದು ಬಗೆಯ ಸಂತೋಷ ನಿಮಗೆ. ಅದರಲ್ಲಿಯೂ ಸುಳ್ಳು

ಹೇಳುವುದೆಂದರೆ ಸುಗ್ಗಿಯಲ್ಲಿ ಜಳ್ಳು ತೂರಿದಂತೆ!

ಪೀ : ಇದೇನು ಫ್ರೆಡರಿಕ್! ಹೀಗೆಲ್ಲ ಆರೋಪಣೆ ಮಾಡುತ್ತೀರೆಂದು ನಾನು ನಂಬಿರಲಿಲ್ಲ.

ಫ್ರೆ : ನಿಜ ; ಮೋಸಗಾರರಿಗೆ ಸತ್ಯವನ್ನು ಕಂಡರೆ ನಂಬಿಕೆಯಿರದು.

ಪೀ : ನೀವಾಡುವ ಮಾತಿನ ಅರ್ಥ?

ಫ್ರೆ : ಅರ್ಥ! ಅರ್ಥ ಇಷ್ಟೇ. ಸ್ಯಾಮ್‌ಸನ್‌ರವರ ಬಳಿ 'ಸ್ಯಾಮ್ಯುಯಲ್ಲನಿಗೆ ಸರಿಪಾಲು ಕೊಡುತ್ತಿದ್ದೇನೆ; ಮುನ್ನೂರು ಮುಂಗಡ ಕೊಟ್ಟಿದ್ದೇನೆ; ಹಳ್ಳಿಯಲ್ಲಿ ಮನೆ ಕಟ್ಟಿಸಿಕೊಟ್ಟಿದ್ದೇನೆ; ನೆಲ ಕೊಡಿಸಿದ್ದೇನೆ; ಹಸು, ಕರು, ಕುರಿ, ಕೋಳಿಗಳನ್ನು ಕೊಂಡುಕೊಟ್ಟಿದ್ದೇನೆ; ಪ್ರತಿ ಕ್ರಿಸ್‌ಮಸ್ ಹಬ್ಬದ ಕಾಲದಲ್ಲಿ ಇಪ್ಪತ್ತು ಹೊನ್ನು ಬಹುಮಾನ ಕೊಡುತ್ತಿದ್ದೇನೆ; ಉಡಿಗೆ ತೊಡಿಗೆಗಳನ್ನು ಹೊಲಿಸಿ ಕೊಟ್ಟಿದ್ದೇನೆ' ಎಂದೆಲ್ಲ ಹೇಳಿದ್ದೀರಿ.

ಪೀ : ಸುಳ್ಳು; ಅವರಲ್ಲಿ ನಾನೆಲ್ಲಿ ಹೇಳಿದ್ದೇನೆ?

ಫ್ರೆ : ಅವರ ಮನೆ ಔತಣವಾದಾಗ ........ ಅತಿಥಿಗಳಲ್ಲಿ ನೀವೂ ಒಬ್ಬರಾಗಿದ್ದಾಗ ........ ನಾನೂ ಅದೇ ಔತಣಕ್ಕೆ ಅತಿಥಿಯಾಗಿದ್ದೆ ಎಂಬುದನ್ನು ಮರೆತಿರಾ?

ಪೀ : ಹೌದೇ? .... ನಿಜವೆ? ನಾನು ಹೇಳಿದೆನೇ?

ಸ್ಯಾ : ಅರ್ಥರ್! ಹೋಗು; ಸ್ಯಾಮ್‌ಸನ್ ಧೊರೆಗಳನ್ನು ಕರೆದುಕೊಂಡು ಬಾಪ್ಪ. ಅವರೇ ಹೇಳಲಿ; ನಾವು ಸುಳ್ಳಾಡಿಗರು; ಧಣಿಗಳೊಬ್ಬರೇ ಸತ್ಯವಂತರು!

ಪೀ : ಸರಿಪಾಲನ್ನು ಯಾರೂ ಕೊಡಲಾರರು.

ಫ್ರೆ : ನಿಮ್ಮೊಬ್ಬರನ್ನುಳಿದು ಬೇರೆ ಎಲ್ಲರೂ ಕೊಡುವುದು ಸರಿಪಾಲನ್ನೇ.

ಪೀ ಎಲ್ಲಿಯಾದರೂ ಉಂಟೇ?

ಫ್ರೆ : ಪ್ಯಾರಿಸ್ ನಗರದಲ್ಲುಂಟು.

ಪೀ : ಸರಿಪಾಲು ! ಚೆನ್ನಾಯಿತು. ಯಾರೂ ಕೊಡಲಾರರು ; ಕಾಲುಪಾಲು ಕೊಟ್ಟೇ ನನಗೆಷ್ಟೋ ನಷ್ಟವಾಗಿದೆ. ಇನ್ನು ಸರಿಪಾಲನ್ನು ಕೊಟ್ಟರೆ ತೋಟವನ್ನೇ ಮಾರಿ ತಿನ್ನಬೇಕಷ್ಟೆ !

ಫ್ರೆ : ನಿಮ್ಮ ಮಾತನ್ನು ನೀವು ಹಿಂತೆಗೆದುಕೊಳ್ಳಬೇಕಾದೀತು—ಎಚ್ಚರಿಕೆ !

ಸ್ಯಾ : ಹೋಗೋ ಆರ್ಥರ್ ! ಸ್ಯಾಮ್‌ಸನ್ ದೊರೆಗಳನ್ನು ಕರೆದುಕೊಂಡು ಬಾ, ಅವರೇ ಹೇಳಲಿ. ಆಗಲೂ ಸುಳ್ಳು ಎನ್ನುವರೇನೋ ನೋಡೋಣ ವಂತೆ.

ಫ್ರೆ : ಪೀಟರ್ ಮಹಾಶಯ ! ನಿಮ್ಮ ಮಾತನ್ನು ನೀವು ಹಿಂತೆಗೆದು ಕೊಳ್ಳಲೇ ಬೇಕು.

ಪೀ : ಹಾಗೆನ್ನುವಿರೇನು ?

ಫ್ರೆ : ಹೌದು ; ಇಲ್ಲದಿದ್ದರೆ ನನ್ನೊಡನೆ ಬನ್ನಿ. ನಿಮ್ಮ ಕಣ್ಣೆದುರಿಗೆ........ ಇದೀಗಲೇ ಸರಿಪಾಲು ಏರ್ಪಡಿಸಿ, ಮುನ್ನೂರು ಮುಂಗಡ ಕೊಡಿಸಿ, ಬೇರೆ ಕಡೆ ಬೇಸಾಯಕ್ಕೆ ನಿಲ್ಲಿಸುತ್ತೇನೆ.

ಫ್ರೆಡರಿಕನ ಈ ಮಾತನ್ನು ಕೇಳಿ ಪೀಟರನಿಗೆ ಬಾಯಿ ಬಿಗಿಯಿತು. ಮಾತುಕತೆಗಳು ಇಷ್ಟೆಲ್ಲ ಬಿಕ್ಕಟ್ಟಿಗೆ ಬಂದು ನಿಂತಾವು ಎಂದು ಅವನು ಊಹಿಸಿರಲಿಲ್ಲ. ಅವನೇನನ್ನೂ ಹೇಳಲಾರದೆ ಹೋದನು.

" ಸ್ಯಾಮ್ಯುಯಲ್ ........ ಬೇರೆ ಕಡೆ ಬೇಸಾಯಕ್ಕೆ........ ಆಯಿತು ನನ್ನ ರಹಸ್ಯ......... ಮುರಿದು ಬಿದ್ದಂತೆ. ನನ್ನ ಬಾಳ ನೌಕೆಯು ಮಡುವಿನ ಅಂತರಾಳದಲ್ಲಿ ಮುಳುಗಿದಂತೆ ! ನಾನು ಕೆಟ್ಟು ಹಾಳಾದಂತೆ..........ಇಷ್ಟೆಲ್ಲ ವಿಪರೀತ ವಾದವಿವಾದಗಳಾದನಂತರ ನಾನು ಅಧಿಕಾರಿಗಳ ಕೈಗೆ ಸಿಕ್ಕಿಬಿದ್ದಂತೆ...........ಕತ್ತಲ ಕಾರಾಗಾರದಲ್ಲಿ ತಳ್ಳಲ್ಪಟ್ಟಂತೆ.......... ಹಾಯ್! ಹಾಯ್ ! ವಿಪರೀತ ಅನರ್ಥ ! ಮುಂದೇನು ? .... ..... "

ಪೀಟರನು ವಿಚಾರವಾಹಿನಿಯಲ್ಲಿ ಮುಳುಗಿದನು. ಅವನ ಹಣೆಯಲ್ಲಿ ವ್ಯಸನದ ರೇಖೆಗಳು ಕಾಣಿಸಿಕೊಂಡುವು. ಚಿಂತಾಕ್ರಾಂತನಾದ ಅವನನ್ನು ಕಂಡು ತನ್ನ ಮಾತುಗಳನ್ನು ಮತ್ತೆ ಮುಂದುವರಿಸುತ್ತ ಫ್ರೆಡರಿಕನು ಹೇಳಿದನು :

"ಈ ರೈತನು ಅಷ್ಟು ಬಗೆಯಲ್ಲಿ ಬೇಡಿಕೊಂಡರೂ, ತನ್ನ ಕುಟುಂಬದ ಕಷ್ಟಗಳನ್ನು ಬಣ್ಣಬಣ್ಣವಾಗಿ ಬಣ್ಣಿಸಿ ಹೇಳಿದರೂ ನಿಮ್ಮ ಎದೆಯಲ್ಲಿ ಎಳ್ಳಷ್ಟಾದರೂ ಕನಿಕರವು ಹುಟ್ಟಿತೆ? ಬದಲಾಗಿ 'ಮುಂದೆ ನೋಡಿ ಕೊಳ್ಳೋಣ' ಎನ್ನುವ ಘೋಷಣೆ ನಿಮ್ಮದು. ಮಣ್ಣು ಕುದುರೆಯನ್ನು ಹತ್ತಿ ಮಡುವನ್ನು ದಾಟಬಯಸುವವನಿಗೂ ನಿಮಗೂ ಏನು ವ್ಯತ್ಯಾಸ? 'ತಿಂಗಳು ಸುಧಾರಿಸು' ಎಂದು ನೀವಂದ ಮಾತು ನಿಮ್ಮ ಮೂರ್ಖತನಕ್ಕೆ ಸಾಕ್ಷಿ. 'ಸರಿಪಾಲು ಸುಳ್ಳು' ಎಂದು ನೀವು ಹೇಳುವುದೇ ನಿಮ್ಮ 'ಸತ್ಯ ಪ್ರೇಮ' ಕ್ಕೆ—ಸಹಾನುಭೂತಿಗೆ-ಸಾಕ್ಷಿ. ನೀವು ಖಂಡಿತವಾಗಿರಬಹುದು; ನಾವಿರಬಾರದೇ? ಸುಳ್ಳನ್ನು ಇಷ್ಟು ಖಂಡಿತವಾಗಿ ಸಮರ್ಥಿಸಲು ನೀವು ಸಿದ್ಧರಾಗಿದ್ದೀರಿ. ಸತ್ಯವನ್ನು ಸಮರ್ಥಿಸಲು ಸಾಧ್ಯವೆನಿಸಿದಾಗಲೂ ನಾವು ಖಂಡಿತವಾಗಿರಬೇಡವೇ? ಬಡವನ ಬಾಯಿ ಬಡಿಯುವುದು ನಿಮಗೆ ನ್ಯಾಯ ವಾಗಿದ್ದರೆ, ಸತ್ಯವಂತನಿಗೆ ಬೆಂಬಲ ನೀಡುವುದು—ಸಹಾನುಭೂತಿಯನ್ನು ತೋರುವುದು—ನನಗೆ ಅನ್ಯಾಯವೇ? ನೀವಾಗಿ ಕೊಡುವುದಾದರೆ ಕೊಡಿ; ಇಲ್ಲವಾದರೆ ನನ್ನ ಮುಂಗಡವನ್ನು ನನಗೇ ತಿರುಗಿಸಿಕೊಡಿ. ಅವನಿಗೆ ಬೇಕಾದ ಹಣಕ್ಕಾಗಿ ಅವನಿನ್ನು ನಿಮ್ಮ ದಯೆ ದಾಕ್ಷಿಣ್ಯಗಳನ್ನು ಎದುರು ನೋಡಬೇಕಾಗಿಲ್ಲ. ಬಾಯಿ ಬಿಟ್ಟು ಬಾರಿ ಬಾರಿಗೂ ಕೇಳಿ ಬಾಯೊಣಗಿ ಬಳಲಬೇಕಾಗಿಲ್ಲ. ಅವನಿಗೆ ಬೇಕಾದ ಹಣವನ್ನು ನಾನೇ ಕೈಗಡವಾಗಿ ಕೊಟ್ಟಿರುತ್ತೇನೆ. ನಿಮಗಿಂತ ಸಹಸ್ರಪಾಲು ಹೆಚ್ಚಾಗಿ ನಾನವನನ್ನು ನಂಬ ಬಲ್ಲೆ. ಸತ್ಯವಂತನಾದ ಅವನ ಮಾತೇ ನನಗೆ ಸಾಕು. ಏನು ಹೇಳುವಿರಿ? ಹೇಳಿ ಬೇಗ; ಹೊತ್ತಾಯಿತು; ಹೊರಡಬೇಕು."

ಪೀಟರನಿಗೆ ಹಿಂದು ಮುಂದು ತೋರದಾಯಿತು.

ಪೀ : ಹಾಗಾದರೆ ?

ಫ್ರೆ : ನಾನು ಹೇಳಿದಂತೆ ನಡೆಮುಕೊಳ್ಳುತ್ತೀರಾ ?

ಪೀ : ನಡೆದು ಕೊಂಡರೆ ?

ಫ್ರೆ : ನಡೆದು ಕೊಂಡರೆ ಕರಾರು.

ಪೀ : ಇಲ್ಲದಿದ್ದರೆ ?

ಫ್ರೆ : ಇಲ್ಲದಿದ್ದರೆ ತಕರಾರು ! ಗೊತ್ತೇ ಇದೆ.

ಪೀ : ಹಾಗಾದರೆ ಇವನಿಗೆಷ್ಟು ಕೊಡಬೇಕು ?

ಫ್ರೆ : ನೂರೈವತ್ತು ಹೊನ್ನು !

ಪೀ : ನೂರೈವತ್ತು ಏಕೆ ? ಹೇಗೆ ?

ಫ್ರೆ : ಅವನಾಗಿ ಕೇಳಿದಾಗ ಕೊಟ್ಟಿದ್ದರೆ ಈಗಿನದು ಮಾತ್ರ ಐವತ್ತು; ಕೇಳಿದಾಗ ಕೊಡದಿದ್ದುದಕ್ಕಾಗಿ ಹಿಂದಿನ ಬಾಕಿಯೂ ಸೇರಿ ನೂರು ! ಕೇಳಿ ಗೋಗರೆದರೂ ಕೊಡದ ಹಣಗಾಡಿಸಿದುದಕ್ಕಾಗಿ -- ಹಣಗಾಡಿಸಿ ಸುಳ್ಳು ಹೇಳಿದುದಕ್ಕಾಗಿ -- ಕಾಲು ಪಾಲು ಹೋಗಿ ಸರಿಪಾಲಾಯಿತು. ಇನ್ನೂರರಲ್ಲಿ ಸರಿಪಾಲು ನೂರು – ಹಿಂದಿನ ಬಾಕಿ ಐವತ್ತು -- ಒಟ್ಟು ನೂರೈವತ್ತು.

ಪೀ : ಸರಿಪಾಲಿಗೆ ನಾನೊಪ್ಪಲಾರೆ.

ಸ್ಯಾ : ಕಾಲು ಪಾಲಿಗೆ ನಾನೂ ನಿಮ್ಮಲ್ಲಿ ನಿಲ್ಲಲಾರೆ.

ಪೀ : ಹಾಗೆಂದರೇನು ಸ್ಯಾಮ್ಯುಯಲ್ ?

ಸ್ಯಾ : ಹೇಳುವುದಾದರೆ ಬಹಳವಿದೆ.

ಪೀ : ಏನು ಬಹಳವಿರುವುದು–ನಿನ್ನ ತಲೆ ?

ಸ್ಯಾ : ದಿನವಹಿ, ಹೊತ್ತು ಹುಟ್ಟುವ ವೇಳೆಗೆ — ನಾನು ಹಳ್ಳಿಯಿಂದ

ಬರುವ ಮುನ್ನ — ಮಾರಾಟಗಾರರ ತಲೆಯಮೇಲೆ ಹಣ್ಣುಗಳನ್ನು ಕುಕ್ಕೆಗಳಲ್ಲಿ ಹೊರಿಸಿ ಕಳುಹಿಸಿದ್ದು — ನನ್ನನ್ನು ವಂಚಿಸಿ ಹೊನ್ನು ಕೊಡಿಸಿದ್ದು — ಅದು.

ಪೀ : ಹಾಗೆಂದು ನಿನಗೆ ಹೇಳಿದವರಾರು ?

ಸ್ಕಾ : ನಿಮ್ಮಿಂದ ಕೊಂಡುಕೊಂಡು ಹೋದ ಕುಕ್ಕೆಯವರು: ಅವರಿಂದ ಕೊಂಡುಕೊಂಡ ಇವರು; ಇವರಿಂದ ಕೊಂಡುಕೊಂಡು ಮತ್ತೆ ಮಾರಾಟ ಮಾಡಿದವರು.

ಪೀ : ಹೊಟ್ಟೆಕಿಚ್ಚಿಗೆ ಹೇಳಿರಬಹುದು.

ಫ್ರೆ : ಬಾಯಿ ಮುಚ್ಚಿ. 'ಮಾಡಿದ ತಪ್ಪನ್ನು ಒಪ್ಪಿಕೊಳ್ಳದವರು ಹುಚ್ಚರು; ಅವರಿನ್ನೂ ಹೆಚ್ಚಿನ ತಪ್ಪನ್ನೇ ಮಾಡಿದಂತಾಗುತ್ತದೆ' ಎಂದು ಆ ದಿನ ಸ್ಯಾಮ್ಸನ್‌ರವರ ಮನೆಯಲ್ಲಿ ಊಟಮಾಡುವಾಗ ಸುಭಾಷಿತವನ್ನು ನೀವೇ ಒಪ್ಪಿಸಿದ್ದಿರಿ !

ಪೀಟರನು ಬೆಪ್ಪಾದನು. ಸಣ್ಣ ವಿಷಯಗಳಲ್ಲಿ ಸುಳ್ಳು ತಲೆಯನ್ನು ತಗ್ಗಿಸೀತು.... ತಲೆಯನ್ನೇ ನುಂಗೀತು ಎಂದು ಅವನಿಗರ್ಥವಾಯಿತು. ಆದರೆ ...... ...... ಅವನ ಹುಟ್ಟುಗುಣ ! .... ಎಷ್ಟು ಕಾಲ ಅವನ ಆ ಪಾಷಾಣಭರಿತ ಹೃದಯದಲ್ಲಿ ಸ್ವಚ್ಛವಾದ ಭಾವನೆಗಳು ನಿಂತಾವು ? ಕೊಳಕನ್ನು ಕಡೆಗೊತ್ತಬೇಕು. ಅದುವರೆಗೂ ತನ್ನ ಕೈಗೆ ದೊರೆತ ಹಣವನ್ನು ಪೀಟರನು ತಿರುಗಿಸಿ ಕೊಟ್ಟವನೇ ಅಲ್ಲ. ಈಗ ಕೊಟ್ಟಾನೇ ? ವಿಧಿಯಿಲ್ಲದೆ ಒಳಗೆ ಹೋಗಿ ಐವತ್ತು ಹೊನ್ನುಗಳನ್ನು ತಂದು ಸ್ಯಾಮ್ಯುಯಲ್ಲನ ಮುಂದಿಟ್ಟು ಹೇಳಿದನು :

"ಹಿಡಿ; ತೋಟವನ್ನು ಚೆನ್ನಾಗಿ ನೋಡಿಕೋ."

ಆದರೆ ಸ್ಯಾಮ್ಯುಯಲ್ಲನು ಆ ಐವತ್ತನ್ನು ಒಲ್ಲದೆಹೋದ. ಅವನೆಂದ :

"ಐವತ್ತಿದೆ."

ಪೀ : ಹೌದು ; ತೆಗೆದುಕೋ.

ಸ್ವ್ಯಾ : ಇದು ಹಿಂದಿನ ಬಾಕಿಗಾಯಿತು. ಇಂದಿನದು ?

ಪೀ : ಇಂದಿನದು ಮುಂದೆ ಕೊಟ್ಟರಾಗದೇ ?

ಫ್ರೆ : ಬಂಡೆಯ ಮೇಲೆ ಮಳೆ ಸುರಿಯುವುದೂ, ನಿಮಗೆ ಹಿತವಾದ ಹೇಳುವುದೂ ಎರಡೂ ಒಂದೇ.

ಪೀ : ಎಂದರೆ ?

ಫ್ರೆ : ಇಂದಿನ ಮಾತು ಇಂದೇ ಆಗಬೇಕು.

ಪೀ : ಹಾಗಾದರೆ ?

ಫ್ರೆ : ಇನ್ನೂರಲ್ಲಿ ಸರಿಪಾಲು ತನ್ನಿ ...... ...... ನೂರು !

ಪೀ : ನೂರು ! ಅಷ್ಟು ಕೊಟ್ಟು ನಾನು ಬದುಕಿರಲಾದೀತೇ ?

ಫ್ರೆ : ಕೊಡದೆ ಅವನು ಸತ್ತರೂ ಅಡ್ಡಿಯಿಲ್ಲ ಅಲ್ಲವೆ ?

ಪೀ : ಈಗ ನೂರಾಗದು ...... ..... ಮುಂದೆ ನೋಡಿಕೊಳ್ಳೋಣ.

ಫ್ರೆ : ಆಗದು; ಇಂದೇ ಕೊಡಬೇಕು : ಈಗಲೇ ಕೊಡಬೇಕು.

ಪೀ : ನನ್ನಲ್ಲಿಲ್ಲ ; ನಿಧಾನವಾಗಿ ಕೊಡುತ್ತೇನೆ.

ಫ್ರೆ : ಇರುವಾಗ ಇಲ್ಲವೆನ್ನಬೇಡಿ.

ಪೀ : ಎಲ್ಲಿದೆ ?

ಫ್ರೆ : ನಿಮ್ಮಲ್ಲಿ ...... .... ನಾನು ಕೊಟ್ಟುದರಲ್ಲಿ ..... ..... ಇನ್ನೂರಲ್ಲಿ ಐವತ್ತು ಹೋದರೆ ಇನ್ನೂ ನೂರೈವತ್ತಿದೆ. ಅದರಲ್ಲಿ ನೂರು ಕೊಡಿ.

ಪೀ : ಕೊಟ್ಟುಬಿಟ್ಟರೆ ನನ್ನ ಗತಿ ?

ಫ್ರೆ : ಸಾಯಲು ನಿಮಗೇನು ಮಡದಿಯೋ ? ಮಕ್ಕಳೆ ? ಮರಿಯೋ ?

ಕೊಡಿ, ಕೊಡಿ. ಇರುವವರೆ ನೀವೊಬ್ಬರೇ! ನಿಮ್ಮಲ್ಲಿರುವುದು ಎಷ್ಟು ತಲೆಮಾರು ತಿಂದರೆ ಕರಗೀತು? ಸರಿಪಾಲು ಕೊಟ್ಟು ಸಮಸ್ಯೆ ಹರಿಸಿ ಕೊಳ್ಳಿ.

ಪೀ : ಸರಿಪಾಲು! ಅವಕ್ಕೊಪ್ಪಿದ ಮೇಲಲ್ಲವೆ ಆ ಮಾತು?

ಸ್ಯಾ : ಒಪ್ಪದಿದ್ದಲ್ಲಿ ನಿಮ್ಮ ಗುತ್ತಿಗೆಯೇ ಬೇಡ.

ಆ : ಅಷ್ಟಲ್ಲದೇನು? ನಡೆಯಪ್ಪ ಹೋಗೋಣ.

ಪೀ : ಕೊಟ್ಟೇ ಕೊಡಬೇಕೆ?

ಆ : ನಿಮ್ಮ ಕಣಿ ಮುಗಿಯುವ ವೇಳೆಗೆ ಕತ್ತಲಾದೀತು ......... ಹಳ್ಳಿಗೆ ಹೋಗಿ ಹಸುಕರುಗಳನ್ನೂ-ಕುರಿ ಕೋಳಿಗಳನ್ನೂ ಬಿಡಿಸಿಕೊಳ್ಳಬೇಕು.

ಪೀ : ಇದೆಂತಹ ಬಲವಂತ! ನಿನ್ನ ಮಗನ ಮಾತನ್ನು ನೀನು ಒಪ್ಪುತ್ತೀಯಾ ಸ್ಯಾಮ್ಯುಯಲ್!

ಸ್ಯಾ : ಹೌದು, ಧಣಿಗಳೇ! ನನಗಿಂತ ಅವನೇ ಬುದ್ಧಿವಂತ!

ಪೀ : ಹಾಗಾದರೆ?

ಫ್ರೆ : ಕೊಟ್ಟು ಹಿರಿತನವನ್ನು ತೋರಿ; ಇವನನ್ನು ಬಿಟ್ಟು ಕೆಟ್ಟೆನೆನ್ನಬೇಡಿ.

ಪೀ : ಹಾಗೆಂದು ಈ ತಂದೆ ಮಕ್ಕಳ ಕಾಲನ್ನು ತೊಳೆಯಲೇ?

ಫ್ರೆ : ಸತ್ಯವಂತರ ಕಾಲು ತೊಳೆದರೆ ತೊಂದರೆಯಾದೀತೆ?

ಪೀ : ತೊಂದರೆಯ ಮಾತನ್ನು ನಾನೇನು ಬಲ್ಲೆ?

ಫ್ರೆ : ಹೇಳಲೇ ಬೇಕೆನ್ನುವುದು ನಿಮ್ಮ ಒತ್ತಾಯವೇ?

ಪೀ : ಹೇಳಿ; ಅದರಿಂದೇನು?

ಫ್ರೆ : ನೀವು ನೆ....ಲ.....ಮಾ....ಳಿ.....ಗೆ ... ಯ ... ನ್ನು ಕಟ್ಟಿಸಿದುದೇತಕ್ಕೆ?

ಪೀಟರನು ಈ ಪ್ರಶ್ನೆಯನ್ನು ಇದಿರುನೋಡಿರಲಿಲ್ಲ. 'ಸರ್ವನಾಶ

ವಾಯಿತು' ಎಂದು ಅವನು ಭಯಾರ್ತಚಕಿತನಾದನು; ಯೋಚಿಸಿ....
ಯೋಚಿಸಿ..... ಅವನು ಹೇಳಿದನು :

"ಗೋಧಿ ..... .... ತುಂಬುವುದಕ್ಕೆ !"

ಫ್ರೆ : ಗೋಧಿ ತುಂಬುವುದಕ್ಕೆ ! ಒಳ್ಳೆಯದು ; ಯಾರಿಗಾಗಿ?

ಪೀ : ಬಡವರಿಗೆ ಹಂಚುವುದಕ್ಕಾಗಿ.

ಫ್ರೆ : ಸಂತೋಷ! ಗೋಧಿಯನ್ನು ತುಂಬಿ ಬಡವರಿಗೆ ಹಂಚತಕ್ಕ ಅಭಿಲಾಷೆಯುಳ್ಳ ನಿಮ್ಮಂತಹ ದಯಾವಂತ ಶ್ರೀಮಂತರು ಬರಿಗೈಯಲ್ಲಿ ಬಡವರ ಕೊರಗನ್ನು ನೀಗಲಾದೀತೇ? ಕೂಡದು: ಬಡವರಿಗೆ ಗೋಧಿ ಹಂಚುವ ಬಯಕೆಯುಳ್ಳ ನೀವು..... ಅದಕ್ಕಾಗಿಯೇ ನೆಲಮಾಳಿಗೆ ಕಟ್ಟಿಸಿರುವ ನೀವು.......... ಈ ತೆರನೆ ಆಡಬಾರದು .... .... ಮಾಡಬಾರದು. ಹೀಗೆನ್ನುತ್ತೇನೆಂದು ನೀವು ಕೋಪಿಸಲೂ ಕೂಡದು. ಬರಿಯ ಬಯಲಾಡಂಬರವನ್ನು ಸೂಚಿಸುವುದಕ್ಕಾಗಿ ಬಡವರ ಹೆಸರನ್ನು ಜನತೆಯ ಮುಂದಿಟ್ಟರೆ ಮೋಸಮಾಡಿದಂತೆ ಆಗುತ್ತದೆ. ಬದಲಾಗಿ ಆಡಿದಂತೆ ಮಾಡುವುದೇ ಮಾನವನ ನೀತಿಯಾಗಿರಬೇಕು.

ಪೀ : ಕ್ಷಮಿಸಿ........ಫ್ರೆಡರಿಕ್ ಮಹಾಶಯ ! ನಾನಂದದ್ದೆಲ್ಲ ತಪ್ಪಾಯಿತು ....ಕ್ಷಮಿಸಿ.

ಫ್ರೆಡರಿಕನೊಬ್ಬನೇ ಇದ್ದಿದ್ದರೆ ಪೀಟರನು ಅವನನ್ನು ಸುಟ್ಟು ಹಿಡಿಬೂದಿ ಮಾಡಿಬಿಡುತ್ತಿದ್ದನೋ ಏನೋ ! ಆದರೆ ಅವನೀಗ ತನ್ನ ಕ್ರೋಧವನ್ನು ನುಂಗಿಕೊಳ್ಳುವಂತಾಯಿತು. ನೆಲಮಾಳಿಗೆಯ ವಿಚಾರ ಫ್ರೆಡರಿಕನಿಗೂ ತಿಳಿದುಹೋಯಿತು. ಆದರೆ ಅವನ ಅದೃಷ್ಟ ! ನೆಲಮಾಳಿಗೆಯಲ್ಲಿ ಗೋಧಿಯನ್ನುಮಾತ್ರ ತುಂಬುವುದೆಂದವನರಿತುಕೊಂಡಿದ್ದುದು ಪೀಟರನ ಮನಸ್ಸಿಗೆ ಎಷ್ಟೋ ಶಾಂತಿಯನ್ನುಂಟುಮಾಡಿತು. ಮರುಮಾತನಾಡದೆ ಪೀಟರನು ಒಳಗೆ ಹೋಗಿ ನೂರು ಹೊನ್ನನ್ನು ಎಣಿಸಿ ತಂದು ಸ್ಯಾಮ್ಯುಯಲ್ಲನ ಕೈಯಲ್ಲಿಟ್ಟನು. ಫ್ರೆಡರಿಕನನ್ನು ಕುರಿತು ಮತ್ತೊಮ್ಮೆ ಹೇಳಿದನು ;

ಎಷ್ಟಾದರೂ ನೀವು ಗಣ್ಯರಾದ ವ್ಯಾಪಾರಿಗಳು ಫ್ರೆಡರಿಕ್ ಮಹಾಶಯ! ನಿಮ್ಮ ಮಾತನ್ನು ತಳ್ಳಿಬಿಡುವುದು ಮೂರ್ಖತನ. ನೀವು ಸಲಹೆ ಕೊಟ್ಟಂತೆ ನಡೆದುಕೊಂಡಿದ್ದೇನೆ. ನಾನಾಡಿದ ಮಾತುಗಳಲ್ಲಿ ಯಾವುದೇ ತಪ್ಪಾಗಿದ್ದರೂ ಮನ್ನಿಸಿ. ನಾನು ಮುದುಕ; ಒಬ್ಬೊಂಟಿಗ. ಅದೊಂದನ್ನೂ ಮನಸ್ಸಿಗೆ ಹಚ್ಚಿಕೊಳ್ಳಬೇಡಿ. ಸ್ಯಾಮ್ಯುಯಲ್ಲನ ವಿಚಾರದಲ್ಲಿ ಇನ್ನು ಮುಂದೆ ನಾನು ನಿಮ್ಮ ಸಲಹೆಯಂತೆಯೇ ನಡೆದುಕೊಳ್ಳುತ್ತೇನೆ. ನನ್ನ ಮಾತಿನಲ್ಲಿ ವಿಶ್ವಾಸವಿರಲಿ.

ಫ್ರೆ : ಆದದ್ದಾಗಿಹೋಯಿತು; ಬಿಡಿ. ಸ್ಯಾಮ್ಯುಯಲ್! ನಿನ್ನ ಇಷ್ಟವೂ ಕೈಗೂಡಿತು. ಧಣಿ ಹೇಳಿದಂತೆ ನಡೆದುಕೊಳ್ಳಪ್ಪ! ಇನ್ನು ನಾನು ಹೊರಡಲೆ ಪೀಟರ್ ಮಹಾಶಯ?

ಪೀ : ಹೊರಟಿರಾ? ನಮಸ್ಕಾರ! ವಿಶ್ವಾಸವಿರಬೇಕು.

ಫ್ರೆ : ನಮಸ್ಕಾರ!

ನೂರೈವತ್ತು ಹೊನ್ನುಗಳನ್ನು ಹಿಡಿದು ಸ್ಯಾಮ್ಯುಯಲ್ಲನೂ ಆರ್ಥರನೂ ಹಳ್ಳಿಯಕಡೆ ಆನಂದದಿಂದ ನಡೆದರು.



ಪ್ರಕರಣ ೧೯.

# ಕಾಳಮೃತ್ಯುವಿನ ಹಂಚಿಕೆ

ಫ್ರೆಡರಿಕನೊಂದಿಗೆ ಒಪ್ಪಂದವು ಮುಗಿದು ಮೂರು ದಿವಸಗಳು ಕಳೆದಿದ್ದುವು. ಅಂದು ಎಷ್ಟು ಪ್ರಯತ್ನಪಟ್ಟರೂ ಎಪ್ಪತ್ತನೆಯ ಚೀಲವು ತುಂಬಿರಲಿಲ್ಲ. ಫ್ರೆಡರಿಕನು ಆಕಸ್ಮಿಕವಾಗಿ ತಂದುಕೊಟ್ಟ ಇನ್ನೂರನ್ನೂ ಪೀಟರನು ಆ ಚೀಲದಲ್ಲಿ ತುಂಬುವುದರಲ್ಲಿದ್ದನು. ಆದರೆ ವಿಧಿಯಿಲ್ಲದೆ ಅದರಲ್ಲಿ ನೂರೈವತ್ತನ್ನು ಸ್ಯಾಮ್ಯುಯಲ್ಲನಿಗೇ ಕೊಡಬೇಕಾಗಿ ಬಂತು. ಆ ಮೂರು ದಿವಸಗಳಲ್ಲಿ ಐದು–ಹತ್ತು–ಆರು–ಒಂಬತ್ತು ಬಂದ ಬಂದಂತೆಲ್ಲ ಚೀಲದಲ್ಲಿ ಹಾಕುತ್ತ ಬಂದನು. ಹೇಗೋ ಒಂದು ಬಗೆಯಲ್ಲಿ ಚೀಲವೂ ತುಂಬಿತು! ‘ಸರಿ; ಕೊನೆಯ ಚೀಲವಾಯಿತಲ್ಲ; ಸ್ವಲ್ಪ ಹೆಚ್ಚಾದರೂ ಆಗಲಿ’ ಎನ್ನುತ್ತ ಪೀಟರನು ತನ್ನ ಕಿರುಬೆರಳಿನಲ್ಲಿದ್ದ ವಜ್ರದ ಉಂಗುರವನ್ನೂ ಚೀಲದಲ್ಲಿ ಹಾಕಿ, ಬಾಯಿ ಕಟ್ಟಿ ಮೊಹರುಮಾಡಿದನು. ನಿಧಾನಿಸಿದರೆ ಅಧಿಕಾರಿಗಳು ಬಂದುಬಿಟ್ಟಾರು. ಇಷ್ಟು ದಿವಸಗಳೂ ಪಟ್ಟ ಪ್ರಯತ್ನ ಪ್ರಯಾಸಗಳೆಲ್ಲವೂ ವ್ಯರ್ಥವಾದಾವು—ಎಂಬ ಹೆದರಿಕೆ ಅವನಿಗೆ ಆದುದರಿಂದ ಅಂದು ಪೀಟರನು ತನ್ನ ಊಟವನ್ನೂ ಮರೆತು, ಹೊನ್ನಿನ ಚೀಲವನ್ನು ಹೆಗಲಮೇಲೆ ಹೊತ್ತು, ನಿಶಿರಾತ್ರಿಯಲ್ಲಿ ನೆಲಮಾಳಿಗೆಯ ಕಡೆ ನಡೆದಿದ್ದನು.

ಆ ದಿನ ಸಂಜೆ ಯಜಮಾನನ ಆಜ್ಞೆಯಂತೆ ಡೇನಿಯಲ್ಲನು ಊಟವನ್ನು ತಂದು ಮೇಜಿನ ಮೇಲಿರಿಸಿ ಅದನ್ನು ಮುಚ್ಚಿಟ್ಟನು. ನಗರದಲ್ಲಿ ಯಾವುದೋ ನಾಟಕವಂತೆ. ಅದನ್ನು ನೋಡಬೇಕೆಂಬ ಬಯಕೆ ಡೇನಿಯಲ್ಲನಿಗೆ. ‘ಆಗಬಹುದು’ ಎಂದು ಧಣಿಯ ಅಪ್ಪಣೆಯೂ ದೊರೆಯಿತು. ಡೇನಿಯಲ್ ಅಂದು ರಾತ್ರಿ ನಾಟಕ ನೋಡಲು ಹೋದವನು ಮಾರನೆಯ ದಿನ ಬೆಳಿಗ್ಗೆ ಹತ್ತು ಗಂಟೆಯವರೆಗೂ ಬಂಗಲೆಯ ಬಳಿ ಬರಲೇ ಇಲ್ಲ.

ತನ್ನ ಕೊನೆಯ ಚೀಲದ ಸಾಗಾಟದಲ್ಲಿ ನಿರತನಾಗಿದ್ದ ಪೀಟರನಿಗೆ ಅಂದು ಊಟವನ್ನು ಬಿಟ್ಟಿಬಿಡಲು ನಿಧಾನವಾಯಿತು. ಎಂದೂ ಇಲ್ಲದೆ ಡೇನಿಯಲ್ಲನೂ ಅಂದು ಅದನ್ನು ಮರೆತನು. ಅವನು ಹೊರಟು ಹೋದಮೇಲೆ ಎಷ್ಟೋ ಹೊತ್ತಾದನಂತರ ಪೀಟರನು ನಾಯಿಯನ್ನು ಬಿಚ್ಚಿಬಿಟ್ಟನು. ಅಂತೂ ಆ ದಿನ ನಾಯಿಗೆ ತಿಂಡಿಯಿಲ್ಲ. ಕಾರಣ ? ನಾಟಕ ನೋಡುವ ಭರ— ಡೇನಿಯಲ್ಲನಿಗೆ ; ಹಣಕ್ಕಾಗಿ ಗುದ್ದಾಡುವ ಸಡಗರ—ಪೀಟರನಿಗೆ. ಇಬ್ಬರು ಮಾನವರು ತಮ್ಮನ್ನಾಶ್ರಯಿಸಿದ ಒಂದು ಮೂಗುಜೀವಿಯನ್ನು ಮರತೇ ಮರೆತರು. ಹಸಿವಿನಿಂದ ಆ ಪ್ರಾಣಿಯು ನೊಂದುದನ್ನು ಪರಮಾತ್ಮನೊಬ್ಬನೇ ಬಲ್ಲ !

ಕೊನೆಯ ಚೀಲವನ್ನು ಹೊತ್ತುಕೊಂಡು ಹೋಗುವ ಆ ರಾತ್ರಿ—ಅಲ್ಲ, ಅಲ್ಲ ; ......... ಹಿಂದಿನ ಎಲ್ಲ ರಾತ್ರಿಗಳಿಗೂ ಮಿಗಿಲೆನಿಸಿದ ಆ ಮಹಾ ರಾತ್ರಿ: ವಿಶ್ವವನ್ನೆಲ್ಲ ಒತ್ತಟ್ಟಿಗೆ ನೂಕಿ— ಅನಂತ ಪರಿಶ್ರಮದಿಂದ ಆಯುಷ್ಯಾಂತವೂ ಸಂಗ್ರಹಿಸಿದ ಆ ಅಪಾರ ನಿಧಿಸಮೂಹಕ್ಕೆ ಕಲಶಪ್ರಾಯವಾದ–ಮೊಹರು ಮಾಡಿದ ಆ ಅಂತಿಮ ಥೈಲಿಯನ್ನು–ತನ್ನ ಎಡ ಭುಜದಮೇಲೆ ಎಪ್ಪತ್ತು ವಯಸ್ಸಿನ ವೃದ್ಧ ಪೀಟರನು—ಅನಂತ ಶ್ರದ್ಧೆಯಿಂದ ನೆಲಮಾಳಿಗೆಯತ್ತ ಹೊತ್ತುತರುವ–ಆ ಮಹಾವೈಭವದ ರಾತ್ರಿ ! ಬಲಗೈಯಲ್ಲಿ ಕಿರುಹಣತೆ — ಕಿಸೆಯಲ್ಲಿ ಕೀಲಿ — ಎದೆಯಲ್ಲಿ ಆನಂದಾತಿಶಯ — ನಡಗೆಯಲ್ಲಿ ನಂಬಿಕೆ — ಈ ತೆರನೆ ಸುಸಜ್ಜಿತನಾದ ಅತುಳ ಶ್ರೀಮಂತ — ಮಹಾ ಮೇಧಾವಿ ! ಪೀಟರ್—ತೋಟದ ಬಳಿ ಕಟ್ಟಿಸಿದ್ದ ತನ್ನ ನೆಲಮಾಳಿಗೆಯನ್ನು ಕುರಿತು ಹೊರಟ ವಿಜಯೋತ್ಸಾಹಭರಿತ ನಿಶಿರಾತ್ರಿ !

ಆ ...... ...... ದು ...... ..... ದೇ ...... ...... ನು ?

ಬಂಗಲೆಯನ್ನು ಬಿಟ್ಟು ಪೀಟರನು ಎಪ್ಪತ್ತು ಗಜಗಳಷ್ಟು ದೂರ ನೆಲಮಾಳಿಗೆಯ ಕಡೆ ನಡೆದಿದ್ದನು. ಎಪ್ಪತ್ತು ಗಜವೆಂದು ಬಲ್ಲವರಾರು ? ಪೀಟರ್ ! ಬಂಗಲೆಯಿಂದ ನೆಲಮಾಳಿಗೆಗೆ ಹೋಗುವ ದಾರಿಯಲ್ಲಿ ತನ್ನ

ವಯಸ್ಸಿಗೆ ಅನುಗುಣವಾಗಿ ಪ್ರತಿ ಎಪ್ಪತ್ತು ಗಜಕ್ಕೂ ಒಂದೊಂದು ಕಲ್ಲನ್ನು ಅವನು ಹೂಳಿರಲಿಲ್ಲವೇ? ಏಳನೆಯ ಕಲ್ಲನ್ನು ಮುಟ್ಟಿದಾಗ ನೆಲಮಾಳಿಗೆಯ ಬಳಿ ಇದ್ದ ಆ ವಿಶಾಲ ವೃಕ್ಷದ ಬಳಿ ಬಂದು ಸೇರುತ್ತಿದ್ದನು. ಎಪ್ಪತ್ತು ವಯಸ್ಸು! ಏಳು ನೂರು ಹೊನ್ನುಗಳನ್ನು ವ್ರಯಮಾಡಿ ಕಟ್ಟಿಸಿದ ನೆಲಮಾಳಿಗೆ! ಅದಕ್ಕೂ ಬಂಗಲೆಗೂ ನಡುವೆ ಇದ್ದುದು ಎಪ್ಪತ್ತುಗಜದೂರಕ್ಕೆ ಒಂದೊಂದರಂತೆ ಏಳು ಕಲ್ಲುಗಳು! ಪೀಟರನ ನಡೆಯಲ್ಲೂ, ನುಡಿಯಲ್ಲೂ, ಆಚರಣೆಗಳಲ್ಲೂ ಅದೊಂದು ಬಗೆಯ — ಶಿಸ್ತು—ಒಂದು ಬಗೆಯ ಕ್ರಮ – ಎಲ್ಲಾ ಇತ್ತು.

ಇರಲಿ; ಆ ಮಹಾವೈಭವದ ನಿಶಿರಾತ್ರಿ ಬಂಗಲೆಯಿಂದ ಹೊನ್ನನ್ನು ಹೆಗಲಮೇಲೆ ಹೊತ್ತು ಹಣತೆಯೊಂದಿಗೆ ಹೊರಟ ಪೀಟರನ ಎಡಗಾಲು ಎಪ್ಪತ್ತು ಗಜ ದೂರದಲ್ಲಿದ್ದ ಮೊದಲನೆಯ ಕಲ್ಲಿಗೆ ಎಡವಿತು. ಅವನ ಭುಜದ ಮೇಲಿದ್ದ ಹೊನ್ನಿನ ಚೀಲವು ಧೊಪ್ಪೆಂದು ಕೆಳಗೆ ಬಿತ್ತು; ಹಣತೆಯು ನಂದಿ ಹೋಯಿತು; ಹೊನ್ನಿನ ಚೀಲವನ್ನು ಮತ್ತೆ ಕೈಗೆತ್ತಿಕೊಳ್ಳಲು ಕೆಳಗೆ ಬಗ್ಗಿದ್ದಾಗ ಅವನ ಕಿಸೆಯಲ್ಲಿದ್ದ ಕೀಲಿಯು ಠಣ್ಣೆಂದು ಕಲ್ಲಮೇಲೆ ಬಿದ್ದಿತು!

"ಧಿಕ್! ಧಿಕ್!" ಮನಸ್ಸಾಕ್ಷಿ! ಅದು ನುಡಿಯ ಬಲ್ಲುದೇ? ಬಲ್ಲುದು. ಎಚ್ಚರಿಸಬಲ್ಲುದೇ? ಬಲ್ಲುದು. ಹಾಗಾದಲ್ಲಿ ಮನಸ್ಸಾಕ್ಷಿ ನುಡಿವುದೇನು? "ಪೀಟರ್! ಇದು ಅ....ಪ....ಶ....ಕು....ನ" ಹೌದೇ? ...... ...... ಹೌದೇ? ಮನಸ್ಸಾಕ್ಷಿ ನುಡಿವುದು ನಿಜವೆ? "ಅದು ನಿಜವಿರಲಿ ..........ಸುಳ್ಳಾಗಿರಲಿ. ಮನಸ್ಸಾಕ್ಷಿ! ಉಹುಂ! ಪೌರುಷವುಳ್ಳ ಮಾನವರು ಮುಂದಿಟ್ಟ ಕಾಲನ್ನು ಹಿಂದಿಡಬಾರದು."

ಕಾಲೆಡವಿದುದು; ಹೊನ್ನಿನ ಚೀಲವು ನೆಲಕ್ಕುರುಳಿದುದು; ಹಣತೆಯು ಆರಿಹೋದುದು; ಕೀಲಿಯು ಕಿಸೆಯಿಂದ ಕೆಳಕ್ಕೆ ಬಿದ್ದುದು.....ದೈವಶಕ್ತಿಯು ದಯಾಭರಿತವಾದುದು. ಪೀಟರನ ವಿಚಾರದಲ್ಲೂ ಅದು ಕಠಿಣವಾಗಿರಲಿಲ್ಲಿ. ಆದರೆ ಆದು ಸ್ಪಷ್ಟವಾಗಿ ಸೂಚಿಸಿದುದನ್ನು ಅವನು ಮನಗಂಡನೇ? ಅದಕ್ಕೆ

ಮುನ್ನಡೆಯಿತ್ತನೇ? ಅಪಶಕುನವಾಯಿತೆಂದು ಕಂಡುಕೊಂಡನೇ? ಇಲ್ಲ; ಇಲ್ಲವೇ ಇಲ್ಲ. ಅವನು ನಿರ್ಧರಿಸಿದುದೇನು?

"ಬಂಗಲೆ ಕಡೆ ಹಿಂತಿರುಗುವುದು ಬೇಡ; ನೆಲಮಾಳಿಗೆಯ ಕಡೆ ಮುನ್ನಡೆವುದೇ ಸರಿ. ಕಲ್ಲೆದೆಯವನಾದ ನನಗೆ ಕಾಲೆಡವಿದ್ದೊಂದು ಲೆಕ್ಕವೆ? ಕೊಲೆಗೆ ಕೈ ನಡುಗಲಿಲ್ಲ. ಕೊಳ್ಳೆ ಕಳುವುಗಳಿಗೆ ಹೆದರಲಿಲ್ಲ. ಕಪಟ ಕಾರ್ಪಣ್ಯಗಳಿಂದ ಎದೆ ಬತ್ತಲಿಲ್ಲ. ಹಿಡಿಹಿಡಿಯಾಗಿ ಹಿಡಿದಿಟ್ಟು, ಕಡೆತನಕ ಕಾದಾಡಿ, ಕಡೆಯಲ್ಲಿ ಕನಕಕ್ಕೆ ಕಲಶವನಿಟ್ಟು, ಕೊನೆಯ ಚೀಲವನು ನೆಲ ಮಾಳಿಗೆಯೊಳಗಿರಿಸಿ, ಸುಭದ್ರಗೊಳಿಸಿ, ಕಣ್ತುಂಬ ನೋಡಿ ನಲಿವ ನಿರ್ಧರ ದೊಡನೆ, ಈ ಕಾಳರಾತ್ರಿಯೊಳು ಹೊರಹೊರಟಿರುವೆ ನಾನೊಬ್ಬೊಂಟಿಗ ನಾಗಿ. ಕಾಲೆಡವಿದುದಕ್ಕೆ ಹೆದರಲೇ? ಹೆದರಿ ಹಿಂಜರಿಯಲೇ? ಬೆದರಲೆ? ಬೆದರಿ ಬೆಚ್ಚಿಬೀಳಲೀ? ನಡುಗಲೇ? ನಡುಗಿ ಕಡೆಯಾಟವನು ಕಡೆಗೊತ್ತಲೇ? ಕಾಲೆಡವಿದರೆ ಎಡವಲಿ; ಹೊನ್ನಿನ ಥೈಲಿ ಕೆಳಗುರುಳಿತೇ? ಉರುಳಲಿ: ಮತ್ತೆ ಹೆಗಲನೇರಿಸಲಾರೆನೇ? ಹಣತೆಯು ಆರಿಹೋಯಿತೇ? ಮತ್ತೆ ಹೊತ್ತಿಸಿ ಹಿಡಿದರಾಗದೇ? ಕೀಲಿಯು ಕಿಸೆಯಿಂದ ಕೆಳಗೆ ಕಲ್ಲಮೇಲೆ ಬಿತ್ತೇ? ಬೀಳಲಿ; ಕೊಳ್ಳೆಹೋದುದೇನು? ಕೈಲೆತ್ತಿ ಮತ್ತೆ ಕಿಸೆಗೆ ಸೇರಿಸಿದ ರಾಯಿತು. ಮೂರ್ಖಮಾನವರಿಗೆ ಈ ಅಪಶಕುನಗಳೆಲ್ಲ! ನನ್ನಂತಹ ಧೀರನಿಗಿದೇತರ ಲೆಕ್ಕ? ನಾನು ಹೊರಟಿರುವುದು ನೆಲಮಾಳಿಗೆಯ ಕಡೆ ..........ಹೋಗುವುದು ನೆಲಮಾಳಿಗೆಗೆ!"

ಪೀಟರನು ಹಣತೆಯನ್ನು ಮತ್ತೆ ಹೊತ್ತಿಸಿದನು; ಕೀಲಿಯನ್ನು ಕೈಯ ಲೆತ್ತಿ ಕಿಸೆಗೆ ಸೇರಿಸಿದನು; ಹೊನ್ನಿನ ಥೈಲಿಯನ್ನು ಮತ್ತೆ ಹಿಡಿದೆತ್ತಿ ಭುಜದ ಮೇಲೆ ಹೊತ್ತು ಹತ್ತುಗಜ ಮುಂದೆ ನಡೆದನು. ಅಷ್ಟೊಂದು ನಿರ್ಧರದಿಂದ ಇದ್ದ ಅವನಿಗೂ ಆಗ ಕ್ಷಣಕಾಲ ಮನಸ್ಸು ಚಲಿಸಿ ಭ್ರಮಿಸಿತು:

"ಹೊರಡುವಾಗಲೇ ಕಾಲೆಡವಬೇಕಾಗಿತ್ತೇ? ಇದು ಶುಭ ಸೂಚಕ ವಲ್ಲ."

ಉತ್ತರ ಕ್ಷಣದಲ್ಲೆ ಪಿಶಾಚಾಪ್ರೇರಿತವಾದ ಅವನ ಮನಸ್ಸು ಮತ್ತೆ

ಅವನನ್ನು ಗದ್ದರಿಸಿ ಎಚ್ಚರಿಸಿತು !

"ಮೂಢ ! ಹೆದರುವಿಯೇತಕ್ಕೆ ? ಮುಂದಿಟ್ಟ ಕಾಲನ್ನು ಹಿಂದಿಡುವುದು ನಿನಗೆ ತರವೆ ? ಮೂರ್ಖತನವಿಲ್ಲದೆ ಮಹತ್ಕಾರ್ಯವನ್ನು ಸಾಧಿಸಲಾದೀತೇ ? ನಡಿ, ನಡಿ; ನೆಲಮಾಳಿಗೆಯ ಕಡೆ ನಡಿ. ಹೊತ್ತಾಯಿತು; ತೂಕಡಿಸುತ್ತ, ತೂರಾಡುತ್ತ ಇಲ್ಲಿ ನಿಂತು ಹುಚ್ಚನಾಗಬೇಡ; ಯಾರಾದರೂ ಹಿಂಬಾಲಿಸಿಯಾರು—ಎಚ್ಚರಿಕೆ !"

ಮನಸ್ಸೇ ಕಾರಕ, ಪ್ರೇರಕ, ಪ್ರೋತ್ಸಾಹಕ; ಅಂತೆಯೇ ಮನಸ್ಸಾಕ್ಷಿ —ಅರ್ಥಾತ್ ಅಂತರಾತ್ಮ !

"ಹೌದು ! ನಾನು ಧನದೇವತೆಯ ಆರಾಧಕ ! ಮುಂದಿಟ್ಟ ಕಾಲನ್ನು ಹಿಂದಿಡುವುದು ಧೀರರ ಲಕ್ಷಣವಲ್ಲ."

ಮುಗ್ಗರಿಕೆಯನ್ನು ಲಕ್ಷಿಸದೆ ಮುನ್ನುಗ್ಗಿ ಪೀಟರನು ನೆಲಮಾಳಿಗೆಯ ಬಾಗಿಲ ಬಳಿ ಬಂದು ಸೇರಿದನು.

ವಿಶಾಲ ವೃಕ್ಷವು ಆ ನೆಲಮಾಳಿಗೆಗೆ ಮರೆಯಾಗಿತ್ತು. ಅಲ್ಲಿ ಈಗ ಎಲ್ಲ ನಿಶ್ಶಬ್ದ. ಸುತ್ತಮುತ್ತಲೂ ಸುತ್ತಿ ನೋಡಿದನು; ಯಾರ ಸುಳಿವೂ ಇಲ್ಲ. ವಿಶ್ವವೆಲ್ಲ ನಿದ್ರಾಸಮುದ್ರದಲ್ಲಿ ಮುಳುಗಿದ್ದಂತೆ ಭಾಸವಾಗುತ್ತಿತ್ತು. ಎಚ್ಚತ್ತಿದ್ದವನು ಪೀಟರನೊಬ್ಬನೇ. ಅವನ ಅವಸರವು ಮತ್ತಾರಿಗಿತ್ತು ? ಅವನ ರೀತಿನೀತಿಗಳು ಪ್ರತ್ಯೇಕವಾಗಿ ಅವನವೇ ! ಅವನನ್ನು ಅನ್ಯರು 'ಮೂರ್ಖ' ಎಂದಾರು. ಆದರೆ ಅವರೆಲ್ಲ ಅವನ ಎಣಿಕೆಯಲ್ಲಿ 'ಮುಗ್ಧ'ರೆ !

ನೆಲಮಾಳಿಗೆಯ ಬಳಿ ಬಂದವನೇ ಅದರೊಳಗೆ ಗಾಳಿಯು ಪ್ರವೇಶಿಸಲಿ ಎಂದೆಣಿಸಿ ಪೀಟರನು ಅದರ ಬಾಗಿಲನ್ನು ತೆರೆದಿಟ್ಟನು. ಕದವನ್ನು ತೆಗೆದು ಪಕ್ಕಕ್ಕೆ ಬಿಡುವಾಗ ಅಂಚಿನಲ್ಲಿದ್ದ ಅವನ ಎಡಗೈ ಹೆಬ್ಬೆಟ್ಟು ಅದರ ಕೆಳಗೆ ಸಿಕ್ಕಿ ಹೆಚ್ಚುಕಮ್ಮಿ ಜಜ್ಜಿಹೋಯಿತು. ನೋವನ್ನು ತಡೆಯಲಾರದೆ ನರಳುತ್ತ ಅವನು ಎಷ್ಟೋ ಹೊತ್ತು ಬಾಗಿಲ ಬದಿಯಲ್ಲೆ ಕುಳಿತುಬಿಟ್ಟನು. ಬಾಗಿಲನ್ನು

ಇಷ್ಟು ಹೊತ್ತು ಅವನು ಅದುವರೆಗೆ ತೆಗೆದಿಟ್ಟವನೇ ಅಲ್ಲ. ನೆಲಮಾಳಿಗೆ ಯೊಳಗೆ ನಿರ್ಮಲವಾದ ಗಾಳಿಯು ಪ್ರವೇಶಿಸಲಿ ಎಂಬುದು ಅವನ ಮೊದಲ ಉದ್ದೇಶವಾಗಿತ್ತು. ಆದರೆ ಹೆಬ್ಬೆಟ್ಟು ಜಜ್ಜಿಹೋದಾಗ ನೋವಿನಿಂದ ವೈಮರೆತಂತಾದನು. ಬಳಿಕ ಅವನಿಗೆ ಮತ್ತೆ ಅನ್ನಿಸಿತು :

"ಇದುವರೆಗೆ ಅರುವತ್ತೊಂಭತ್ತು ಚೀಲಗಳನ್ನು ತಂದಿರಿಸಿದೆ. ಒಂದು ಸಲವೂ ನೆಲಮಾಳಿಗೆಯ ಕದವನ್ನು ಇಷ್ಟು ಹೊತ್ತು ತೆರೆದಿಟ್ಟು ಅದರ ಬಳಿ ಕುಳಿತವನಲ್ಲ. ಒಂದು ಸಲವೂ ಯಾವುದೊಂದು ವಿಘ್ನವೂ ಒದಗಲಿಲ್ಲ. ಆದರೆ ಇಂದೇಕೆ ಹೀಗಾಯಿತು? ಹೊರಡುವಾಗಲೇ ಕಾಲೆಡವಿತು; ಹೊನ್ನಿನ ಥೈಲಿ ಕೆಳಗುರುಳಿತು; ಕೀಲಿ ಕಿಸೆಯಿಂದ ಜಾರಿ ಬಿತ್ತು. ಹಣತೆ ಆರಿಹೋಯಿತು. ಇಲ್ಲಿ ಬಂದರೆ ಕದವನ್ನು ತೆಗೆದೊಡನೆ ಹೆಬ್ಬೆಟ್ಟು ಜಜ್ಜಿ ಹೋಯಿತು. ಇದೇನು ತಡ? ಹೆಚ್ಚು ಹೊತ್ತು ಹೊರಗಿನ ಗಾಳಿಯನ್ನು ಕುಡಿಯುವ ಪ್ರಾಪ್ತಿ ಇರಬಹುದು. ಗಾಳಿಯೇನೋ ತಣ್ಣಗೆ ಬೀಸುತ್ತಿದೆ. ನಾನೂ ದಣಿದಿದ್ದೇನೆ. ಇಲ್ಲೆ ಸ್ವಲ್ಪ ಹೊತ್ತು ಮಲಗಿ ನಿದ್ರಿಸಿದರೇನು?"

"ಥೂ! ಮೂಢ! ನಿನ್ನ ಬುದ್ಧಿ ಅಡವಿ ಪಾಲಾಯಿತೇ? ಇದು ಕೊನೆಯಚೀಲ! ಅದನ್ನೂ ಪಕ್ಕದಲ್ಲಿರಿಸಿಕೊಂಡು, ಬಾಗಿಲನ್ನು ತೆಗೆದಿಟ್ಟು ಕೊಂಡು ಮಲಗಿ ನಿದ್ರಿಸು! ಆಪತ್ಕಾಲಕ್ಕೆ ಇಂತಹ ಅವಿವೇಕವೇ ಅವಶ್ಯ ವಾದದ್ದು! ಮಲಗು........ನಿದ್ರಿಸು; ಬಾಗಿಲು ತೆರೆದೇ ಇರಲಿ. ಕಳ್ಳರು ಬಂದು ಎಲ್ಲವನ್ನೂ ಹೊಡೆದುಕೊಂಡು ಹೋಗಲಿ. ಇಷ್ಟು ದಿವಸದ ಶ್ರಮ ವ್ಯಯಗಳು—ಎಚ್ಚರಿಕೆಯ ಕ್ರಮಗಳು—ಎಲ್ಲವೂ ಮಣ್ಣುಪಾಲಾಗಲಿ ನೀನೂ ಕೊಲೆಯುಂಡು ಮಣ್ಣುಪಾಲಾಗು!"

ಅವನ ಮನಸ್ಸು ........ ಅವನನ್ನು ಮುನ್ನುಗ್ಗಿಸುವ ಶೈತಾನ! ಅದು ಸ್ಪಷ್ಟವಾಗಿ ನುಡಿಯಿತು. ಅಷ್ಟರಲ್ಲಿ ಅನತಿದೂರದಲ್ಲಿ—ಆ ಕತ್ತಲು ಕವಿದ ನಿಶಿರಾತ್ರಿಯಲ್ಲಿ ಯಾವುದೋ ಪ್ರಾಣಿ ನೆಲಮಾಳಿಗೆಯನ್ನು ಕುರಿತು ಓಡೋಡಿ ಬರುತ್ತಿತ್ತು. ಅದು ನರಿಯೋ, ನಾಯಿಯೋ, ಹುಲಿಯೋ, ಅಥವಾ, ಮತ್ತಾವ ದುಷ್ಟಮೃಗವೋ ಅವನಿಗರಿವಾಗಲಿಲ್ಲ. ಆ ಕಗ್ಗತ್ತಲೆಯಲ್ಲಿ

ಅವನಿಗೆ ಕಣ್ಣು ಕಾಣಿಸಲಿಲ್ಲ. ಕಳ್ಳರೇನಾದರೂ ಬೇಟೆನಾಯನ್ನು ಮುಂದಿಟ್ಟು ತನ್ನತ್ತ ಬರುತ್ತಿರಬಹುದೇ? ಏನು? ..... .... ನಾಯಿ ಹೊನ್ನನ್ನು ಮೂಸಿ ನೋಡಬಲ್ಲುದೇ? ........ ಹಾಗೆ ಕಳ್ಳರು ಬಂದರೆ ..... ಬಂದರೆ ...... ?"

ಸ್ವಲ್ಪ ನಿಧಾನದಿಂದ ಗಮನಿಸಿದ್ದರೆ ಅದು ತನ್ನದೇ ಆದ 'ಉಲ್ಫ್' ಎಂದು ಪೀಟರನಿಗೆ ಅರಿವಾಗುತ್ತಿತ್ತು. ಆದರೆ ಅವನಿಗೆ ಆ ಸಮಯದಲ್ಲಿ ಅಷ್ಟೊಂದು ಸಾವಧಾನವೆಲ್ಲಿಂದ ಬರಬೇಕು? ಎಪ್ಪತ್ತನೆಯ ಚೀಲವನ್ನು ನೆಲಮಾಳಿಗೆಯೊಳಗೆ ಸೇರಿಸಬೇಕಲ್ಲವೇ? ಅವನು ಆ ಪ್ರಾಣಿಗೆ ಅಂಜಿದ; ಧನದ ಥೈಲಿಯನ್ನು ಹೆಗಲಮೇಲೆ ಹೊತ್ತುಕೊಂಡ; ಕಿರುಹಣತೆಯನ್ನು ಕೈಯಲ್ಲಿ ಹಿಡಿದ; ಏಣಿಯೊಳಗೆ ಇಳಿದು ಕಂಬಿಯ ಮೆಟ್ಟಿಲ ಮೇಲೆ ನಿಂತ; ತಲೆಯ ಮೇಲಿದ್ದ ಉಕ್ಕಿನ ಕದವನ್ನು ಕೆಳಕ್ಕೆ ಎಳೆದುಕೊಂಡ; 'ಢಮಾರ್' ಎಂದು ಚೌಕಟ್ಟಿನಲ್ಲಿ ಬಿದ್ದು ಉಕ್ಕಿನ ಕದವು ಬೀಗ ಹಾಕಿಕೊಂಡಿತು.

"ಇಂತಹ ನೆಲಮಾಳಿಗೆಯುಂಟೇ? ಇಂತಹ ಬಾಗಿಲುಂಟೇ? ಇಂತಹ ಬೀಗವುಂಟೇ? ಹೊರಗಿರುವುದು ಹುಲಿಯೇ ಆಗಿರಲಿ ..... .... .... ಭಯವೇನಂತೆ! ಹ ಹ್ಹ ಹ್ಹ!"

ಪೀಟರನಿಗೆ ಅತುಳಾನಂದವಾಯಿತು. "ಹ ಹ್ಹ ಹ್ಹ! ಎಷ್ಟೊಂದು ಭದ್ರವಾಗಿದೆ ಈ ನೆಲಮಾಳಿಗೆ!"

ಅವನಿಗೊಂದು ಬಗೆಯಾದ ಹೆಮ್ಮೆ!

**"ಹ ಹ್ಹ ಹ್ಹ"** ಪ್ರತಿಧ್ವನಿ!

"ಇದನ್ನು ಒಡೆಯಬಲ್ಲ ಧೀರರು ಯಾರು?"

**"ಇದನ್ನು ಒಡೆಯಬಲ್ಲ ಧೀರರು ಯಾರು?"** ಮತ್ತೆ ಪ್ರತಿಧ್ವನಿ.

ಮಮಕಾರದಿಂದ ಅವನ ದೃಷ್ಟಿಗೆ ವಿಕಾರವು ತಟ್ಟಿತು. ಆಗ ಅವನ ಕಣ್ಣಿಗೆ ಕಂಡುದೇನು? ಮೇಲೆ ಸುಭದ್ರವಾದ ಉಕ್ಕಿನಬಾಗಿಲು; ಕೆಳಗೆ ನೆಲದ ಮೇಲೆ ವಿಶೇಷವಾದ ಧನರಾಶಿ! ಅವೆರಡರ ನಡುವೆ ತಾನು ಧೀರ,

ವೀರ, ಸಮರ್ಥ; ಆ ಹೊನ್ನಿನ ರಾಶಿಗೆ .... ಅದರ ರಕ್ಷಣೆಗಾಗಿ ನಿರ್ಮಾಣ ಗೊಂಡ ನೆಲಮಾಳಿಗೆ....ಅವೆರಡಕ್ಕೂ ಅವನೇ ಒಡೆಯ. ಅವಕ್ಕೆ ಕಾರಣ ನಾದವನೂ ಅವನೇ .... ಕರ್ತನೂ ಅವನೇ. ಇಂತಹ ಸಂಭಾವಿತ ತಾನು ..........ಆ ಪ್ರಾಧಾನ್ಯತೆಯಿಂದುತ್ಪನ್ನವಾದ ಗೆಲುವಿನ ನೋಟ !

" ಧನಮದಾಂಧನಾದ ಪೀಟರ್ ! ನಿನ್ನದೇ ಆದ ನಾಯನ್ನು ನೀನು ಗುರುತಿಸದೆ ಹೋದೆಯಲ್ಲವೆ? "

ಮತ್ತೆ ಮನಸ್ಸಾಕ್ಷಿಯ ಸೂಚನೆ....ಅದಕ್ಕವನು ಕಿವಿಗೊಡಬೇಕಲ್ಲ. ಇರಲಿ; ಪೀಟರನು ಕಂಬಿಯ ಮೆಟ್ಟಲುಗಳನ್ನು ಸಂಪೂರ್ಣವಾಗಿ ಇಳಿದಿರ ಲಿಲ್ಲ. ಅವನ ಕಾಲ ಕೆಳಗೆ ಇನ್ನೂ ಏಳು ಮೆಟ್ಟಲುಗಳು ಉಳಿದಿದ್ದುವು. ತಲೆಯಮೇಲೆ ಇದ್ದ ಉಕ್ಕಿನ ಕದವನ್ನು ನೋಡಿ ಅವನು ಹಿಗ್ಗಿದನು. ಹಿಗ್ಗುತ್ತ ಮೇಲೆ ನೋಡುತ್ತಿದ್ದಂತೆಯೇ ಕೆಳಗಿಳಿಯ ಹೋದ; ಮೆಟ್ಟಲು ತಪ್ಪಿತು. ' ಧುಡುಂ ' ಎಂದು ಪೀಟರನು ತನ್ನ ಧನರಾಶಿಯಮೇಲೆ ಬಿದ್ದನು. ಮೊದಲೇ ಬಂಗಲೆಯಿಂದ ಪ್ರಯಾಣಮಾಡಿ ಬಂದಿದ್ದ ಅರುವತ್ತೊಂಭತ್ತು ಭಂಗಾರದ ಚೀಲಗಳ ಮೇಲೆ ಎಪ್ಪತ್ತನೆಯದು ಧೊಪ್ಪೆಂದು ಬಿತ್ತು. ಹಣತೆಯು ಮತ್ತೆ ಆರಿಹೋಯಿತು.

ಹೊರಗಡೆ ತನ್ನ ನಾಯನ್ನು ನೋಡಿ ಗುರುತಿಸಲಾರದೆ — ಅದರ ಬರುವಿಕೆಯನ್ನು ಸಹಿಸಲಾರದೆ — ಪೀಟರನು ಛಟಕ್ಕೆಂದು ಒಳಗಿಳಿದು ನೆಲಮಾಳಿಗೆಯ ಬಾಗಿಲನ್ನು ಕೆಳಕ್ಕೆಳೆದುಕೊಂಡಿದ್ದನಷ್ಟೆ. ಬಾಗಿಲು ಬೀಗ ಹಾಕಿಕೊಂಡಿತ್ತು. ಈಗ ಪೀಟರನು ಮೆಟ್ಟಲು ತಪ್ಪಿ ತನ್ನ ಧನದ ಮೇಲೆ ಬಿದ್ದಿದ್ದನು. ಆ ಧನವನ್ನು ಅಪ್ಪಿಕೊಂಡಿದ್ದನು. ಹೆಚ್ಚೇನಿಲ್ಲ; ಎರಡು ನಿಮಿಷಗಳು ಸುಧಾರಿಸಿಕೊಂಡಮೇಲೆ ಅವನು ಹಣತೆಯನ್ನು ಹೊತ್ತಿಸಿಟ್ಟನು. ಅದರ ಬೆಳಕಿನಲ್ಲಿ ಎಪ್ಪತ್ತು ಚೀಲಗಳು ಸ್ಪಷ್ಟವಾಗಿ ಕಂಡುವು. ಈಗವನ ದೃಷ್ಟಿಯೆಲ್ಲವೂ ಸಂಪೂರ್ಣವಾಗಿ ಆ ಧನರಾಶಿಯ ಮೇಲೆ ನೆಟ್ಟುಹೋಗಿತ್ತು.

ಯಾವುದನ್ನು ಕ್ಷಣಿಕವೆಂದೂ, ಕ್ಷುದ್ರವೆಂದೂ, ಕ್ಷುಲ್ಲಕವೆಂದೂ, ಕ್ಷೋಭೆಯೆಂದೂ, ಕ್ಷಯಕಾರಕವೆಂದೂ, ಕ್ಷಿಪ್ರಸನ್ನಿಗೆ ಕಾರಣವೆಂದೂ, ಕ್ಷಣ ಭಂಗುರವೆಂದೂ ಭಾವಿಸಿ, ಧೀರೋದಾತ್ತ ಆತ್ಮೈಶ್ವರ್ಯಸಂಪನ್ನರೂ, ಉಜ್ವಲ ತ್ಯಾಗಿಗಳೂ ಆದ ಮಹಾಮಹಾ ತಪಸ್ವಿಗಳು ತಮ್ಮ ಸರ್ವಸ್ವವೂ, ಸರ್ವಾರ್ಥ ಸಿದ್ಧಿಯೂ, ಸಾಯುಜ್ಯವೂ, ನಿರ್ವಾಣ ಸಾಮ್ರಾಜ್ಯವೂ, ನಿರ್ಮಲಜ್ಞಾನ ವೊಂದರಲ್ಲಿ ಮಾತ್ರ ಅಡಗಿರುವುದೆಂದು ನಿರ್ಧರಿಸಿರುವರೋ, ಅಂತಹ ಧನ ರಾಶಿಯ ಹಿತಮಿತಗಳಳಿದ ಒಡೆತನವನ್ನು ಪೀಟರನು ಕ್ಷೇಮಕರವೆಂದೂ ತನ್ನ ಪ್ರಾಣಕ್ಕೂ ಮಿಗಿಲಾದುದೆಂದೂ ಎಣಿಸಿದನು. ಗುಪ್ತಕಾರಾಗಾರದಲ್ಲಿ ಬಚ್ಚಿಟ್ಟು ಅದಕ್ಕೊಂದು ಬಂಧನ ಸಮಾಧಿಯನ್ನು ಆನಂದದಿಂದ ಕಲ್ಪಿಸಿ, ಆ ಹೊನ್ನಿನ ರಾಶಿಯನ್ನು ಪರಮ ಪ್ರೀತಿಯಿಂದ ಪ್ರೇಮಾಲಿಂಗನ ಮಾಡಿದನು.

ಪೀಟರನು ನೆಲದ ಮೇಲಿದ್ದ ಚೀಲಗಳನ್ನೆಲ್ಲ ಒಂದೊಂದಾಗಿ ಪರೀಕ್ಷಿಸಿ ದನು. ಅವುಗಳ ಕೊರಳಿಗೆ ಒತ್ತಿದ್ದ ಮೊಹರುಗಳು ಸುಭದ್ರವಾಗಿದ್ದುವು. ಎಣಿಸಿ ನೋಡಿದನು. ಒಂದು.... ಎರಡು .... ಮೂರು ......... ಒಟ್ಟು ಎಪ್ಪತ್ತು ಚೀಲಗಳು. ಅವುಗಳನ್ನು ಎತ್ತಿ ನೋಡಿದನು; ತೂಕವಾಗಿವೆ. ಕುಲುಕಿ ನೋಡಿದನು; ಒಳಗಿದ್ದುವು ಚಿನ್ನದ ನಾಣ್ಯಗಳೇ! ಅವುಗಳನ್ನು ಚುಂಬಿಸಿ ದನು. 'ಮುದ್ದಾಗಿವೆ!' ಎಂದು ಅವನ ಮನಸ್ಸು ಸಂತಸಗೊಂಡಿತು. ಅವನ ಯೋಚನೆ ಮುಂದುವರೆಯಿತು :

"ಇದಿಷ್ಟು ಹಣವನ್ನೂ ನಾನೊಬ್ಬನೇ ಹೊರಬಲ್ಲೆನೇ?"

"ಆಗದು."

"ಚೀಲಗಳಲ್ಲಿರುವ ನಾಣ್ಯಗಳೆಲ್ಲವನ್ನೂ ಒಂದು ರಾಶಿಯಾಗಿ ಸುರಿದು ಎಣಿಸಿಬಿಡಲೇ?"

"ಎಣಿಸಬಹುದು.........ಆದರೆ ಅದು ಈಗ ಸಾಧ್ಯವಿಲ್ಲ. ಗಾಳಿಯಿಲ್ಲದ ಈ ನೆಲಮಾಳಿಗೆಯಲ್ಲಿ ಹಣತೆಯು ಅಷ್ಟು ಹೊತ್ತು ಉರಿಯಲಾರದು. ಹಣತೆಯು ಮಾತಂತಿರಲಿ; ನನಗೇ ಉಸಿರಾಡದು."

ಪೀಟರನು ಆ ಪ್ರಯತ್ನವನ್ನು ಬಿಟ್ಟನು. ಮತ್ತೆ ಹೊನ್ನಿನ ಥೈಲಿಗಳನ್ನು ನೋಡಿ ಅವನು ಮನದಣಿಯ ಹಿಗ್ಗಿದನು. ತಾನು ಮೈಮುರಿದು ದುಡಿದು, ಉತ್ತಮ ಕೃಷಿಮಾಡಿ, ಬೇಕಾದಷ್ಟು ಬೆಳೆ ಬೆಳೆದು, ಕಳದಲ್ಲಿ ಬಡಿದು, ಜಳ್ಳುತೂರಿ, ಗುಡ್ಡದಂತೆ ಒಂದು ರಾಶಿಯಾಗಿ ಬಿದ್ದಿರುವ ದವಸವನ್ನು ನೋಡಿ ಸುಗ್ಗಿಯ ಸಮಯದಲ್ಲಿ ರೈತನು ಹೇಗೆ ಹಿಗ್ಗುವನೋ, ಅದಕ್ಕಿಂತಲೂ ಅತಿಶಯವಾಗಿ ತನ್ನ ಅಖಂಡ ಧನರಾಶಿಯನ್ನು ನೋಡಿ ಪೀಟರನು ಅಮಿತಾನಂದದಿಂದ ಹಿಗ್ಗಿದನು. ಆದರೆ ರೈತನ ದವಸರಾಶಿಯು ಸಾವಿರಾರು ಹಸಿದ ಹೊಟ್ಟೆಗಳನ್ನು ಸಂತುಷ್ಟಗೊಳಿಸೀತು. ದವಸದೊಂದಿಗೆ ಬಂದ ಹುಲ್ಲು ಸಹಸ್ರಾರು ದನಕರುಗಳಿಗೆ ಮೇವಾದೀತು. ಆದರೆ ಪೀಟರನ ಧನರಾಶಿಯು ಕತ್ತಲ ಕಾರಾಗೃಹದ ಪಾಲು. ಅವನು ಅದರ ಒಡೆಯ! ಅಶ್ವವಾಗಲಿ, ಪುಸ್ತಕವಾಗಲಿ, ವನಿತೆಯಾಗಲಿ, ವಿತ್ತವಾಗಲಿ, ವೀಣೆಯಾಗಲಿ, ಜ್ಞಾನವಾಗಲಿ, ಜ್ಯೋತಿಯಾಗಲಿ, ಕ್ಷೇತ್ರವಾಗಲಿ, ಇವು ಒಂದೊಂದೂ ಅವುಗಳನ್ನು ಉಪಯೋಗಿಸುವವರ ಮುನ್ನೋಟದಮೇಲೆ, ಅವರ ವಿತರಣೆ, ದಕ್ಷತೆ, ವಿಚಕ್ಷಣೆ–ಇವುಗಳಮೇಲೆ ಹೊಂದಿಕೊಂಡಿರುತ್ತದೆ.

ಪೀಟರನ ಅಪಾರ ಧನರಾಶಿ! ಅದೀಗ ಕತ್ತಲ ಕಾರಾಗಾರಕ್ಕೆ ಮೀಸಲು!

" ಎಪ್ಪತ್ತು......... ಪೀಟರ್! ಇಂದಿಗೆ ನಿನ್ನ ಮನದೆಣಿಕೆಯು ಸಂಪೂರ್ಣವಾಗಿ ಸಫಲಗೊಂಡಿತು!"

ಎಂದು ಅವನಿಗನ್ನಿಸಿತು. ಆದರೆ......... ಉತ್ತರಕ್ಷಣದಲ್ಲಿಯೇ..........

" ಪೀಟರ್! ಇಂದಿಗೆ ನಿನ್ನ ಮನದೆಣಿಕೆಯು ಸಂಪೂರ್ಣವಾಗಿ ನೆರವೇರಿತು.......... ಇನ್ನೇನು? ಹಿಗ್ಗಿ ... ಹಾ.... ಳಾ.... ಗು."

ಯಾರು ಈ ಮಾತನ್ನಂದವರು?

ಮೃತ್ಯು! ಕಾಳಮೃತ್ಯು! ಅದಿಗೊಂದು ಅಂತ್ಯಪ್ರಾಯವಾದ ಮೃತ್ಯು!



## ಪ್ರಕರಣ ೨೦.



# ಸಮಾಧಿ

*' God Created Men To Enjoy, Not Destroy, The Fruits Of The Earth And Of Their Own Toil '*

ಕಿರುಹಣತೆಯ ಬೆಳಕಿನಲ್ಲಿ ಪೀಟರನು ಆ ಎಪ್ಪತ್ತು ಚೀಲ ಹೊನ್ನನ್ನು ನೋಡಿ ನೋಡಿ ಸಂತೋಷಪಟ್ಟನು. ಅಷ್ಟರಲ್ಲಿ ಹಣತೆಯು ನಂದಿಹೋಗುವಂತಾಯಿತು. ಆಗ ಅವನು ತನ್ನ ಕಿಸೆಯಲ್ಲಿದ್ದ ಮಯಣದ ಬತ್ತಿಯನ್ನು ಹೊರತೆಗೆದು ಹೊತ್ತಿಸಿ ಇಟ್ಟನು. ಅವನ ಆಯುರ್ದಾಯದಲ್ಲಿ ಅವನೊಂದು ದಿನವೂ ಹಾಗೆ ಎರಡು ದೀಪಗಳನ್ನು ಒಂದೇ ಕಡೆ ಒಟ್ಟಿಗೆ ಹೊತ್ತಿಸಿ ಇಟ್ಟವನಲ್ಲ. ಆದರೂ ಈಗವನು ಹಾಗೆ ಮಾಡಬೇಕಾಯಿತು. ಜೀವಾಂತ್ಯದಲ್ಲಿ ಮರಣ; ಮರಣಾಂತ್ಯದಲ್ಲಿ ಮತ್ತೆ ಜೀವನ ಎಂಬ ತತ್ತ್ವಗಳನ್ನು ನಿರೂಪಿಸುವಂತೆ ಅವನಿಗೆ ಅವನ ಅವ್ಯಕ್ತ ಅಂತರಾತ್ಮನೇನಾದರೂ ಪ್ರೇರೇಪಿಸುತ್ತಿರಬಹುದೇ?

ಹಣವನ್ನು ನೋಡಿದ ಮಾತ್ರದಿಂದ ಹೊಟ್ಟೆತುಂಬೀತೇ? ಅಥವಾ, ಹಸಿದ ಹೊಟ್ಟೆಗೆ ಹೊನ್ನಿನ ನಾಣ್ಯಗಳನ್ನು ತುಂಬಲಾದೀತೇ? ಹೆಚ್ಚಾಗಿ ಕೊಳ್ಳಬೇಕಾದ್ದನ್ನು ಕೊಳ್ಳುವಶಕ್ತಿಯನ್ನು ತಾನು ಪಡೆದಿರುವುದರಿಂದಲ್ಲವೆ ಪ್ರಪಂಚದಲ್ಲಿ ಹೊನ್ನಿಗಷ್ಟು ಪ್ರಾಶಸ್ತ್ಯ! ಹೊನ್ನನ್ನು ಪಳಗಿಸಬೇಕು; ಬಗೆಬಗೆಯಾಗಿ ಪಳಗಿಸಬೇಕು. ಆಗಲೇ ಹೊನ್ನಿಗೆ ನಿಜವಾದ ಪ್ರಾಶಸ್ತ್ಯ!

ಹಾಗಲ್ಲದೆ ಈ ಕತ್ತಲ ಕಾರಾಗಾರದಲ್ಲಿ, ವಿನಿಯೋಗವಿಲ್ಲದೆ, ವ್ಯವಹಾರಕ್ಕೆ ಸಿಲುಕದೆ, ಬೇಕಾದವರ ಉಪಯೋಗಕ್ಕೆ ಬಾರದೆ ಬಿದ್ದಿರುವ ಈ ಧನರಾಶಿ! ಇದು—ಹಿ ಡಿ ಮ ಣ್ಣಿ ಗಿ ಂ ತ ಲೂ ಕಡೆಯೆಂದೇ ಪರಿಗಣಿಸಲ್ಪಡಬೇಕು. ಯಾವುದೇ ವಸ್ತುವಾಗಲಿ ಅದು ತನ್ನ ಉಪಯೋಗದಿಂದ—ಅದರಲ್ಲಿಯೂ ಕ್ರಮವರಿತ, ಪಾಪವಿವರ್ಜಿತ — ಉಪಯೋಗದಿಂದಲೇ ಪ್ರಕಾಶಿಸಬೇಕು. ಉಪಯೋಗದಲ್ಲಿಲ್ಲದ ಎಂತಹ ಅಮೂಲ್ಯ ವಸ್ತುವಾದರೇನು? ಅದು ನಿರುಪಯೋಗವಾಗಿರುವ ಪರ್ಯಂತ ನಿಷ್ಪ್ರಯೋಜನವಾದುದೇ.

ಆ ಎಪ್ಪತ್ತು ಹೊನ್ನಿನ ಚೀಲಗಳು! ಅ ವು ಪೀಟರನಿಗೆ ಕೊಟ್ಟ ಫಲವೇನು? ಕೇವಲ ಮಾನಸಿಕವಾದ ಆನಂದ! ಅದರಲ್ಲಿಯೂ ಕ್ಷಣಿಕವಾದ ಆನಂದ!

ಅಂದು ರಾತ್ರಿ ತನ್ನ ಕೊನೆಯ ಚೀಲವನ್ನು ತುಂಬಿ, ಮೊಹರುಮಾಡಿ, ಹೊತ್ತು ತಂದು, ನೆಲಮಾಳಿಗೆಯೊಳಗಿರಿಸುವ ಸಂಭ್ರಮದಲ್ಲಿ ಆವನು ತನ್ನ ಊಟವನ್ನೂ ಮರೆತಿದ್ದನು. ಆ ಚೀ ಲ ವೇ ನೋ ನೆಲಮಾಳಿಗೆಯನ್ನು ಸುರಕ್ಷಿತವಾಗಿ ಸೇರಿತು. ಈಗವನಿಗೆ ಹಸಿವಿನಿಂದ ಪ್ರಾಣ ಹೋಗುವಂತಾಯಿತು. ಹಸಿವಿನೊಂದಿಗೆ ಮತ್ತಾವುದೋ ಒಂದು ಅವ್ಯಕ್ತ ಯಾತನೆಯು ಅವನನ್ನು ಬಾಧಿಸತೊಡಗಿತು. ಅಂತೂ ಆ ಯಾತನೆಯು ಯಾವುದು? ..........ಯಾವುದು? ...... .... ಯಾವುದು?

ಒಮ್ಮೆ ಇದ್ದಕ್ಕಿದ್ದಂತೆ 'ಇದೇನು?' ಎಂದು ಅವನು ಕೂಗಿಕೊಂಡನು.

'ಇದೇನು?' ನೆಲಮಾಳಿಗೆಯ ಪ್ರತಿಧ್ವನಿ.

ಮತ್ತೆ ಹೊನ್ನು .... .... ಹೊ....ನ್ನಿ.....ನ......ಹ.....ಂ.....ಬ......ಲ!

"ಎಪ್ಪತ್ತು ವಯಸ್ಸಿಗೆ ಎಪ್ಪತ್ತು ಚೀಲಗಳು! ವಯಸ್ಸಿಗೊಂದು ಚೀಲ! ಈಗ ನನ್ನ ಇಷ್ಟಾರ್ಥವು ಸಿದ್ಧಿಸಿತು!"

"ಸಿದ್ಧಿಸಿತೇ?" ...... ...... ಅವ್ಯಕ್ತ ಚಿಂತೆ!

ಆದರೆ ...... ...? ಆ ಚೀಲಗಳಲ್ಲಿರುವ ಹೊನ್ನಿನ ನಾಣ್ಯಗಳು ಅವನ

ಆ ವಿಸ್ತಾರ ಜೀವನದ ಚರಿತ್ರೆಯನ್ನು ಚಿತ್ರ ವಿಚಿತ್ರವಾಗಿ ಅವನ ಕಣ್ಣು ಮುಂದೆ ತಂದು ನಿಲ್ಲಿಸಿದಂತಾಯಿತು. ಅವನು ಭ್ರಮಿಸಿದ; ಭಯಗೊಂಡ ಚಿಟ್ಟೆಂದು ಚೀರಿದ. ಕ್ರಾಂತಿಕಾಲದಲ್ಲಿ ಅವನು ನಡೆಸಿದ ಕೃತ್ರಿಮ; ಹೊಡೆದ ಕೊಳ್ಳೆ; ಮಾಡಿದ ಕೊಲೆ; ಕೆಡಿಸಿದ ಕುಟುಂಬ; ನಲವತ್ತು ವರ್ಷಗಳ ಮುನ್ನ ಪ್ಯಾರಿಸ್ಸಿಗೆ ಬಂದುದು; ಹೆಸರನ್ನು ಮಾರ್ಪಡಿಸಿಕೊಂಡುದು; ಆ ಮೋಸ; ಆ ಕಪಟ; ಆ ಕಾರ್ಪಣ್ಯ .........ಅದು....ಇದು; ಇನ್ನೂ ನೂರಾರು ಚಿತ್ರಗಳು ಅವನ ಕಣ್ಣುಮುಂದೆ ಬಂದು ನಿಂತು ರುದ್ರನರ್ತನ ಮಾಡತೊಡಗಿರಬಹುದೇ? ಆ ಘೋರ ದೃಶ್ಯಗಳನ್ನು ಅವನು ಕಣ್ಣಾರೆ ನೋಡಲಾರದೆ ಹೋದನೇ? ಇರಬಹುದು; ಎಪ್ಪತ್ತು ಚೀಲ ಚಿನ್ನ! ಅದನ್ನು ಗಳಿಸಲು ಅವನು ಮಾಡಿದ ಕೊಲೆ, ಕಳವು ಕೊಳ್ಳೆಗಳೆಲ್ಲ ಒತ್ತಟ್ಟಿಗೆ ಇರಲಿ. ಆ ನಿಧಿಶೇಖರಣೆಗಾಗಿ ಏನಿಲ್ಲವೆಂದರೂ ಅವನು ಏಳು ಲಕ್ಷ ಸಲ ವಾದರೂ ಸುಳ್ಳನ್ನು ಹೇಳಿರಬೇಕಲ್ಲವೆ?

ಏಳು ಲಕ್ಷ ಸಲ ಸುಳ್ಳು; ಹೌದು; ಅದೇನೂ ಹೆಚ್ಚಲ್ಲ! ಆದರೆ....? ಅವನ ಮಾನವಜನ್ಮವನ್ನು ಇಷ್ಟೊಂದು ಕೆಳಮಟ್ಟಕ್ಕೆ ಇಳಿಸಿದ್ದು ಯಾವುದು? ಅವನ ಆ ಅಪಾರ ಧನದಾಸೆ; ಧನದಾಸ್ಯ, ಧನಾತಿಶಯದ ಪರಿಯದ–ಹಿಂಗದ—ಹ..ಂ..ಬ...ಲ! ಅದಕ್ಕಾಗಿಯೇ....ಆ ನಶ್ವರಧನಕ್ಕಾಗಿಯೇ.....ಅವನು ಎಲ್ಲರನ್ನೂ--ಮರೆತದ್ದು; ಕೊನೆಗೆ ತನ್ನನ್ನೂ, ತನ್ನ ಸಮಾಜವನ್ನೂ, ತನ್ನ ಸೃಷ್ಟಿಕರ್ತನನ್ನೂ ಮರೆತದ್ದು; ಅವನು ತನ್ನ ಕೊನೆಯೂಟವನ್ನು ಮರೆತದ್ದೂ ಅದರಿಂದಲೇ. ಆ ಧನವನ್ನು ಕ್ರಮಬದ್ಧವಾಗಿ, ಉಪಯೋಗಕರವಾಗಿ ಆಳಲರಿಯದ ಅವನು ಅದನ್ನೆಲ್ಲ ಬಂಧನ ಸಮಾಧಿಯಲ್ಲಿರಿಸಿ ತಾನೂ ದೇಶದ್ರೋಹಿ, ಧರ್ಮದ್ರೋಹಿ, ದೈವದ್ರೋಹಿಯಾದನಲ್ಲವೆ?

ಹಣವನ್ನು.....ಅಧಿಕ ಪ್ರಮಾಣದಲ್ಲಿ ಗಳಿಸಿದವರು ಅದನ್ನು ಸರ್ವಜನ ಸಮ್ಮತವಾಗಿ, ಸಕಲಜನಾದರಣೀಯವಾಗಿ, ಸಮಾಜೋಪಕಾರಿಯಾಗಿ ಆಳಬೇಕು. ಹಾಗಲ್ಲದೆ ಆ ಹಣಕ್ಕೆ ಆಳಾದರೆ ಅಂತ್ಯದಲ್ಲಿ ಅವರ ಗತಿಯೂ

ಹಾಳೇ! ಹಣವನ್ನು ಗಳಿಸಬೇಕು....ಹೇಗೆ? ಧರ್ಮಮಾರ್ಗದಲ್ಲಿ! ಹಣವನ್ನು ಉಳಿಸಬೇಕು; ಏತಕ್ಕಾಗಿ? ಧರ್ಮದ ಅಭಿವೃದ್ಧಿಗಾಗಿ! ಪಳಗಿಸಬೇಕು; ಯಾವರೀತಿಯಲ್ಲಿ? ಧರ್ಮಸಮ್ಮತವಾದ ಉದ್ಯೋಗ ವ್ಯವಹಾರಗಳ ಬೆಳವಣಿಗೆಗಾಗಿ. ಇಲ್ಲದಿದ್ದರೆ? ಹಣವು ಹಾಲಾಹಲವಾಗುತ್ತದೆ.

ಸದ್ರೀತಿಯಲ್ಲಿ ವ್ಯಯಮಾಡಲ್ಪಟ್ಟ ಧನವು ದೇಶದಲ್ಲಿ, ಜಗತ್ತಿನಲ್ಲಿ, ಹೊನ್ನಿನ ಹೊಳೆಯನ್ನು ಹರಿಸಿ, ಜನಸಾಂದ್ರತೆಯು ತಲೆಮಾರು ತಲೆಮಾರಿನವರಿಗೆ ಅಮರ ಉಪಕಾರವನ್ನೆಸಗೀತು. ಪೀಟರನಂತೆ ಕತ್ತಲಕಾರಾಗಾರಕ್ಕೆ ದೂಡಿದರೆ ಅಂತಹ ಧನವು ಗಳಿಸಿದವರಿಗೆ ನಶ್ವರವಾಗುವುದರೊಂದಿಗೆ ಅವರ ಪ್ರಾಣಕ್ಕೇ ಸಂಚಕಾರವನ್ನು ತಂದೀತು. ಶ್ರೀಮಂತನ ಧನವು ಸದುಪಯೋಗವಾದರೆ ಆ ಧನವಿನಿಯೋಗದಿಂದ ಉಪಕಾರ ಹೊಂದಿದ ಲಕ್ಷೋಪಲಕ್ಷ ಜನರು ಅವನನ್ನು ಕೃತಜ್ಞತೆಯಿಂದ ಸ್ಮರಿಸಿ ಹಿಂಬಾಲಿಸುತ್ತಾರೆ. ದುರುಳ ಧನದಾಸರ ಧನವು ದುರ್ನಿಮಿತ್ತಗಳಲ್ಲಿ ಪ್ರಯೋಗವಾದರೆ, ಅಥವಾ, ಬಚ್ಚಿಡಲ್ಪಟ್ಟರೆ, ಆಗ ಕೊರಳುತರಿವ ಕಪಟಿಗಳು ಆ ಧನದಾಸರ ಬೆನ್ನಹಿಂದೆ ಸದಾ ಸಿದ್ಧ.

ಇರಲಿ; ಇದ್ದಕ್ಕಿದ್ದಂತೆ ಪೀಟರನು ತಾನು ಏನನ್ನೋ ಮರೆತು ಹೋದವನಂತೆ ಚಿಂತಿಸತೊಡಗಿದನು. ಹಾಗಾದರೆ ಅವನು ಮರೆತುದೇನನ್ನು? ಹಣದ ಚೀಲವನ್ನೇ? ..... ...... ಅಲ್ಲ. ಅದು ಅವನ ಕಣ್ಣೆದುರಿಗೇ ಇದೆ. ಇಂತಹದೆಂಬುದನ್ನು ಅವನು ತಕ್ಷಣ ಕಂಡುಕೊಳ್ಳಲಾರದೆ ಹೋದನು.

ಅಷ್ಟು ಹೊತ್ತಿಗೆ ಮಯಣದ ಬತ್ತಿಯು ಸರಸರನೆ ಹತ್ತಿ ಉರಿಯ ತೊಡಗಿತು; ಅರ್ಧವಾಯಿತು; ಕಾಲಾಯಿತು; ಮಯಣವು ಕೆಳಗಿಳಿಯುತ್ತ ಬಂತು. ಇನ್ನೇನು? ಅದರ ಜೀವವೂ ಕೊನೆಗೊಳ್ಳುವುದರಲ್ಲಿತ್ತು. ಆ ಜೀವದೊಂದಿಗೆ ಅದರ ಜ್ಯೋತಿಯೂ ನಾಶ ಹೊಂದುವುದರಲ್ಲಿತ್ತು. ಆಗ ನೆಲಮಾಳಿಗೆಯು ಗಾಢಾಂಧಕಾರದಲ್ಲಿ ಮುಳುಗಿಹೋಗುತ್ತಿತ್ತು. ಉರಿದು ತೊಡೆದು ಹೋಗುತ್ತಿದ್ದ ಆ ಮಯಣದಬತ್ತಿಯೇನಾದರೂ ಪೀಟರನನ್ನು

ಎಚ್ಚರಿಸಿತೇ? 'ನೋಡು; ಮಾನವಜೀವನವೂ, ಅವನು ಗಳಿಸಿದ ಧನವೂ ಹೀಗೆಯೇ ನಶ್ವರವಾದುದು!' ಅವನಿಗದು ಉರಿದು ತೊಡೆದು ಹೋಗುತ್ತಿದ್ದ ಬತ್ತಿಯಿಂದ ಬೋಧೆಯಾಯಿತೇ? ಅಗ್ನಿಕುಂಡದಲ್ಲಿ ಬಿದ್ದು ಚೆನ್ನಾಗಿ ಕೆಂಪಗೆ ಕಾದರಲ್ಲವೆ ಕಬ್ಬಿಣವನ್ನು ಇಷ್ಟಬಂದಂತೆ ಬಡಿದು ಅವಕ್ಕೆ ಬೇಕಾದ ರೂಪವನ್ನು ಕೊಡಲಾದೀತು? ಅಂತೆಯೇ ಮಾನವನ ಮನಸ್ಸು! ಮನಸ್ಸಿನ ಮಾರ್ಪಾಡು ಉಂಟಾಗುವುದು ಕಷ್ಟನಷ್ಟಗಳ ಪರಿಪೂರ್ಣಾನುಭವದಿಂದ!

ಪೀಟರನು ಕಳೆದುಕೊಂಡುದೇನು? ತನ್ನ ಕಡೆಯ ಊಟ ...... ತನ್ನ ಸ್ವಾತಂತ್ರ್ಯ ...... ತಾನಿದ್ದ ಆ ಕತ್ತಲು ಕಾರಾಗಾರದ ... ಅಲ್ಲ ...... ಅಲ್ಲ; ಅವನ ಸ..... ಮಾ..... ಧಿ..... ಸ್ಥಾ... ನ.... ದ ಬೀಗದಕ್ಕೈ. ಪೀಟರನ ಪರಿಶ್ರಮಕ್ಕೆ ಪರಾವರ್ತನೆಯುಂಟಾಯಿತು. ಅದು ಪರಮಾತ್ಮನ ಲೀಲೆ!

ಹೆಚ್ಚೇನಿಲ್ಲ; ಮರುನಿಮಿಷದಲ್ಲೆ ಈ ಕೃಪಣನ ಮುಂದೆ ಉರಿದುರಿದು ಫಲವಿಲ್ಲ. ನದಿಯ ತಿಳಿನೀರನ್ನು ಒಲ್ಲದ ಹಲಕೆಲ ಪ್ರಾಣಿಗಳು ಕೊಚ್ಚೆ ನೀರಿಗೆ ಬಾಯೊಡ್ಡುವಂತೆ, ಈ ಅಜ್ಞಾನಿಯು ಜ್ಞಾನದೀಪವನ್ನು ಆಶಿಸುವುದಿಲ್ಲ — ಎಂದು ಸೂಚಿಸುವ ತೆರನೆ, ಇವನ ಕಣ್ಣಿಗೆ ಬೆಳಕು ಬೇಡ; ಮನಸ್ಸಿಗೆ ಮೊದಲೇ ಎಟಕದು — ಎನ್ನುವ ತೆರನೆ, ಅವನನ್ನು ಕಂಡು ಬಹುವಾಗಿ ಬೇಸರಗೊಂಡಿತೋ ಎನ್ನುವ ತೆರನೆ, ಮಯಣದ ಬತ್ತಿಯು ಅವನನ್ನು ಹಂಗಿಸುತ್ತ, ಅಂತ್ಯದಲ್ಲಿ ಅತ್ಯಂತವಾಗಿ ಪ್ರಕಾಶಿಸಿ, ಫಟಕ್ಕೆಂದು ಆರಿಹೋಯಿತು.

ಅದೇ ಸಮಯದಲ್ಲಿ ತನ್ನ ಎದೆಯ ದೀಪವು ನಂದಿತೋ ಎಂಬಂತೆ ಪೀಟರನು ಕಾತುರಗೊಂಡನು. ಇನ್ನು ನೆಲಮಾಳಿಗೆಯ ಕತ್ತಲಲ್ಲಿ ತಾನು ಉಳಿಯುವುದೆಂತು? ಅವನು ಏಣಿಯ ಮೇಲೇರಿದನು; ಹದಿನೈದರಲ್ಲಿ ಹತ್ತು ಮೆಟ್ಟಲುಗಳನ್ನು ಹತ್ತಿದ್ದಾನೆ. ಮೇಲುಗಡೆ ಅವನ ತಲೆಗೆ ಬಾಗಿಲು ತಗಲುತ್ತಿದೆ. ಅದನ್ನು ತೆಗೆಯಬೇಕು. ಅವನು ತನ್ನ ಕಿಸೆಯಲ್ಲಿ ಕೈಹಾಕಿ ನೋಡಿದನು. ಆದರೆ ಅಲ್ಲೇನಿದೆ? ಬೀಗದಕೈ ಮೇಲುಗಡೆ ಬಾಗಿಲಲ್ಲೆ ಉಳಿಯಿತು. ಆಷ್ಟೊಂದು ಸಂಭ್ರಮದಿಂದ, ಆಷ್ಟೊಂದು ಆತುರದಿಂದ

ಅಷ್ಟೊಂದು ರಹಸ್ಯದಿಂದ, ಅಷ್ಟೊಂದು ಆಸಕ್ತಿಯಿಂದ ಕಟ್ಟಿಸಿದ ಆ ನೆ.....ಲ .....ಮಾ ... ಳಿ ........ಗೆ, ಸರಕಾರವನ್ನೂ ಸಾರ್ವಜನಿಕರನ್ನೂ ವಂಚಿಸ ಲೋಸುಗವಾಗಿ ನಿರ್ಮಿತವಾದ ಆ ನೆ....ಲ....ಮಾ....ಳಿ....ಗೆ! ಅದರ ಉಕ್ಕಿನ ಬಾಗಿಲು ಅವನನ್ನೇ ಕೆಳಗೆ ತಳ್ಳಿ 'ಆತ್ಮವಂಚನೆ ದೈವವಂಚನೆಗಳನ್ನು ಮಾಡಿದ ಕಪಟಿ!' ಎಂದು ಅಬ್ಬರಿಸಿ, ಮೂನಿಸಿನಿಂದ ಮುಚ್ಚಿಕೊಂಡು ಬಿಟ್ಟಿತ್ತು.

'ನೀನು ಪೂಜಿಸಿ ಭದ್ರಗೊಳಿಸಿದ ಧನ! ಅದನ್ನು ಶತ್ರುಸಮಾನವಾಗಿ ಭಾವಿಸಿ, ಕತ್ತಲು ಕೋಣೆಯಲ್ಲಿ ತಳ್ಳಿ, ಕೃತಘ್ನನಂತೆಯೂ, ಕಪಟಿ ಯಂತೆಯೂ ಓಡಿ ಹೋಗುತ್ತೀಯಾ?' ಎಂದು ಅಬ್ಬರಿಸಿ ಮುಚ್ಚಿ ಕೊಂಡಿತ್ತು ಆ ಉಕ್ಕಿನ ಬಾಗಿಲು!

ಹಾಯ್! ಹಾಯ್! ಜಡವಸ್ತುಗಳಿಗೂ ಮಾನವನ ಮೇಲೆ ಇಂತಹ ಕ್ರೋಧವೇ? ಅವನಿಗೆ ಮಿಂಚಿದ ಈ ಪ್ರತೀಕಾರವೇ? ಹೌದು; ಎಳ್ಳನ್ನು ಬಿತ್ತಬಹುದಾದ ಭೂಮಿಯಲ್ಲಿ ಮುಳ್ಳುಬೀಜಗಳನ್ನು ಬಿತ್ತಿದರೆ ಬೆಳೆಯುವುದು ಎಳ್ಳೋ? ..... ಮುಳ್ಳೋ?

"ಪೀಟರ್! ಕ್ರಿಸ್‌ಮಸ್ ಹತ್ತಿರವಾಗುತ್ತಿದೆ. ಹೋಗು; ಧಾನ್ಯ ವನ್ನು ತಂದು ಕಣಜಕ್ಕೆ ತುಂಬು; ನಿನ್ನ ಎಪ್ಪತ್ತನೆಯ ವಯಸ್ಸನ್ನು ಪೂರ್ತಿ ಗೊಳಿಸುವಂದು ಸಂಭ್ರಮದಿಂದ ಸಾವಿರಾರು ಬಡಬಗ್ಗರಿಗೆ ಗೋಧಿಯನ್ನು ದಾನಮಾಡುವಿಯಂತೆ!"

ಯಾರು ನಕ್ಕದ್ದು? ಗಹಗಹಿಸಿ ನಕ್ಕದ್ದು ಯಾರು? ಮತ್ತಾರು? ಮೃ....ತ್ಯು....ದೇ....ವ....ತೆ!

* * * * *

"ನೀನಾಗಿ ಶ್ರಮಪಟ್ಟು ಶ್ರದ್ಧೆಯಿಂದ ಮಾಡಿಸಿದ ಉಕ್ಕಿನ ಬಾಗಿಲು ಇದು. ಇದನ್ನು ನಿನ್ನ ಕೈಯಾರೆ ಮುಚ್ಚಿಕೊಂಡೆಯಾ ಪೀಟರ್! ನಿನ್ನ

ಬೀಗದ ರಹಸ್ಯಕ್ಕೆ ನಿನ್ನನ್ನು ಕಂಡರೂ ಲಕ್ಷ್ಯವಿಲ್ಲವೆ? ಬೇಡ ..........ಮರುಕ ವಾದರೂ ಬೇಡವೆ?"

ಈಗ ಯಾರು ಮತ್ತೆ ಆಣಕವಾಡುವುದು ?

ಅದೇ ವ್ಯ ... ತ್ಯಾ....ದೇ....ವ....ತೆ !

"ಪೀಟರ್ ! ನೀನು ಮಾಡಿಸಿದ ಬೀಗದ ಕೈ. ಅದು ಮೇಲೆಯೇ ಉಳಿಯಿತು. ಈಗೇನು ಮಾಡುವೆ? .... ಪೀಟರ್ ! ನಿನ್ನ ಬಾ ಗಿ ಲು.... ಪಾಪ! ಅದು ನಿನಗೇ ಶತ್ರುವಾಯಿತೇ? ತಲೆಚಚ್ಚಿಕೊಂಡರೂ ಆ ಬಾಗಿಲು ತೆರೆಯದಾಯಿತೇ?"

ಯಾರು ಕೇಳಿದ್ದು? ಅವನ ಅವ್ಯಕ್ತ ಅಂತರಂಗ!

"ಹಾಗಾದರೆ ಈ ನೆಲಮಾಳಿಗೆ?"

"ಇದು ನಿನ್ನ ಸ....ಮಾ....ಧಿ!"

"ಸಮಾಧಿ! ನಾನು ಸತತವಾಗಿ ಗಳಿಸಿ ಸಂರಕ್ಷಣೆಮಾಡಿದ ನನ್ನ ನಿಧಿಮೊತ್ತದ ಎದುರಿನಲ್ಲಿ ನನ್ನ ಸಮಾಧಿ; ಇಲ್ಲ.... ... ನಾನು ಒಲ್ಲೆ. ನಾನು ಸಮಾಧಿಗೆ ಸಿದ್ಧನಾಗಿಲ್ಲ."

"ಬೇಡವೆಂದರೆ ಬಿಡದು. ನೀನು ಬೀಸಿದ ಬಲೆ ನಿನ್ನನ್ನೇ ಬಂಧಿಸಿದೆ. ನೀನು ಸಮಾಧಿಗೆ ಸಿದ್ಧನಾಗಿಲ್ಲ. ಆದರೆ ಸಮಾಧಿಯು ನಿನಗೆ ಸಿದ್ಧವಾಗಿದೆ."

"ನಾನು ಸಾ....ಯ.....ಲೇ.....ಬೇ ....ಕೇ?"

"ಹೌದು; ಇಲ್ಲದೆ ಬೇರೆ ಗತ್ಯಂತರವಿಲ್ಲ."

"ಹಾಗಾದರೆ ನಾನು ಗಳಿಸಿದ ಈ ಅಪಾರ ನಿಧಿ.....ಇದು ನನ್ನದಲ್ಲವೆ?"

"ಅಲ್ಲ, ಅಲ್ಲ; ಸಾವಿರ ಸಲ ಅಲ್ಲ. ಅದು ನಿನ್ನದಲ್ಲ.

"ಅದು ನನ್ನದಲ್ಲ! ಅದನ್ನು ನಂಬಬಾರದೇ?"

" ಅದನ್ನು ನಂಬಿ ಪ್ರಯೋಜನವಿಲ್ಲ "

" ಅದು ನನ್ನ ಶತ್ರುವಾಯಿತೇ ? "

" ಶತ್ರು ಮಾತ್ರವಲ್ಲ; ನಿನ್ನ ಕೊರಳ ಕಿವಿಚಿಬಿಡಲು ಎದ್ದು ನಿಂತಿದೆ. "

" ಬೇಡ.... ಬೇಡ. ನನ್ನ ಧನ ನನಗೇ ಶತ್ರು! ಹಾಗಾದಲ್ಲಿ ಅದರ ಎದುರಿನಲ್ಲಿ ನಾನು ಸಾಯಲಾರೆ. "

" ಬೇರೇನು ಮಾಡುವೆ ? "

" ಬಾಗಿಲ ಹೊರಗೆ ಮರಕ್ಕೆ ನೇಣು ಹಾಕಿಕೊಂಡು ಸಾಯುತ್ತೇನೆ. "

" ಕೂಡದು ; ಈ ನಶ್ವರಧನಕ್ಕಾಗಿ ನಿನ್ನ ಪ್ರಾಣಾರ್ಪಣೆ ಮಾಡುವುದಾಗಿ ಪ್ರಮಾಣ ಮಾಡಿದ್ದೆಯಲ್ಲವೆ ? "

" ಹೌದು ಅನಂತ ಶ್ರದ್ಧೆಯಿಂದ ಅದನ್ನು ಪೂಜಿಸಿ ಪ್ರಮಾಣ ಮಾಡಿದ್ದೆ. "

" ಆ ಪ್ರಮಾಣವನ್ನು ರಣವೀರನಂತೆ, ಧೀರನಂತೆ ನೆರವೇರಿಸು. "

" ನೆರವೇರಿಸಲೇ ಬೇಕೆ ? "

" ಪ್ರ....ತಿ....ಜ್ಞಾ....ಪ....ರಿ.....ಪಾ.....ಲ......ನೆ ! ಅದು ಪವಿತ್ರವಾದುದು ಪೀಟರ್ ! "

ಪೀಟರನಿಗೂ ಅವನನ್ನು ಬೆನ್ನಟ್ಟಿ ಬಂದ ವಿಧಿಗೂ ಮೇಲ್ಮಂಡಂತೆ ಹೋರಾಟವು ನಡೆಯಿತು. ವಿಧಿಯೇ ವಿಜಯ ಹೊಂದಿತು. ಪೀಟರನು ಪರಾಜಿತನಾದ.

× × × × ×

ಪೀಟರನು ಆಡಿದ ಒಂದೊಂದು ಮಾತಿಗೂ ನೆಲಮಾಳಿಗೆಯ ಪ್ರತಿಧ್ವನಿಯೇ ಪ್ರತ್ಯುತ್ತರ. ವ್ಯಸನಾಕ್ರಾಂತನಾದ, ಭಯಾರ್ತಚಕಿತನಾದ

ಪೀಟರನು ಕೂಗಿಕೊಂಡನು. ಗಂಟಲೊಡೆದುಹೋಗುವಂತೆ ಗಟ್ಟಿಯಾಗಿ ಅರಚಿದನು. ಹಾಹಾಕಾರ ಎಬ್ಬಿಸಿದನು. ಆದರೆ ಅವನು ಮಾಡಿಸಿದ್ದ ಆ ಉಕ್ಕಿನ ಕದವು ಮಂದವಾದ ತಗಡಿನದು. ಅವನು ಮುದುಕ; ಅವನ ತ್ರಾಣವು ಕುಗ್ಗಿಹೋಗಿದೆ. ಅದು ಆ ಉಕ್ಕಿನ ಕದವನ್ನು ಭೇದಿಸಿಕೊಂಡು ಹೋಗುವಷ್ಟು ತ್ರಾಣವನ್ನು ತಾಳಿರಲಿಲ್ಲ. ಹೇಗಾದರೂ ಆಗಲಿ ಎಂದು ಅವನು ತನಗಿದ್ದ ಶಕ್ತಿಯನ್ನೆಲ್ಲ ಒಟ್ಟುಗೂಡಿಸಿ 'ಹೋ' ಎಂದು ಅರಚಿದನು. ಆದರೇನು? ಪ್ರತ್ಯುತ್ತರವಿಲ್ಲ. ಉಸಿರಾಟಕ್ಕೆ ತಡೆಯನ್ನುಂಟು ಮಾಡುತ್ತಿದ್ದ ಆ ಪ್ರಯಾಸಕರ ಪರಿಸ್ಥಿತಿಯಲ್ಲಿ ಅವನು ಕೂಗಿಕೊಂಡನು :

"ಬಾಗಿಲು ತೆಗೆದವರಿಗೆ ತುಂಬಿದ ಒಂದು ಹೊನ್ನಿನ ಚೀಲ!"

"ಎರಡು ಚೀ.....ಲ.....ಾ!"

ಮತ್ತೆ ಅದೇ ನಿಶ್ಶಬ್ದ.

"ಮೂರು ಹೊನ್ನಿನ ಚೀಲ—ಾ....ಬಾಗಿಲು ತೆಗೆದವರಿಗೆ."

"ಬೇಡ; ಹತ್ತೂ ..... ...."

"ಆಗದೇ? ......... ಇಪ್ಪತ್ತು?"

ಆ ನಿಶಿರಾತ್ರಿಯಲ್ಲಿ ಇಲ್ಲಿ ಯಾರಿದ್ದಾರೆ? ಯಾರೂ ಇರಕೂಡದು ಎಂಬುದೇ ಪೀಟರನ ಸಂಕಲ್ಪ. ಅವನ ಈ ಸಂಕಲ್ಪವನ್ನು ಈಡೇರಿಸುವುದರಲ್ಲಿ ವಿಧಿಯೂ ಕಂಕಣ ತೊಟ್ಟು ಅವನ ಕಿಂಕರನಾಗಿ ನಿಂತಿತ್ತು. ಪೀಟರನು ಮತ್ತೆ ಅರಚಿದನು :

"ಮು....ವ್ವ....ತ್ತು! ಬಾಗಿಲು ತೆಗೆದವರಿಗೆ ಮುವ್ವತ್ತು ಚೀಲ..... .....ಚಿನ್ನ."

"ನಲವತ್ತು!"

"ಐವತ್ತು!"

"ಅರುವತ್ತು!' ........ ಆಗದೇ? ಎಪ್ಪತ್ತು ಚೀಲ ಚಿನ್ನ

ನನ್ನ ಸರ್ವಸ್ವ! ಎಪ್ಪತ್ತು! ಅವರಿವರೆಂಬ ನಿಯಮವಿಲ್ಲ. ಯಾರು ತೆಗೆದರೆ ಅವರಿಗೆ..... ಬೇಗ ತೆಗೆಯಿರಿ..... ಬಾಗಿಲು.... ಬಾಗಿಲು.... ಬಾಗಿಲೂ!"

ಪೀಟರನು ಈಗ ಬಳಲಿ ಬೆಂಡಾದನು. ಆ ಕಗ್ಗತ್ತಲಲ್ಲಿ, ಉಸಿರಾಡದ ಆ ನೆಲಮಾಳಿಗೆಯಲ್ಲಿ, ಹೊಟ್ಟೆ ತಾಳಹಾಕುತ್ತಿರುವಾಗ, ಭಯದಿಂದ ಉಡುಗಿಹೋದ ಅವನ ಶರೀರವು ಗಡಗಡನೆ ನಡುಗುತ್ತಿರುವಾಗ, ಆಯಾಸದಿಂದ ಕಣ್ಣು ಮುಚ್ಚಿಹೋಗುತ್ತಿರುವಾಗ, ಕಂಬಿಯ ಮೆಟ್ಟಲುಗಳ ಮೇಲೆ, ಎಪ್ಪತ್ತು ವಯಸ್ಸಿನ ಆ ಮುದಿಮಾನವನು ಎಷ್ಟು ಹೊತ್ತು ಹಾಗೆ ನಿಂತಿರಲಾದೀತು ?

ಪೀಟರನ ದೃಷ್ಟಿಯು ಈಗ ನೆಲಮಾಳಿಗೆಯ ನೆಲದ ಮೇಲಿಲ್ಲ. ಅದು ಅದರ ಬಾಗಿಲ ಕಡೆ ಇತ್ತು. ಆ ಬಾಗಿಲನ್ನು ದಾಟಿ ಹೋಗಿತ್ತು. ಆ ಬಾಗಿಲ ಹೊರಗಡೆ ಇರುವ ವಿಶಾಲ ವಿಶ್ವದ ಕಡೆ ತಿರುಗಿತ್ತು.

"ಹೊನ್ನಿಗೆ ಆಸೆಪಡುವುದಿಲ್ಲವೇ? ಹೌದು; ನನ್ನಂತೆ ಧನದಾಸರಾಗದ ನೀವೆಲ್ಲ ಹೊರಗೆ ..... ಸ್ವತಂತ್ರರು! ನಾನು ಮಾತ್ರ ..... ..... ಛೀ! ಛೀ! ಧನರಾಶಿಯನ್ನು ಉಪಯೋಗಿಸದೆ, ಬಂಧನಗೊಳಿಸಿದ ನಾನು .... .... ಸೆರೆ ಮನೆಯೊಳಗೆ ಸಿರಿಯೊಂದಿಗೆ ನಾನೂ ಪಾರತಂತ್ರ್ಯದ ಬಲೆಯಲ್ಲಿ! ನನ್ನನ್ನು ಈ ಬಂಧನದಿಂದ ಬಿಡಿಸಿ; ನಾನು ನಿಮ್ಮವನಾಗುತ್ತೇನೆ; ವಿನೀತನಾಗು ತ್ತೇನೆ; ವಿವೇಕಿಯಾಗುತ್ತೇನೆ. ಹೊನ್ನು ಬೇಡವೇ? ಬೇಡದಿದ್ದರೆ ಬಿಡಿ ದಯೆಗಾಗಿ ಬಾಗಿಲು ತೆಗೆಯಿರಿ."

ಪೀಟರನು ಆರ್ತನಾದದಿಂದ ಅಂಗಲಾಚಿದನು. ಆದರೂ ಪ್ರತ್ಯುತ್ತರವಿಲ್ಲ.

"ಸಾಯುತ್ತಿದ್ದೇನೆ; ಉಸಿರು ಕಟ್ಟುತ್ತಿದೆ. ಬಾಗಿಲು ...... ಬಾಗಿಲು...... ಬಾಗಿಲು. ದೇವರ ಹೆಸರಿನಲ್ಲಿ ಬಾಗಿಲು ತೆಗೆಯಿರಿ ...... ...... ..... ದಯೆಯ ಅಂಕಿತದಲ್ಲಿ ಬಾಗಿಲು ತೆಗೆಯಿರಿ. ನಾನು **ಪಶ್ಚಾತ್ತಾಪ**ಗೊಂಡಿರುವೆ. ನನಗೆ ತಕ್ಕ ಪ್ರಾ..... ಯ... ಶ್ಚಿ.... ತ್ತವಾಯಿತು. ಮರುಕದಿಂದ ಬಾಗಿಲು ತೆಗೆಯಿರಿ.

ನಾನು ಅಮಾನುಷನಾಗಿ ವರ್ತಿಸಿರಬಹುದು. ಆದರೆ ನೀವೆಲ್ಲ ಮಾನವರೇ ಅಲ್ಲವೆ? ನನ್ನಂತೆ ನೀವಾಗದಿರಿ. ನಿಮ್ಮಂತೆ ನಾನಾಗ ಬಯಸುತ್ತಿದ್ದೇನೆ."

ಅವನ ಆ ದೈನ್ಯವಾದ ಕೂಗುವಿಕೆಗೆ ಹೊರಗಿನಿಂದ ಯಾವ ಪ್ರತಿಕ್ರಿಯೆಯೂ ಇಲ್ಲ. ಆ ನೀರವ ನಿಶಿರಾತ್ರಿಯಲ್ಲಿ, ಅವನ ಕೂಗು ನೀರಸವಾಯಿತು. ನಿರ್ಬಂಧಕ್ಕೊಳಗಾದ ಪೀಟರನು ಮತ್ತೆ ಮತ್ತೆ ಅರಚಿದನು. "ಈ ನಿರ್ಮಾನುಷ ನೆಲಮಾಳಿಗೆಯಿಂದ ..... ...... ಈ ನಿರ್ಜೀವ ನಶ್ವರಧನದ ಕಪಿಮುಷ್ಟಿಯಿಂದ ನನ್ನನ್ನು ಬಿಡುಗಡೆ ಹೊಂದಿಸುವ ದಯಾವಂತರು ಯಾರೂ ಇಲ್ಲವೆ? ನಿರ್ದಯನಾದ ನನ್ನ ಎಲ್ಲ ತಪ್ಪುಗಳನ್ನೂ ಉದಾರತೆಯಿಂದ ಮನ್ನಿಸಿ ಉಸಿರೊಂದಿಗೆ ನನ್ನನ್ನು ಕಾಪಾಡುವ ದಯಾವಂತರು ಯಾರೂ ಇಲ್ಲವೆ ? "

ಪೀಟರನು ಇನ್ನೂ ಹಲವಾರು ಬಗೆಯಲ್ಲಿ ಹಂಬಲಿಸಿದನು. ತನ್ನನ್ನೂ ಮಿಂಚಿ ಕ್ಷಣಮಾತ್ರದಲ್ಲಿ ನಿರ್ಬಲನಾದ ಪ್ರಯುಕ್ತ ನಿರ್ಮಾಯನಾದ, ನಿರ್ಲೋಭಿಯಾದುದರಿಂದ ನಿರ್ಧನನಾದ, ನಿರಾಶೆಯಿಂದ ತುಂಬಿದ ಪೀಟರನು — ಅಂದಿನ .... ಆ ಕ್ಷಣದವರೆಗಿನ ತನ್ನ ನಿಧಾನ ವಿಧಾನಗಳನ್ನೆಲ್ಲ ತುಳಿದು, ನೂತನ ಧ್ಯೇಯಗಳನ್ನು ತಾಳಿದ ವಿರಕ್ತ ಪೀಟರನು, "ನನ್ನನ್ನು ನಿರ್ಬಂಧದಿಂದ ವಿಮೋಚನೆಗೊಳಿಸಿದವರಿಗೆ ನನ್ನೆಲ್ಲ ನಿಕ್ಷೇಪವನ್ನೂ ನಿಮಿಷಮಾತ್ರದಲ್ಲಿ ನಿವೇದನ ಮಾಡಿ ಕೃತಕೃತ್ಯನಾಗಲು ಕಂಕಣಬದ್ಧನಾಗಿದ್ದೇನೆ" ಎಂದು ಸಾರಿದನು.

ಆದರೆ ವಿಧಿ! ಅದು ಬೆನ್ನಬಿಡದು. ಅವನು ಅರಚಿದಂತೆಲ್ಲ ನೆಲಮಾಳಿಗೆಯು ಪ್ರತಿಧ್ವನಿಸ್ಯೈದ ಪರಿಹಾಸ್ಯಮಾಡಿತು. ಪೀಟರನಿಗೆ ಉಸಿರು ಕಟ್ಟಿದಂತೆಲ್ಲ ಆಶೆಯು ನಶಿಸುತ್ತ ಬಂದಿತು. ಅವನಿಗೆ ಹೆದರಿಕೆಯಾಯಿತು. ಮೆಲ್ಲಮೆಲ್ಲನೆ ಅವನು ಏಣಿಯಲ್ಲಿ ಕೆಳಗಿಳಿದನು. ಆ ಕಗ್ಗತ್ತಲಲ್ಲಿ ಅವನಿಗೆ ಕಣ್ಣು ಕಾಣಿಸಲಿಲ್ಲ.

ಯಾವ ಧನರಾಶಿಯನ್ನು ಒಟ್ಟುಗೂಡಿಸಿ ಎಪ್ಪತ್ತು ಚೀಲಗಳಲ್ಲಿ ತುಂಬ

ಮೊಹರುಮಾಡಿ, ಮುತ್ತಿಟ್ಟು, ಆದರದಿಂದ ಹೆಗಲಮೇಲೆ ಹೊತ್ತು, ನೆಲ ಮಾಳಿಗೆಯೊಳಗಿರಿಸಿ ಭದ್ರಪಡಿಸುವ ಉದ್ಯಮದಲ್ಲಿ ಅವನು ಯಾವಜ್ಜೀವವೂ ಬಡವರನ್ನೂ, ಭಾಗ್ಯವಂತರನ್ನೂ, ತನ್ನನ್ನೂ ತನ್ನ ಸೃಷ್ಟಿಕರ್ತನನ್ನೂ ವಂಚಿಸಿದ್ದನೋ, ಯಾವ ಧನವೇ ತನ್ನ ಸರ್ವಸ್ವವೆಂದೂ ಪ್ರಾಣಸಮಾನ ವೆಂದೂ ಭಾವಿಸಿ, ಅದರ ಶೇಖರಣೆಗಾಗಿ ತಾನು ಮಾಡುವ ಸಕಲ ತೆರನಾದ ಸಾಹಸಗಳೂ, ಅನುಭವಿಸುವ ಎಲ್ಲ ತೆರನಾದ ಕಷ್ಟನಷ್ಟ ನಿಷ್ಠೂರ—ಪರಳಾಟಗಳೂ ಅತ್ಯಲ್ಪವಾದುವೆಂದೆಣಿಸಿದ್ದನೋ — ಯಾವ ಧನಸಂಗ್ರಹಣದ ಉದ್ಯಮದಲ್ಲಿ — ಮಾನವರ ಮೇಲ್ಮೆಗೆ ಮೂಲಕಾರಣ ಗಳಾದ — ಪವಿತ್ರತಮವಾದ ಎಲ್ಲ ಸತ್ಯಯುತ ಧ್ಯೇಯಗಳನ್ನೂ ಅವನು ನಿರ್ದಾಕ್ಷಿಣ್ಯದಿಂದ ನಿರಾಕರಿಸಿ ಬಲಿಗೊಟ್ಟಿದ್ದನೋ — ಯಾವ ಧನದ ಅಂಕಿತದಲ್ಲಿ, ಕಟ್ಟಕಡೆಯದಾಗಿ, ಕಾಳರಾತ್ರಿಯಲ್ಲಿ, ಕಳ್ಳಕಾಕರರಿಗೂ ಹೆದರದೆ, ಹಣದ ಚೀಲಗಳನ್ನು ಹೊತ್ತು, ಕಿರುಹಣತೆಯನ್ನು ಹಿಡಿದು, ನೆಲ ಮಾಳಿಗೆಯ ಕಂಬಿಯ ಮೆಟ್ಟಲುಗಳಲ್ಲಿ, ಆ ಇಳಿವಯಸ್ಸಿನಲ್ಲಿ ನೂರಾರುಬಾರಿ ಹತ್ತಿ ಇಳಿಯುವುದನ್ನೂ ಪರಿಶ್ರಮವನ್ನಾಗಿ ಭಾವಿಸಿ ಇರಲಿಲ್ಲವೋ—ಯಾವ ಧನದ ರಕ್ಷಣೆಗಾಗಿ, ನಿಶಿರಾತ್ರಿಯಲ್ಲಿ, ಹುಳಹುಟ್ಟೆಗಳಿರುವ ಪೊದರಿನ ಮರೆಯಲ್ಲಿ ಅಡಗಿಯೂ, ಮುಳ್ಳುಗುಂಡಿಯಲ್ಲಿ ಬಿದ್ದು, ಕಾಲುಳಿಕಿ, ಮೈತರಚಿ ರಕ್ತ ಸೋರಿದರೂ, ಏಳು ದಿವಸಗಳು ಮೇಲೇಳಲಸದಳವಾದರೂ ಯಾರಲ್ಲಿಯೂ ಹೇಳಿಕೊಳ್ಳದೆ, ಕಿರುಮಾತನ್ನೂ ಆಡದೆ, ಮಾನಸಿಕಯಾತನೆ ಯೊಂದಿಗೆ ದೈಹಿಕ ಕಷ್ಟಗಳನ್ನೂ ಅತ್ಯಂತ ಶಾಂತತೆಯಿಂದ ಸಹಿಸಿದ್ದನೋ— ಯಾವ ಧನವನ್ನೇ ದೇವರೆಂದೆಣಿಸಿ, ಪೂಜಿಸಿ, ಪುರಸ್ಕರಿಸಿ, ಸಕಲಮಾನವ ಮತ್ತು ಪ್ರಾಣಿವರ್ಗದಿಂದ ದೂರನಾಗಿದ್ದನೋ — ಯಾವ ಧನವನ್ನು ಅಖಂಡ ಶ್ರಮದಿಂದ ಗಳಿಸಿ —ಅತ್ಯುಗ್ರ ಹಿಡಿತದಿಂದ ಉಳಿಸಿ, ಒಟ್ಟುಗೂಡಿಸಿ ಅದರ ಒಡೆಯನೆಂಬ ಹೆಮ್ಮೆಯನ್ನು ತೊರೆದು, ತಾನದರ ಕಿಂಕರನಾಗಿರಲು ಕಂಕಣತೊಟ್ಟು, ಅದಕ್ಕಾಗಿ ತನ್ನ ಊಟವನ್ನೂ, ನಿದ್ರೆಯನ್ನೂ, ಸುಖವನ್ನೂ ಶಾಂತಿಯನ್ನೂ ಅಸಮರೀತಿಯಲ್ಲಿ ಧಾರೆಯೆರೆದಿದ್ದನೋ — ಯಾವ ಧನದ ಮೇಲಣ ತೀವ್ರವಾದ ಮಮತೆಯಿಂದ, ಅತುಳವಾದ ಶ್ರದ್ಧೆಯಿಂದ, ಅದನ್ನು

ಸರಕಾರ ಮತ್ತು ಸಾರ್ವಜನಿಕರ ಮೇಲ್ವಿಚಾರಣೆಯಿಂದ ತಪ್ಪಿಸಬಯಸಿ, ಅತ್ಯಧಮ ವಂಚನೆಯನ್ನೂ ಅತಿ ನಿಕೃಷ್ಟವಾದ ಮೋಸದ ಮೆರವಣಿಗೆಯನ್ನೂ ಹೂಡಿ, ಮಾನವರಿಗೂ, ಮಹಾಮಹಿಮನಿಗೂ ಏಕಕಾಲದಲ್ಲಿ ದ್ರೋಹಿ ಯಾದನೋ — ಯಾವ ಧನದ ಸಂರಕ್ಷಣೆಗಾಗಿ, ತನ್ನದೇ ಆದ ಆ ನಿಧಿಯ ಥೈಲಿಗಳನ್ನು ಹಗಲಮೇಲೆ ಹೊತ್ತು ತರುವಾಗ ಹೆರವರ ದೃಷ್ಟಿಯಲ್ಲಿ ತಾನೊಬ್ಬ ಅಧಮನಾದ ಕಳ್ಳನಂತೆ, ರಹಸ್ಯದಿಂದ ವರ್ತಿಸಬೇಕಾಯಿತೋ —ಒಟ್ಟಿನಲ್ಲಿ, ಯಾವ ಧನದ ಸಂಗ್ರಹಕಾಲದಲ್ಲಿ, ಸಂರಕ್ಷಣೆಯ ಕ್ರಮಗಳಲ್ಲಿ ತಾನು ಮಾನವೀನ್ಯಾಯಗಳನ್ನು ಅಲ್ಲಗಳೆದು, ಸತ್ಯವನ್ನು ನೆಲಕ್ಕೆ ತುಳಿದು, ಧರ್ಮವನ್ನು ಚೆಲ್ಲಾಡಿ, ಮೃಗಸಮಾನನಾಗಿ ವರ್ತಿಸಿ ಪರಿಪರಿಯಾಗಿ ಪರಿತಪಿಸುವಂತಾಯಿತೋ — ಅಂತಹ ಧನ! ಅನನ್ಯ ಅವಿವೇಕದಿಂದ ಪಾಪಪರಿವೃತವಾದ ಆ ನಶ್ವರ ಧನ! ... ಅದರ ಮೇಲಿನ ವ್ಯಾಮೋಹವು ಇಂದು ಪೈಶಾಚಿಕ ಸ್ವರೂಪವನ್ನು ತಾಳಿ, ತನ್ನ ಊಟವನ್ನೂ ಮರೆಯು ವಂತೆಮಾಡಿ, ಮತಿಗೆ ಮಂಕುಬೂದಿಯನ್ನು ಚೆಲ್ಲಿ, ಬೀಗದ ಕೈಯನ್ನು ಮೇಲೆಯೇ ಬಿಟ್ಟುಬರುವಂತೆ ಕುಟಿಲತೆಯನ್ನು ವಿರಚಿಸಿ, ನಿಧಿಸಮೂಹದ ಸಮ್ಮುಖದಲ್ಲಿ ನಿರ್ಬಂಧಕ್ಕೊಳಗಾಗಿ, ಕತ್ತಲಕಾರಾಗಾರದಲ್ಲಿ, ಕರಾಳ ಮೃತ್ಯುವಿನ ಕೋರೆದಾಡೆಗಳಲ್ಲಿ ಸಿಲುಕಿ, ತತ್ತಳಿಸಿ, ತಾರುಮಾರಾಗು ವಂತಾಗಿಸಿ, ಮಾನವ ದೇಹಧಾರಣೆಗೆ ಅತ್ಯವಶ್ಯಕವಾದ ನೀರು ಗಾಳಿಗಳೂ ಇಲ್ಲದಂತೆ ಮಾಡಿದುದೂ ಸಾಲದೆ, ಮಾನವ ಇತಿಹಾಸದಲ್ಲಿ ತನ್ನ ಹೆಸರಿಗೆ ಕಪ್ಪುಹಚ್ಚಿ, ನಿರಂತರ ನಿಂದೆಗೆ ಗುರಿಯಾಗುವಂತೆ ಹಂಚಿಕೆಯನ್ನು ಹೂಡಿ ಹಾಸ್ಯಮಾಡುತ್ತಿತ್ತೋ, ಆ ಧನದಾಹ! ಧನಪಿಶಾಚಿ! ದ್ರೋಹದ ಕಗ್ಗಂಟು! ಕ್ರಮವಿರುದ್ಧವಾದುದರಿಂದ ಮಾನವಹಿತಕ್ಕೆ ನೂರಾರು ರೀತಿಯಲ್ಲಿ ಶತ್ರು ಸ್ವರೂಪವಾದ, ಮೋಹಕರುಮಾಡಿದ ಆ ಹೊನ್ನಿನ ಚೀಲಗಳು ಮತ್ತೆ ಏಣಿಯಿಂದ ಕೆಳಗಿಳಿದ ಪೀಟರನ ಕಾಕಿಗೆ ತಗುಲಿದುವು.

ಪೀಟರನಿಗೆ ರೇಗಿಹೋಯಿತು. ತನ್ನ ಕಾಲಿಗೆ ತಗುಲಿದ ಆ ನಿಧಿ ಸಮೂಹವನ್ನು ಕಂಡು ಅವನ ಸಹನೆಯು ನಶಿಸಿಹೋಯಿತು. ಆ ನಿಶಿ ರಾತ್ರಿಯಲ್ಲಿ, ಆ ಕಗ್ಗತ್ತಲ ಕಾರಾಗಾರದಲ್ಲಿ ತಾನು ಬಂಧಿತನಾದದ್ದು

ಅವನಿಗರಿವಾಯಿತು. ಅಂತ್ಯದಲ್ಲಿ ತನ್ನ, ಅಳವಿಲ್ಲದ ಆ ದುಃಖಕ್ಕೆ—ಆ ಪರಿಯ ದುರಂತ ಮರಣಕ್ಕೆ ಕಾರಣವು—ತಾನು ಅಷ್ಟೊಂದು ಶ್ರಷ್ಠೆಯಿಂದ ಶೇಖರಿಸಿ ಸಂರಕ್ಷಿಸಿದ ಧನವೇ ಎಂದು ಅವನು ಮನಗಂಡನು. ತಾನಳಿದ ಮೇಲೂ ಆ ಧನವು ಉಳಿದೀತೆಂದೂ, ಪರರ ಪಾಲಾದೀತೆಂದೂ, ಅವನಿಗೆ ಭಾಸವಾಯಿತು. ತನ್ನ ಭಾಗಕ್ಕೆ ನಶ್ವರವಾದ ಆ ಧನಮೇತ್ತವನ್ನು ಕಂಡು ಹೀಟರನಿಗೆ ಅಪಾರರೆಗೆ ಅದರ ಮೇಲಿದ್ದ ಮೋಹನೆಲ್ಲವೂ ಮತ್ಸರವಾಗಿ ಪರಿಣಮಿಸಿತು. ಅವನ ತಾಳ್ಮೆಗೆ ಎಲ್ಲೆಯು ಮಿಂಚಿತು. ಯಾವ ಧನಕ್ಕೆ ಆ ಕ್ಷಣದವರೆಗೆ ಅವನು ದಾಸನಾಗಿ ಹೋಗಿದ್ದನೋ ಆ ಜಡ ವಸ್ತುವನ್ನು ಕಂಡು ಅವನಿಗೆ ಅಳವಿಲ್ಲದ ಕ್ರೋಧವುಂಟಾಯಿತು. ಆ ಎಪ್ಪತ್ತು ಚೀಲಗಳು ಅಲ್ಲೇ ಇದ್ದರೂ, ಆ ಕತ್ತಲಲ್ಲಿ ಅದನ್ನವನು ಮುಟ್ಟಿನೋಡಬಹುದಾಗಿದ್ದರೂ, ಕಣ್ಣು ತುಂಬ ನೋಡಿ ಆನಂದಿಸುವಂತಿರಲಿಲ್ಲ. ಅವನಿಗೂ ಅವನ ಹೊನ್ನಿನ ರಾಶಿಗೂ ಅಂದಿನವರೆಗಿದ್ದ ಆ ಋಣ ...... ಅದು ತೀರಿತು. ಆದುದರಿಂದಲೇ ಅದರ ಮೇಲಣ ಅವನ ಹಂಬಲವೂ ಹರಿದುಹೋಯಿತು! ಆಗ ಆ ಧನರಾಶಿಯನ್ನು ಕುರಿತು ಅವನೆಂದ:

"ಧನ ನೀನು ನಶ್ವರ; ನೀನು ಪಾಪಿಷ್ಠೆ; ಕಡು ದುಷ್ಟೆ; ನೀನು ಕುಹಕಿ; ಕುತ್ಸಿತೆ; ಕುಪಿತೆ; ಕುಲಗೇಡಿ! ಧನ! ನೀನು ಚಪಲೆ, ಚಂಡಿ, ಚಾಂಡಾಳಿ! ನೀನು ಕಪಟೆ; ಕಂಟಕಿ; ಕಲಹಾರ್ಥಿ! ಧನ! ನೀನು ವಂಚಕಿ; ಘಾತುಕಿ! ಧನ! ನೀನು ವಿಷಮೆ; ವಿಫಲೆ; ವಿಪರೀತೆ! ಧನ! ನೀನು ತಸ್ಕರೆ; ತಾಮಸಿ! ತೊಲಗು, ತೊಲಗು ಕಪಟಿ! ನಿನ್ನನ್ನು ಈ ಕಣ್ಣುಗಳಿಂದ ನಾನಿನ್ನು ನೋಡಲಾರೆ.

"ನೋಡಲಾರೆ; ಏತಕ್ಕೆ?"

"ಯಾರು ಈ ಮಾತನ್ನಾಡಿದವರು? ......... ಹೌದು; ಅಂತರಂಗದ ವಾಣಿ! ಆಗಲಿ.....ಧನ! ನನ್ನ ಹೆಗಲನೇರಿ ಬಂದ ನೀನು ಅಟ್ಟಹಾಸದಿಂದ ಇಟ್ಟೆಡೆಯಿಂದ ಸ್ವಲ್ಪವೂ ಕದಲದೆ ನನ್ನ ಈ ದುರಂತ ದುರ್ಮರಣಕ್ಕೆ ಸಾಕ್ಷಿಯಾದೆಯಲ್ಲವೆ? ಅಚೇತನವೆ! ಅಪಸ್ಮಾರವೆ! ನೀನಾಯಿತು .....

ನಿನ್ನ ಪ್ರಭಾವವಾಯಿತು ! ”

“ ಸಾಕು ; ಮೂಢ ! ಧನವನ್ನು ಶಪಿಸುವೆಯೇತಕ್ಕೆ ? ”

“ ಯಾರು ? .... ಯಾರು ಈ ಸಲ ಎಚ್ಚರಿಸಿದ್ದು ? .... ಅರಿತೆ ... ನನ್ನ ಅಂತರಾತ್ಮ ! ಅದು ಅನಂತವೇಗದಿಂದ ಎಚ್ಚೆತ್ತುಕೊಂಡಿದೆ. ಜೀವ ಜ್ಯೋತಿಯಿಂದ ಪ್ರಕಾಶಿಸುತ್ತಿದೆ ! ”

ಆಶ್ಚರ್ಯ! ಆಶ್ಚರ್ಯ ! ಐನತ್ತು ವರ್ಷಗಳಿಂದ ಅವನ ಹೃದಯದ ಅಂತರಾಳದಲ್ಲಿ ಅಡಗಿ ಕುಳಿತಿದ್ದ ಅವನ ಅಂತರಾತ್ಮ ! ಅದು ಇಂದು ಈ ಕ್ಷಣದಲ್ಲಿ ಎಚ್ಚೆತ್ತುಕೊಂಡಿದೆ. ಬಾಳ ಹಾದಿಯಲ್ಲಿ ಅಂದಿನವರೆಗೆ ಅವನೆತ್ತಿಟ್ಟ ತಪ್ಪು ಹೆಜ್ಜೆಗಳನ್ನು ತೋರಿಸಿಕೊಡುತ್ತಿದೆ. ಬೇರೊಂದು ನಿರ್ಮಲವಾದ, ನಿರ್ವಿಕಲ್ಪವಾದ, ನಿರ್ಮಾಯವಾದ, ಅತಿಶಯಾನಂದ ರಾಜಮಾರ್ಗದಲ್ಲಿ ಅವನನ್ನು ಎಳೆದೊಯ್ಯುತ್ತಿದೆ. ಅವನ ಕೊನೆಯ ಕ್ಷಣಗಳಿವು. ಅವನು ಗ್ರಹಿಸಿದ .... ಹಿಂದೆಂದೂ ಗ್ರಹಿಸಿದಂತೆ ಇಂದು ಸ್ಪಷ್ಟವಾಗಿ ಗ್ರಹಿಸಿದ :

“ ಧನ ! ಧನದೇವತೆ ! ಮನ್ನಿಸು. ನಿನ್ನನ್ನು ಅಹರ್ನಿಶಿ ಅರಸಿದವನು ನಾನು ; ಅರಸಿ, ವಶಪಡಿಸಿಕೊಂಡು ಉಸಿರಾಡದ ಕತ್ತಲ ಕೋಣೆಯಲ್ಲಿ ಸೆರೆಯಾಗಿರಿಸಿದವನು—ನಿನ್ನ ಅಮಿತಾನಂದಕರ, ಅತ್ಯುಪಯುಕ್ತ ಸೇವೆಯನ್ನು ಜನತೆಗೆ ತಪ್ಪಿಸಿದ ಪರಮ ಪಾಪಿ ನಾನು ! ಕಣ್ಣು ಕಾಣದೆ, ಕನಿಕರವನ್ನು ಬದಿಗೊತ್ತಿ, ಕಠಿನಮನಸ್ಕನಾಗಿ ಕಾರ್ಪಣ್ಯವನ್ನು ಹಿಡಿದಪ್ಪಿ, ಹಿಗ್ಗಿ ಹಾಳಾದವನು ನಾನು ; ದುರಾಚಾರಿ ನಾನು ; ದುರ್ಮದಾಂಧನು ನಾನು ; ದೀನದಲಿತರ ದುಸ್ಸಹ ಯಾತನೆಗಳಿಗೆ ಕಾರಣನು ನಾನು ; ನಿರ್ದೋಷಿಗಳ ಕೊಲೆಗೆಳಸಿ ಇಹಪರಗಳೆರಡನ್ನೂ ಕಳೆದುಕೊಂಡ ಕಡುಪಾಪಿ ನಾನು ; ಸರರಲ್ಲಿ ನಯವಾಗಿ, ನ್ಯಾಯವಾಗಿ ಬಾಳಲರಿಯದ ನೀಚನು ನಾನು ; ಚೈತನ್ಯವಿದ್ದರೂ ಅಚೇತನನಾದವನು ನಾನು ; ಧನವನ್ನು ದುರುಪಯೋಗ ಪಡಿಸಿ ದೈವಕ್ಕೂ ದೇಶಕ್ಕೂ ದ್ರೋಹವನ್ನೆಸಗಿದವನು ನಾನೇ! ಧನ! ನೀನು ವಿಶ್ವವ್ಯಾಪ್ತೆ ! ನಿನ್ನದು ವಿಶ್ವಸಂತಾನ ! ನೀನು ವಿಶ್ವೇಶ್ವರನ ಅಚ್ಚುಮೆಚ್ಚಿನ ನಾಯಕಿ. ನಿನ್ನನ್ನು ಹಿಡಿದು ಬಂಧಿಸಿಡುವುದು ಮೂಢತನ !

"ಧನ! ನೀನಲ್ಲ ನಶ್ವರ! ನೀನು ಅನಂತಕಾಲದವರೆಗೂ ಅನಂತ ಸೇವೆಯಿಂದ ಅನಂತ ಜ್ಯೋತಿಯಿಂದ ಬೆಳಗಬಲ್ಲ ವಿಶ್ವಬಂಧು! ವಿಶ್ವಮಾತೆ! ನನ್ನಂತಹ ನರರು ನಶ್ವರರು! ನಿನ್ನನ್ನು ರಕ್ತಕಲುಷಿತವನ್ನಾಗಿ, ಶೋಕ ಪರಿವೃತವನ್ನಾಗಿ, ಆತ್ಮನಾಶಕವನ್ನಾಗಿ, ಮಾನಾಪಹಾರಕವಾಗಿ ಪರಿಗಣಿಸಿ ದವರುಂಟೇ? ಮಾನವಗಣಕ್ಕೆ ನಿನ್ನ ಅನಂತವಾದ ಸೇವೆಯು ಸ್ವೇಚ್ಛೆಯಾಗಿ ಸಿಲುಕದಂತೆ ತಡೆದು ನಿನ್ನನ್ನು ಅಪಸರವಸರವಾಗಿ ಅಪವಾದಕ್ಕೆ ಗುರಿಮಾಡಿ ದವರು ನನ್ನಂತಹ ನೀಚರು! ದುರಾತ್ಮರು! ಮನ್ನಿಸು ತಾಯೇ! ಇದು ನನ್ನ ಅಂತರಾತ್ಮನಿಂದ ಪ್ರೇರಿತವಾದ ಅಮರವಾಣಿ! ಧನ! ನೊಂದವರು ನಿನ್ನನ್ನು ನಿಂದಿಸಿಯಾರು! ಆದರೆ ನೀನು ಅಮೃತಸದೃಶಳು! ಅಮೃತವನ್ನು ಅಮೃತವಾಗಿಯೇ ಪಳಗಿಸಲು ತಿಳಿಯದವರು ನಿನ್ನನ್ನು ನಿಂದಿಸಿಯಾರು. ಅದರೊಂದಿಗೆ ಪಾಷಾಣವನ್ನು ಬೆರೆಸಿ ಅಮೃತವು ಕಹಿ ಎಂದಾರು! ಆಶ್ರಯಿಸಿ ದವರಿಗೆ ಆನಂದದಿಂದ ಒಡೆತನವನ್ನು ಕೊಟ್ಟು ಉದ್ಧರಿಸುವ ಮಹಾಮಾತೆ ನೀನು! ನೀನು ಕುಟಿಲೆಯಲ್ಲ ... ಕೋಮಲೆ! ಮರ್ಮಿಯಲ್ಲ...... ಮಂದ ಹಾಸೆ! ಮಧುರ ಚಿತ್ತೆ! ಪಿಶಾಚಿಯಲ್ಲ ..... ಪರಮ ಪಾವನೆ!

"ಧನ ದೇವತೆ! ನನ್ನಂತೆ ಜನರು ನಿನ್ನನ್ನು ನಿಂದೆಗೆ ಗುರಿಮಾಡದಿರಲಿ; ನಿನ್ನ ದಿವ್ಯಾನುಗ್ರಹವನ್ನು ಪಡೆದವರು ನಿನ್ನ ಆರಾಧಕರಾಗಿರಲಿ; ಆದರೆ ನನ್ನಂತೆ ಅವಿವೇಕದಿಂದ ಅಜ್ಞಾನಭರಿತ ಮಾಯಾಂಧಕಾರದಲ್ಲಿ ಬಿದ್ದು ನರಳದಿರಲಿ; ಕ್ರಮಪರಿತ ನಿನ್ನ ಸೇವೆಯನ್ನು ಮರೆತು ಮಾನವರು ದೆವ್ವಗಳ ದಾಸರಾಗದಿರಲಿ; ಸಹಜೀವಿಗಳ – ಸೃಷ್ಟಿಕರ್ತನ–ದ್ರೋಹಿಗಳಾಗದಿರಲಿ..... ಧನ! ನಿನ್ನ ಸದುಪಯೋಗವನ್ನು ಕಂಡುಕೊಳ್ಳದೆ ಮಾನವರು ನನ್ನಂತೆ ಜಡರಾಗದಿರಲಿ; ನೀಚರಾಗದಿರಲಿ; ಮೂರ್ಖರಾಗದಿರಲಿ; ದುರಾಚಾರಿ ಗಳಾಗದಿರಲಿ; ಕೃತಘ್ನರಾಗದಿರಲಿ; ಸಮಾಜಕಂಟಕರಾಗದಿರಲಿ; ಧನ! ನಿನ್ನ ಮೇಲಣ ಅತಿಶಯದ ಹಂಬಲದಿಂದ ಮಾನವರು ಅಡ್ಡಹಾದಿಯನ್ನು ಹಿಡಿದು ಗುಡ್ಡೆ ಗುಡ್ಡೆಯಾಗಿ ನಿನ್ನನ್ನು ಗುಳಿಗೆ ತಳ್ಳಿ ಮಣ್ಣು ಮುಚ್ಚಿ ಮೋಸ ಹೋಗದಿರಲಿ; ಬಹುಭಕ್ಷಕರಾಗದಿರಲಿ; ಧನ! ತಿಳಿಗೇಡಿ ಮಾನವರು ನಿನ್ನನ್ನು ಅನ್ಯಾಯ -- ಅಧರ್ಮ– ಅಶ್ಲೀಲ — ಅನುಚಿತ ಕಾರ್ಯಗಳಿಗೆ

ಷಣವನ್ನಾಗಿ ಒಡ್ಡಿ ಸೃಷ್ಟಿಯಲ್ಲಿ ನಿನಗುಳ್ಳ ಸ್ಥಾನಮಾನಗಳನ್ನು ಚೆಲ್ಲಾಡದಿರಲಿ; ತಾಯಿ! ನಿನ್ನ ಅಂಕಿತದಲ್ಲಿ ದುಷ್ಟತನವನ್ನು ಆಚರಿಸಿ ಜನರು ದುಃಖಿತರಾಗದಿರಲಿ; ನನ್ನಂತೆ ಸ್ವಾರ್ಥಾಭಿಲಾಷಿಗಳಾಗಿ ಮಾನವರು ನಿನ್ನ ಮೇಲಣ ಅತುಳ ವ್ಯಾಮೋಹದಿಂದ ವಿವೇಕಶೂನ್ಯರಾಗದಿರಲಿ; ವ್ಯಸನಾಕ್ರಾಂತರಾಗದಿರಲಿ; ವಿಶ್ವಾಸ ಘಾತುಕರಾಗದಿರಲಿ; ವಿಶ್ವದ್ರೋಹಿಗಳಾಗದಿರಲಿ; ವಿಶ್ವೇಶ್ವರನ ಕರುಣೆಯನ್ನು ಕಳೆದುಕೊಂಡು ನನ್ನಂತೆ ಇಂತಹ ಕತ್ತಲಕಾರಾಗಾರದಲ್ಲಿ ಸಿಲುಕಿಬಿದ್ದು, ನೊಂದು, ಬೆಂದು, ನರಳಿ ನಾಶವಾಗದಿರಲಮ್ಮಾ!

"ಮತ್ತೊಮ್ಮೆ ನನ್ನನ್ನು ಮನ್ನಿಸು ಧನ ಮಹಾದೇವಿ! ನನ್ನ ಅನಂತ ಅಪರಾಧಗಳನ್ನು ಮನ್ನಿಸು ಮಹಾಮಾತೆ! ನಾನು ಸಂತೋಷದಿಂದ ನಿನ್ನನ್ನು ಬಿಟ್ಟು ನಿರಂತರವಾಗಿ ಅಗಲುತ್ತೇನೆ. ಆವರೆ.... ಏನೆಂಪೆಯಮ್ಮಾ? 'ಸೆರೆಮನೆ!' ಇಲ್ಲ; ಬಳಲದಿರು. ನಾಳೆ.....ನಾಳೆಯೇ ಬಂದಾರು. ಯಾರಾದರೂ ಬಂದಾರು! ನಿನ್ನನ್ನು ಬಂಧನದಿಂದ ಬಿಡಿಸಿಯಾರು? ಮತ್ತೆ ಏನೆಂಪೆಯಮ್ಮಾ? 'ಕುತ್ತಿಗೆ ಬಿಗಿದಿದೆ... ... ಉಸಿರಾಡದು ಎಂದೆಯಾ?' ಬಲ್ಲೆ! ನಿನ್ನ ಕೊರಳಿಗೆ ಉರುಳನ್ನು ಬಿಗಿದ ಮಹಾಪಾಪಿ ನಾನು! ಚಿಂತಿಸದಿರು ದೇವಮಾತೆ! ಇದೋ..........ನಿನಗಾಗಿ ನನ್ನ ಕೊನೆಯುಸಿರು ಮೀಸಲಾಗಿದೆ! ನಾಳೆ ನೀನು ಬಂಧನದಿಂದ ಬಿಡುಗಡೆ ಹೊಂದುವೆ ತಾಯಿ! ಈ ಗುಂಡಿಯಿಂದ ನಿನ್ನನ್ನು ಮೇಲೆತ್ತಿಯಾರು! ನಿನ್ನ ಕೊರಳ ಉರುಳನ್ನು ಹರಿದು ಚೆಲ್ಲಿಯಾರು! ಹರಸಿ ನಾನಾಕಡೆ ನಾನಾಮುಖವಾಗಿ ಹರಡಿಯಾರು. ಸ್ವೇಚ್ಛೆಯಾಗಿ ಸಂಚರಿಸುವಿಯಂತೆ! ಸಂತಸದಿಂದ ನಲಿಯುವಿಯಂತೆ! ನಾಲೆಗಳಲ್ಲಿ ನೀರನ್ನು ಹರಿಸಿ ನಾಡ ನಚ್ಚಿನ ನಲ್ಮೆಯನ್ನು ಸಾಧಿಸುವಿಯಂತೆ! ಬೆಟ್ಟಗುಡ್ಡಗಳ ಬಂಡೆಗಳನ್ನು ಕುಟ್ಟಿ ಕೆಡವಿ ಕೋಟೆ-ಕಟ್ಟಡಗಳನ್ನು ಕಟ್ಟಿಸುವಿಯಂತೆ! ತೊಲೆಗಳನ್ನು ಕಡಿಸಿ, ಕಬ್ಬಿಣವನ್ನು ಹೊರತೆಗೆದು ಎರಕ ಹುಯ್ಯಿಸಿ, ಹಡಗುಗಳನ್ನು ಕಟ್ಟಿಸುವಿಯಂತೆ! ನೊಂದು ನರಳುವ ನಾಡ ನೆಂಟರಿಗೆ ಅಮೃತಸಂಜೀವಿನಿಯನ್ನು ನೀಡುವ ಹಿರಿಯ ಚಿಕಿತ್ಸಾಲಯದಂತೆ ರಾಷ್ಟ್ರದಾದ್ಯಂತ ಜನಜೀವನವನ್ನು ನೂತನ ತೆರನೆ ರೂಪುಗೊಳಿಸುವಿಯಂತೆ! ಜ್ಞಾನಭಂಡಾರಗಳ ಅಧಿಷ್ಠಾನ ದೇವತೆಯಾಗುವಿಯಂತೆ! ಗೋಧನವನ್ನು

ಪೆಚ್ಚಿಸುವಿಯಂತೆ! ಅಮ್ಮ! ನೀನು ಪ್ರವಾಹವಾಗಿ ಹರಿದು ಕಂಡದ್ದನ್ನು ಕೊಚ್ಚಿಬಿಡದೆ, ಎಚ್ಚರಿಕೆಯಿಂದ ಎಲ್ಲೆಲ್ಲೂ ಹೊನ್ನಿನ ಹೊಳೆಯಾಗಿ ಹರಿಯಮ್ಮ! ಅವರಿವರೆನ್ನದೆ ನಾಡಿಗರೆಲ್ಲ ನಿನ್ನ ಅಮೃತಧಾರೆಯ ಪಾನದಿಂದ ಪುಷ್ಟರಾಗಲಿ: ಪವಿತ್ರರಾಗಲಿ; ಪರಮೇಶ್ವರನ ಪ್ರೀತಿಗೆ ಪಾತ್ರರಾಗಲಿ! ಹೋಗಿ ಬರುವೆನಮ್ಮ! ಇದೀಗ ನನ್ನ ಕಟ್ಟಕಡೆಯ ಹಾರೈಕೆ; ಹೃದಯಾಂತರಾಳದಿಂದ, ನಿರ್ಮಲ ಮನೋಭಾವದಿಂದ ನಾನು ಜಗತ್ತಿಗೆ ಸಾರುವ ಅಂತಿಮ ಸಂದೇಶ! ಅಮರ ನೀತಿ! ಮಾನವರೆಲ್ಲ ಹೊನ್ನಿನ ಮೇಲಣ ಅನುಚಿತ ಹಂಬಲದಿಂದ ನಿವೃತ್ತರಾಗಲಿ; ಧನದಾಸರಾಗದೆ, ಧನದ ದುರ್ವಿನಿಯೋಗ ಮಾಡದೆ, ಧನವನ್ನು ಸ್ವಾರ್ಥತೆಯಿಂದ ಬಂಧಿಸಿ ಇಡದೆ, ಅದು ಸರ್ವಜನೋಪಕಾರಿಯಾಗುವಂತೆ ಪಳಗಿಸಿ ಇಹಪರಗಳೆರಡನ್ನೂ ಸಾಧಿಸಿ ಕೃತಕೃತ್ಯರಾಗಲಿ"–ಎಂದು ಪೀಟರನು ಕಟ್ಟಕಡೆಯಲ್ಲಿ ಹಾರೈಸಿದನು.

ಧನವನ್ನು ಕುರಿತ ತನ್ನ ದುರ್ವರ್ತನೆಯನ್ನು ಅಂತ್ಯದಲ್ಲಿ ಕಂಡುಕೊಂಡ ಅವನು–ಅಂತರಾತ್ಮನ ಪ್ರೇರೇಪಣೆಯಿಂದ ನಿಮಿಷಾರ್ಧದಲ್ಲಿ ಎಚ್ಚರಗೊಂಡ ಅವನು—ತನ್ನ ಎಪ್ಪತ್ತು ವರ್ಷಗಳ ಪದ್ಧತಿಗಳನ್ನು ತಾನೇ ಅಖಂಡವಾಗಿ ಖಂಡಿಸಿ ಪಶ್ಚಾತ್ತಾಪಿಯಾದನು. ಪರಿಶುದ್ಧವಾದ ಮನಸ್ಸಿನಿಂದ ತನ್ನೆಲ್ಲ ತಪ್ಪುಗಳನ್ನೂ ಮನ್ನಿಸಿ ಕಾಪಾಡುವಂತೆ ಅವನು ಕರುಣಾಳು ಪರಮಾತ್ಮನಲ್ಲಿ ಪರಿಪರಿಯಾಗಿ ಮೊರೆಯಿಟ್ಟನು.

ಅವನಿಗೆ ಕ್ರಮಕ್ರಮವಾಗಿ ಉಸಿರು ಕಟ್ಟುತ್ತ ಬಂದಿತು. ಉತ್ಕ್ರಮಣ ಕಾಲವು ಸಮೀಪಿಸಿತು; ಅವನ ಸಂಕಟವು ಅಧಿಕರಿಸಿತು; ಯಾತನೆಯನ್ನು ಮತ್ತೆಷ್ಟು ಕಾಲವೂ ತಾಳಲಾರದೆ ತನ್ನ ಕಂಠವು ಬಿಗಿಯುತ್ತಿದ್ದಂತೆ ನಾ....ನು.... ಪ....ಶ್ಚಾ....ತ್ತಾ....ಪಿ! **ಮ....ನ್ನಿ....ಸಿ....ಸ....ಲ....ಹು ಪ....ರ....ಮಾ....ತ್ಮ!** ಎನ್ನುತ್ತ ಅವನು ಅಸುವಳಿದು ಕೆಳಗುರುಳಿದನು. ಅವನ ಶರೀರವನ್ನು ತೊರೆದು ಅವನ ಆತ್ಮವು ಜ್ಯೋತಿರ್ಮಯವಾಗಿ ಅನಂತ ಶಕ್ತಿಯಿಂದ ಉಕ್ಕಿನ ಕದವನ್ನು ಭೇದಿಸಿಕೊಂಡು ಅಂತರ್ಧಾನವಾಗಿ ಅನಂತಸಾಗರದಲ್ಲಿ ಲೀನವಾಗಿ ಹೋಯಿತು.

* * * *

## ಪ್ರಕರಣ ೨೧.

# ಆ ರಾತ್ರಿ

ಆ ರಾತ್ರಿ! ಆ ಕಾಳರಾತ್ರಿ! ಪೀಟರನ ಬಾಳನ್ನು ನೆಲ ಮಾಳಿಗೆಯೊಳಗೆ ಕೊನೆಗಾಣಿಸಿದ—ಅವನ ಪಾಪ ವಿ ಮೋ ಚ ನ ದ—ಅಖಂಡ ಪರಿವರ್ತನದ-ಆ ಮಹತ್ವದ ರಾತ್ರಿ! ತನ್ನೆದುರಿಗೇ ಇದ್ದರೂ ಅವನು ಆ ರಾತ್ರಿ ತನ್ನ ಊಟವನ್ನು ಮರೆತನು. ಅತುಳ ಶ್ರೀಮಂತನಾದ ಅವನು ಆ ಕೊನೆಯೂಟಕ್ಕೆ ಕೊಟ್ಟಿಟ್ಟಿರಲಿಲ್ಲ. ಹೆಚ್ಚೇಕೆ? ಅವನ ಅನ್ನ ಋಣವು ಅಲ್ಲಿಗೆ ಮುಗಿದಿತ್ತು! ಹೊನ್ನಿನ ಕೊನೆಯ ಚೀಲವನ್ನು ನೆಲಮಾಳಿಗೆಯೊಳಗೆ ಇರಿಸಿ ಬಂದು ಊಟಮಾಡುತ್ತೇನೆ ಎಂದು ಅವನಂದುಕೊಂಡಿದ್ದನು. ಆದರೆ ಅವನು ಹಿಂತಿರುಗಿ ಬಂದನೇ? ಬರಲಾಯಿತೇ? ಆ ಬಂಗಲೆಯ ಋಣವೂ ಅವನಿಗೆ ತೀರಿತ್ತು. ಹೊನ್ನನ್ನು ಹೊತ್ತು ಹೊರಟಾಗ ಅವನ ಕಾಲೆಡವಿತು; ಹಿಂತಿರುಗಿದನೇ? ಅದು ಅವನ ಕೊನೆಯ ನಡೆ! ಅವನಿಗೂ ತಿಳಿಯದೆ ಅವನು ರುದ್ರಭೂಮಿಯ ಕಡೆ ನಡೆದಿದ್ದನು.....ಮಾನವರಾದ ನಾವು ಇದರಿಂದ ಅರಿತುಕೊಳ್ಳಬೇಕಾದುದಾದರೂ ಇಷ್ಟೇ: ಬಾಳಲ್ಲಿ ನಾವು ಆಡುವ ಯಾವುದೇ ಮಾತು ಕಡೆಯ ಮಾತಾಗಿರಬಹುದು; ಮಾಡುವ ಯಾವುದೇ ಕೆಲಸವು ಕಡೆಯ ಕೆಲಸವಾಗಿರಬಹುದು; ಭುಜಿಸುವ ಯಾವುದೇ ಊಟವು ಕಡೆಯೂಟವಾಗಿರಬಹುದು; ನೋಡುವ ಯಾವುದೇ ನೋಟವು ಕಡೆಯ ನೋಟವಾಗಿರಬಹುದು; ನಡೆಯುವ ಯಾವುದೇ ನಡೆಯು ಕಡೆಯ ನಡೆಯಾಗರಬಹುದು; ಎಳೆಯುವ ಯಾವುದೇ ಉಸಿರು ಕೊನೆಯುಸಿರಾಗಿರಬಹುದು. ಅದುಪರಿಂದ ಬಾಳಲ್ಲಿ ಪ್ರತಿಕ್ಷಣದಲ್ಲಿ ಆಡುವುದು, ಮಾಡುವುದು, ನೋಡುವುದು, ನಡೆಯುವುದು ಎಲ್ಲ ಪರಿಶುದ್ಧವಾಗಿರಬೇಕು; ಪರಮಾತ್ಮನು ಒಪ್ಪುವಂತಿರಬೇಕು. ಕೊನೆಯುಸಿರು ಯಾವಾಗ ಹಾರಿಹೋಗುವುದೋ

ಹೇಳಲಾಗದು, ಅದಕ್ಕೆ ಮುನ್ನ ಮನಸಾ, ವಾಚಾ, ಕಾಯಾ ಎಲ್ಲ ವಿಚಾರಗಳೂ ನಿರ್ಮಲವಾಗಿರಬೇಕು. ಜಗತ್ತಿನ ವಿವಿಧ ಮತಗಳ ವೇದಾಂತ ತತ್ತ್ವದ ಹಿಂಡಿ ಹೀರಿದ ಸಾರವೇ ಇದು! ಬಾಳುವೆಯ ಹಿನ್ನೆಲೆ ಮುನ್ನೆಲೆಗಳೆಲ್ಲ ಈ ರಸಭರಿತ ತತ್ತ್ವದ ಗರ್ಭದಲ್ಲಿ ಅಡಗಿರುವುದು!

ಆ ರಾತ್ರಿ! ಅಂತಿಮ ರಾತ್ರಿ! ಎಂದಿನಂತೆ ತನ್ನ ನಾಯನ್ನು ಸಂಜೆಯಲ್ಲಿ ಬಿಚ್ಚಿಬಿಡಲು ಅವನು ಮರೆತಿದ್ದನು. ಅವನು ಆ ಕೊನೆಯ ಚೀಲವನ್ನು ತುಂಬಿ, ಮೊಹರು ಮಾಡಿ, ನೆಲಮಾಳಿಗೆಯಲ್ಲಿರಿಸುವ ಉದ್ಯಮದಲ್ಲಿ ಮಗ್ನನಾಗಿ ಹೋಗಿದ್ದನು. ಕೊನೆಗವನು ಆ ಮೂಗುಪ್ರಾಣಿಯನ್ನು ಬಿಚ್ಚಿಬಿಟ್ಟಾಗ ರಾತ್ರಿ ವಷ್ಟೋ ಹೊತ್ತಾಗಿಹೋಗಿದ್ದಿತು. ಆ ವೇಳೆಗೆ ಡೇನಿಯಲ್ಲನು ನಾಟಕ ನೋಡುವುದಕ್ಕೆಂದು ನಗರಕ್ಕೆ ಹೊರಟು ಹೋಗಿ ಎರಡು ಗಂಟೆಗಳ ಮೇಲಾಗಿತ್ತು.

ತನ್ನನ್ನು ಬಿಚ್ಚಿ ಬಿಟ್ಟ ಒಡನೆಯೇ 'ಉಲ್ಫ್' ಡೇನಿಯಲ್ಲನ ಕೊಠಡಿಯ ಕಡೆ ಓಡಿತು. ಆದರೆ ಅದರ ಬಾಗಿಲಿಗೆ ಬೀಗಹಾಕಿದೆ.......... ಬಾಗಿಲನ್ನು ಮೂಸಿನೋಡಿತು; ನೆಲವನ್ನು ಮೂಸಿನೋಡಿತು. ಅಲ್ಲಿಂದ ಬಂಗಲೆಗೆ ಓಡಿತು. ಬಂಗಲೆಯ ಬಾಗಿಲು ಮುಚ್ಚಿದೆ. ಮೇಜಿನ ಮೇಲೆ ಯಜಮಾನನಿಗಿರಿಸಿದ ಊಟವು ಘಮಘಮಿಸುತ್ತಿದೆ. ಆದರೆ ಆ ಊಟ...... ಆ ಊಟ ಅದಕ್ಕೆ ದೊರತೀತೆ? ನಾಯಿಯು ಮತ್ತೆ ಡೇನಿಯಲ್ಲನನ್ನು ಸುತ್ತ ಮುತ್ತ ಎಲ್ಲೆಲ್ಲಿಯೋ ಅರಸಿತು. ಅವನ ಸುಳಿವಿಲ್ಲ; ಬೊಗುಳಿತು; ದೀನವಾಗಿ ಬೊಗುಳಿತು. ಆದರೆ ಅದರ ಬೊಗುಳುವಿಕೆಯು ಯಾರ ಕಿವಿಯಲ್ಲಿ ಬೀಳಬೇಕು? ಅದಕ್ಕೆ ಹಸಿವು ಹೆಚ್ಚಿತು; ಏನು ಮಾಡೀತು? ಬಂಗಲೆಯ ಬಳಿ ಮತ್ತೆ ಓಡಿತು; ಯಜಮಾನನು ಅಲ್ಲಿರಲಿಲ್ಲ. ನೆಲವನ್ನು ಮೂಸಿ ನೋಡುತ್ತ ಆತುರದಿಂದ ನೆಲಮಾಳಿಗೆಯ ಕಡೆಗೆ ಓಡಿತು.

ದೂರದಲ್ಲಿ ಬರುತ್ತಿದ್ದ ತನ್ನ ನಾಯನ್ನು ನೋಡಿಯೂ ಅದು ಬೇರಾವುದೋ ಕ್ಷುದ್ರಮೃಗವಾಗಿರಬಹುದೆಂದು ಸೀಟರನು ಬೆದರಿದನು. ಬೀಗದ ಕೈಯನ್ನು ಬಾಗಿಲಲ್ಲೆ ಮರೆತು ಹಣದ ಚೀಲವನ್ನೂ, ಹಣತೆಯನ್ನೂ

ಹೊತ್ತು, ಕೆಳಗಿಳಿದು ' ಢಮಾರ್ ' ಎಂದು ಬಾಗಿಲನ್ನು ಮುಚ್ಚಿಕೊಂಡು ಬಿಟ್ಟಿದ್ದನು. ತನ್ನ ಯಜಮಾನನು ನೆಲಮಾಳಿಗೆಯೊಳಗಿಳಿದು ಬಾಗಿಲನ್ನು ಮುಚ್ಚಿಕೊಂಡುದುದನ್ನು ನಾಯಿಯು ಕಣ್ಣಾರೆ ಕಂಡಿದ್ದಿತು. ಅವನು ಹೊರಗೆ ಬಂದಾನು ; ಬಂಗಲೆಗೆ ನಡೆದಾನು; ತಿಂಡಿಯನ್ನು ತಿನ್ನಿಸಿಯಾನು ; ಎಂದು ಯೋಚಿಸಿ ಅದೇ ಬಾಗಿಲ ಬಳಿ ಒಂದೆರಡು ಗಂಟೆಗಳ ಕಾಲ ಕಾದಿದ್ದಿತು. ಆದರೆ ಅವನು ಹೊರಗೆ ಬರಲಿಲ್ಲ. ಅದು ಬಂಗಲೆಯ ಬಳಿ ಓಡಿತು; ಡೇನಿಯಲ್ಲನ ಕೊಠಡಿಗೆ ಬೀಗ ಹಾಕಿತ್ತು. ಬೊಗಳಿ ನೋಡಿತು ; ಪ್ರತ್ಯುತ್ತರವಿಲ್ಲ. ಮತ್ತೆ ನೆಲಮಾಳಿಗೆಯ ಬಳಿಗೇ ಬಂದಿತು. ಅಲ್ಲಿಯೂ ಅಷ್ಟೇ– ಹಾಕಿದ ಬಾಗಿಲು ಹಾಕಿದಂತೆಯೇ ಇದೆ. ಹಸಿವೊಂದೆಡೆ; ಯಜಮಾನನ್ನೂ ಡೇನಿಯಲ್ಲನನ್ನೂ ಕಾಣದ ಕಾತುರತೆ ಮತ್ತೊಂದೆಡೆ. ಮತ್ತೆ ನೆಲಮಾಳಿಗೆಯನ್ನು ಬಿಟ್ಟು ಬಂಗಲೆಗೆ; ಬಂಗಲೆಯನ್ನು ಬಿಟ್ಟು ನೆಲಮಾಳಿಗೆಗೆ ಹೀಗೆ ಹತ್ತಾರು ಸಲ ಹಾರಾಡಿಬಿಟ್ಟಿತು; ಪ್ರಯೋಜನವಾಗಲಿಲ್ಲ. ಕೊನೆಗೆ ಅಲ್ಲೆ, ನೆಲಮಾಳಿಗೆಯ ಬಳಿ ಮಲಗಿಬಿಟ್ಟಿತು. ನಿಶಿರಾತ್ರಿ ಕಳೆದು, ಅರುಣೋದಯವಾಗುವ ಕಾಲವು ಸಮೀಪಿಸಿತು. ನಾಯಿ ಕಂಗೆಟ್ಟಿತು. ಇನ್ನು ಅಲ್ಲಿ ತಂಗಿದ್ದು ಪ್ರಯೋಜನವಿಲ್ಲವೆಂದು ಅದರ ಇಂಗಿತಕ್ಕೆ ಅರಿವಾಯಿತು. ಅದು ಅಲ್ಲಿಂದ ಓಡಿತು .ಎಲ್ಲಿಗೆ? ....ಸ್ಯಾಮ್ಯುಯಲ್ಲನಿದ್ದ ಹಳ್ಳಿಗೆ !



# ದೇವದೂತ.

ಮರುದಿನ ಬೆಳಗ್ಗೆ ನಾಯಿಯು ಸ್ಯಾಮ್ಯುಯಲ್ಲನ ಮನೆ ಬಾಗಿಲಲ್ಲಿ ಬಂದು ನಿಂತಿತು. ಆ ವೇಳೆಗೆ ಎಂಟೊಂಭತ್ತು ಗಂಟೆಯಾಗಿತ್ತು. ಅದರ ತಾಯಿಯು ಅಲ್ಲಿರಲಿಲ್ಲ. ಅದನ್ನು ಸ್ಯಾಮ್ಯುಯಲ್ಲನು ಯಾರಿಗೋ ಮಾರಿ ಬಿಟ್ಟಿದ್ದನು. 'ಉಲ್ಫ್' ಸ್ಯಾಮ್ಯುಯಲ್ಲನನ್ನು ಹುಡುಕತೊಡಗಿತು. ಅವನು ಮನೆಯಲ್ಲಿರಲಿಲ್ಲ. ನಾಯನ್ನು ಕಂಡೊಡನೆಯೇ ಲ್ಯಾಸಿಗೂ, ಆರ್ಥರನಿಗೂ, ಮನೆಮಕ್ಕಳಿಗೂ ಆಶ್ಚರ್ಯವಾಯಿತು. ಇದೇಕೆ ಇಲ್ಲಿಗೆ ಓಡಿ ಬಂದಿತು ಎಂದು ಅವರ ಆಲೋಚನೆ ತನ್ಮನ್ನ ನೆನೆಸಿಕೊಂಡು ಅದು ನಗರದಿಂದ ಓಡಿ ಬಂದಿರಬಹುದೇ? ಆದರೆ ನಾಯಿಯು ಮಟ್ಟಿಗೆ ಬಾಯಿ ಮುಚ್ಚಲಿಲ್ಲ. ಅದು ಒಂದೇ ಸವನೆ ಬೊಗಳುತ್ತಿತ್ತು. ಅದನ್ನು ನೋಡಿ ಮನೆಯವರಿಗೆ ಅರ್ಥವಾಗಲಿಲ್ಲ.

ಕೊನೆಗೆ ಲ್ಯಾಸಿ .... ಎಷ್ಟಾದರೂ ಮಕ್ಕಳನ್ನು ಹೆತ್ತ ತಾಯಿ ಅವಳು! ಹೇಳಿದಳು :

" ಹತ್ತು ಮೈಲಿ ದೂರದಿಂದ ಹಳ್ಳಿಗೆ ಓಡಿಬಂದಿದೆ; ಅದಕ್ಕೆ ನೀರಡಿಕೆ ಇರಬಹುದು; ಹಸಿವಿರಬಹುದು. ಅದಕ್ಕೇ ಆ ರೀತಿ ಬೊಗಳುತ್ತಿದೆ ಆರ್ಥರ್! ಆ ತಟ್ಟೆಯಲ್ಲಿ ಆಕಳ ಹಾಲು ತಂದು ಸುರಿ. ಕುಡಿಯಲಿ ಪಾಪ!"

ತಾಯ ಮಾತಿನಂತೆ ತಟ್ಟೆಯಲ್ಲಿ ಹಾಲನ್ನು ಸುರಿದು ಆರ್ಥರನು ನಾಯ ಮುಂದೆ ತಂದಿರಿಸಿದನು. ಅದನ್ನದು ಒಂದೇ ಗುಟುಕಿಗೆ ಕುಡಿದು ಬಿಟ್ಟಿತು. ಬಾಲವನ್ನು ಅಲ್ಲಾಡಿಸಿತು; ಮತ್ತೆ ತಟ್ಟೆಯನ್ನು ಮೂಸಿನೋಡಿತು. ಆದರ ಹಸಿವು ಅಡಗಲಿಲ್ಲವೆಂದರಿತು ಲ್ಯಾಸಿಯು ತಟ್ಟೆ ತುಂಬ ಹಾಲನ್ನು

ಸುರಿದಳು. ಅದನ್ನೂ ನಿಮಿಷ ಮಾತ್ರದಲ್ಲಿ ಕುಡಿದುಬಿಟ್ಟು ನಾಯಿಯು ಮತ್ತೆ ಬೊಗಳಿತು. 'ವಿಪರೀತ ಹಸಿವು, ಪಾಪ! ಹೊಟ್ಟೆಗೆ ತಿಂಡಿ ಕಂಡು ಮೂರು ದಿವಸವಾಗಿರಬಹುದು' ಎನ್ನುತ್ತ ಆರ್ಥರನು ತಟ್ಟೆಯಲ್ಲಿ ಮತ್ತೆ ಹಾಲನ್ನು ತುಂಬಿ ರೊಟ್ಟಿಯ ತುಂಡುಗಳನ್ನು ಯಥೇಚ್ಛವಾಗಿ ತಂದು ಹಾಕಿದನು. ರೊಟ್ಟಿಯನ್ನು ಹೊಟ್ಟೆತುಂಬ ತಿಂದು ಹಾಲನ್ನು ಮಮತೆಯಿಂದ ಕುಡಿದು ನಾಯಿಯು ತೃಪ್ತಿಹೊಂದಿ, ಬೊಗಳುವುದನ್ನು ಬಿಟ್ಟು ಕೃತಜ್ಞತೆಯಿಂದ ಬಾಲವನ್ನು ಅಲ್ಲಾಡಿಸಲಾರಂಭಿಸಿತು.

ಹೀಗ್ರೆ ತೃಪ್ತಿಹೊಂದಿದ ನಾಯಿಯು ಕ್ಷಣಕಾಲ ಶಾಂತಿಯಿಂದಿದ್ದಿತು. ಆದರೆ ಮರುಕ್ಷಣದಲ್ಲಿ ಅದು ಮರೆತಿದ್ದ ಏನನ್ನೋ ನೆನಸಿಕೊಂಡಂತೆ ಮತ್ತೆ ಬೊಗಳಲಾರಂಭಿಸಿತು. ಮನೆಯಲ್ಲೆಲ್ಲ ಹಾರಾಡಿತು. ಯಾರನ್ನೋ ಹುಡುಕ ತೊಡಗಿತು. ನಾಯಿಯ ಈ ವಿಚಿತ್ರ ವರ್ತನೆಯು ಲ್ಯೂಸಿಗಾಗಲಿ ಆರ್ಥರನಿಗಾಗಲಿ ಅರ್ಥವಾಗಲಿಲ್ಲ. ಅದು ಮತ್ತೆ ಮತ್ತೆ ಮನೆಯಲ್ಲೆಲ್ಲ ಹುಡುಕ ತೊಡಗಿತು. ಅದು ಹುಡುಕುತ್ತಿದ್ದುದ್ದೇನನ್ನು? ತನ್ನ ತಾಯನ್ನೇ? ಅಲ್ಲ, ಸ್ಯಾಮ್ಯುಯಲ್ಲನನ್ನು!

ಅಷ್ಟರಲ್ಲಿ ತಲೆಯಮೇಲೆ ಹಸಿಹುಲ್ಲಿನ ಹೊರೆಯನ್ನು ಹೊತ್ತು ಸ್ಯಾಮ್ಯುಯಲ್ಲನು ಮನೆಗೆ ಬಂದು ಸೇರಿದನು. ಅವನನ್ನು ನೋಡಿದೊಡನೆಯೇ ನಾಯಿಯು ಆದರದಿಂದ ಅವನಮೇಲೆ ಹಾರಿ, ಪರಚಿ, ಬಿಡಿಸಿಕೊಳ್ಳ ಹೋದರೂ ಬಿಡದೆ, ಅವನ ಅಂಗಿಯನ್ನು ಹಿಡಿದು ಎಳೆಯಿತು. ಸ್ಯಾಮ್ಯುಯಲ್ಲನಿಗೆ ಅರ್ಥವಾಗಲಿಲ್ಲ. ನಾಯಿಯು ಅವನ ಬಟ್ಟೆಯನ್ನು ಬಾಯಲ್ಲಿ ಗಟ್ಟಿಯಾಗಿ ಕಚ್ಚಿ ಹಿಡಿದು ಅವನನ್ನು ಎಲ್ಲಿಗೋ ದರದರನೆ ಎಳೆಯಿತು. ಸ್ಯಾಮ್ಯುಯಲ್ಲನು ನಾಯನ್ನು ಹಿಂಬಾಲಿಸಿದನು. ಆರ್ಥರನೂ ಅವನ ಹಿಂದೆ ಹೋದನು. ನಗರದ ಕಡೆಗೆ ಎಳೆದುಕೊಂಡು ಹೋಗಿ ಕೊನೆಗದು ಅವನನ್ನು ಪೀಟರನ ಬಂಗಲೆಯ ಬಳಿ ಕರೆತಂದು ನಿಲ್ಲಿಸಿತು.



ಪ್ರಕರಣ ೧೩.

# ಬಚ್ಚಿಟ್ಟ ಭಾಗ್ಯವು ಬಿಚ್ಚಿಟ್ಟಂತಾಯಿತು!

ಸ್ಯಾಮ್ಯುಯಲ್ಲನು ನೋಡುತ್ತಾನೆ—ಪೀಟರನ ಬಂಗಲೆಗೆ ಬೀಗ ಹಾಕಿದೆ. ಹಿಂದಿನ ರಾತ್ರಿ ಡೇನಿಯಲ್ಲನು ತಂದಿರಿಸಿದ ಊಟವು ಮುಟ್ಟದೆ ಮೇಜಿನ ಮೇಲೆಯೇ ಇದೆ. ಬಳಿಕ ಡೇನಿಯಲ್ಲನನ್ನು ಕುರಿತು 'ಧಣಿ ಎಲ್ಲಿ?' ಎಂದು ವಿಚಾರಿಸಿದನು. "ನನಗೆ ಗೊತ್ತಿಲ್ಲ; ನಗರಕ್ಕೆ ನಾಟಕ ನೋಡಲು ನಿನ್ನೆ ರಾತ್ರಿ ಹೋದವನು ಈಗ ತಾನೆ ಸ್ವಲ್ಪ ಹೊತ್ತಿಗೆ ಮುಂಚೆ ಬಂದೆ. ನನಗೆ ಗೊತ್ತಿಲ್ಲ; ಬಹುಶಃ ಪೇಟೆಯ ಕಡೆ ಹೋಗಿದ್ದಾರು." ಎಂದ ಡೇನಿಯಲ್.

ನಾಯಿಯು ಮತ್ತೆ ಸ್ಯಾಮ್ಯುಯಲ್ಲನ ಬಟ್ಟೆಯನ್ನು ಕಚ್ಚಿ ಹಿಡಿದು ಅವನನ್ನು ನೆಲಮಾಳಿಗೆಯ ಬಳಿಗೆ ಎಳೆದುಕೊಂಡು ಹೋಯಿತು. ಬಾಗಿಲ ಬಳಿ ಬಂದೊಡನೆಯೇ ನಾಯಿಯು ಕಚ್ಚಿ ಹಿಡಿದಿದ್ದ ಬಟ್ಟೆಯನ್ನು ಬಿಟ್ಟಿತು. ಬಾಗಿಲನ್ನು ಮೂಸಿನೋಡಿತು. ಗಟ್ಟಿಯಾಗಿ ಬೊಗಳಿತು; ಬಾಯಿ ತುಂಬ ಬೊಗಳಿತು. ಮೂಗುಪ್ರಾಣಿಯ ಇಂಗಿತವು ಆಗತಾನೇ ಸ್ಯಾಮ್ಯುಯಲ್ಲನಿಗೆ ಅರಿವಾಗಲನುವಾಯಿತು. ಬಾಗಿಲಲ್ಲಿ ಬೀಗದ ಕೈಯಿದೆ. ಅದನ್ನು ಮುಟ್ಟುವುದೇ..... ಬೇಡವೇ? ಅವನಿಗೆ ಸಂದೇಹ. ಆದರೂ ಧೈರ್ಯದಿಂದ ಆರ್ಥರನನ್ನು ಹೊರಗಡೆ ಕಾವಲಿರುವಂತೆ ಹೇಳಿ ಬಾಗಿಲನ್ನು ತೆರೆದ; ಒಳಗಿನಿಂದ ಒಂದೇ ದುರ್ವಾಸನೆ! ಹತ್ತುಪ್ಪತ್ತು ನಿಮಿಷ ಹೊಸಗಾಳಿಯು ಒಳಗೆ ಪ್ರವೇಶಿಸಲು ಅವಕಾಶವನ್ನಿತ್ತು ಒಳಗೆ ಇಣಿಕಿ ನೋಡಿದ. ಅವನ ಕಣ್ಣಿಗೆ ಬಿದ್ದುದೇನು? ಕೆಳಗಡೆ ಧನದ ಥೈಲಿಗಳ ಮೇಲೆ ಧಣಿ! ಪ್ರಾಣಗತನಾಗಿ ಬಿದ್ದಿದ್ದಾನೆ. ಅವನ ಕಣ್ಣುಗಳು ಆಕಾಶವನ್ನು ದಿಟ್ಟಿಸಿ ನೋಡುತ್ತಿವೆ. ಆ

ಮೃತ ಶರೀರವು ಕೊಳೆಯುತ್ತಿದೆ. ಆರ್ಥರನೂ ಇಣಿಕಿ ನೋಡಿದ.

"ಧಣಿಗಳು ಸತ್ತು ಹೋದರು!" ಅವನು ಅರಚಿದ. ಆ ವೇಳೆಗೆ ಡೇನಿಯಲ್ಲನೂ ಅಲ್ಲಿ ಬಂದು ಸೇರಿದ. ನೆಲಮಾಳಿಗೆಯೊಳಗೆ ಇಣಿಕಿ ನೋಡಿ ಯಜಮಾನನು ಸತ್ತು ಬಿದ್ದಿರುವುದನ್ನು ಕಂಡು ನಾಯಿಯು ಬೊಗಳಿದ್ದೂ ಬೊಗಳಿದ್ದೇ.

ಸ್ಯಾಮ್ಯುಯಲ್ಲನಿಗೆ ತಡೆಯಲಾಗಲಿಲ್ಲ. ಅವನು ನೆಲಮಾಳಿಗೆಯ ಬಾಗಿಲನ್ನು ಮುಚ್ಚಿ, ಬೀಗ ಹಾಕಿ, ಬೀಗದ ಕೈಯನ್ನು ಕಿಸೆಯಲ್ಲಿಟ್ಟು ಕೊಂಡನು. ಆರ್ಥರನನ್ನು ಕುರಿತು ತಾನು ಹಿಂತಿರುಗಿ ಬರುವವರೆಗೂ ಬಾಗಿಲ ಬಳಿ ಕಾವಲಿರುವಂತೆ ಹೇಳಿ ಅಧಿಕಾರಿಗಳ ಬಳಿ ಓಡಿದನು. ನಡೆದ ಎಲ್ಲ ಸಮಾಚಾರಗಳನ್ನೂ — ನೆಲಮಾಳಿಗೆಯನ್ನು ಕಟ್ಟಲು ಆರಂಭಿಸಿದ ಮೊದಲು ಅಂದಿನ--ಆ ಕ್ಷಣದವರೆಗಿನ-ಎಲ್ಲ ಸಮಾಚಾರಗಳನ್ನೂ ಚಾಚೂ ತಪ್ಪದೆ ವಿವರವಾಗಿ ಅಧಿಕಾರಿಗಳಿಗೆ ವರದಿ ಒಪ್ಪಿಸಿದನು. ಅವರನ್ನು ನೆಲ ಮಾಳಿಗೆಯ ಬಳಿ ಕರೆತಂದನು. ಬಾಗಿಲನ್ನು ತೆರೆದು ಅವರಿಗೆ ತೋರಿಸಿದನು.

ಅಧಿಕಾರಿಗಳು ಪೀಟರನ ಶವವನ್ನು ಹೊರತೆಗೆಸಿ ಮಹಜರು ಕ್ರಮವನ್ನು ನಡೆಸಿದರು. ಆ ವೇಳೆಗೆ ಫ್ರೆಡರಿಕನೂ ಅಲ್ಲಿಗೆ ಬಂದು ಸೇರಿದ್ದ. ಮರಣವಾರ್ತೆಯು ನಗರದಲ್ಲೆಲ್ಲಾ ಹರಡಿತು. ಸಾವಿರಾರು ಜನ ನೆಲ ಮಾಳಿಗೆಯ ಬಳಿ ಕಿಕ್ಕಿರಿದು ಸೇರಿದರು. ಪಂಚಾಯಿತದಾರರಲ್ಲಿ ಸ್ಯಾಮ್ಯು ಯಲ್ಲನೂ, ಫ್ರೆಡರಿಕನೂ ಸೇರಿದ್ದರು. "ಸರಕಾರವನ್ನು ವಂಚಿಸುವುದಕ್ಕಾಗಿ ನೆಲಮಾಳಿಗೆಯನ್ನು ಕಟ್ಟಿಸಿ, ದಾಯತಪ್ಪಿ, ಉಸಿರಾಡದೆ ಮೃತ್ಯು!" ಎಂದು ಪ್ರಸಿದ್ಧ ಪತ್ರಿಕೆಯು ಹೊರಟಿತು.

ಸ್ಯಾಮ್ಯುಯಲ್ಲನ ಸತ್ಯಸಂಧತೆಯನ್ನು ಸರಕಾರವು ಮೆಚ್ಚಿತು. ಪೀಟರನ ವಂಚಕತನವನ್ನು ಪ್ರಪ್ರಥಮವಾಗಿ ಕಂಡುಹಿಡಿದು ಸರಕಾರಕ್ಕೆ ವರದಿಮಾಡಿದ ಅವನಿಗೆ ಶಾಸನದ ನಿಯಮಗಳಂತೆ, ಪೀಟರನ ಬಂಗಲೆ, ತೋಟ, ಇಪ್ಪತ್ತು ಚೀಲಗಳ ಹೊನ್ನು ಇವು ಕೊಡಲ್ಪಟ್ಟುವು. ಉಳಿದ

ಐವತ್ತು ಹೊನ್ನಿನ ಚೀಲಗಳು ಸರಕಾರದ ಭಂಡಾರಕ್ಕೆ ಸೇರಿದುವು.

ಸ್ಯಾಮ್ಯುಯಲ್ಲನು ಈಗ ಹಳ್ಳಿಯನ್ನು ತೊರೆದು ಪೀಟರನ—ಅಲ್ಲ.... ಅಲ್ಲ—ತನ್ನ ಬಂಗಲೆಯಲ್ಲಿ ಕುಟುಂಬಸಮೇತನಾಗಿ ವಾಸಮಾಡುತ್ತಿದ್ದಾನೆ. ಪೀಟರನು ಸಂಪಾದಿಸಿದ ಹಣವು ಪೀಟರನದಲ್ಲ. ಅವನದನ್ನು ಸಂಪಾದಿಸಿದನು ಮಾತ್ರ. ಅದನ್ನನುಭವಿಸುವುದಕ್ಕೆ ಅವನಿಗೆ ಪ್ರಾಪ್ತಿಯಿರಲಿಲ್ಲ. 'ಪಾಪಿ ಸಂಪಾದಿಸಿದುದು ಪರರ ಪಾಲು' ಎನ್ನುವುದು ಸತ್ಯವಾಯಿತು: ಪೀಟರನ ಭಾಗ್ಯವನ್ನು ಈಗ ಅನುಭವಿಸುವವರು ಸ್ಯಾಮ್ಯುಯಲ್ ಮತ್ತು ಸಾರ್ವಜನಿಕರು !

**ಬಚ್ಚಿಟ್ಟ ಭಾಗ್ಯವು ಬಿಚ್ಚಿಟ್ಟಂತಾಯಿತು !**

*     *     *     *

ಪ್ರಕರಣ ೨೪.

# ಉಪಸಂಹಾರ

ಪೀಟರನ ಸಮಾಧಿ ಪ್ರಕರಣವನ್ನು ಕುರಿತು ಚೆನ್ನಾಗಿ ಪರ್ಯಾಲೋಚಿಸಿದರೆ ಹೊರಬೀಳುವ ವಿಚಾರವಾದರೂ ಇಷ್ಟೇ; ಅವನು ಆ ಅಪಾರ ನಿಧಿಗೆ ನಿಮಿತ್ತಮಾತ್ರ ನಾಯಕನಾಗಿದ್ದನು. ಬಚ್ಚಿಟ್ಟ ಅವನ ಭಾಗ್ಯವು ಅವನ ಪ್ರಾಣಕ್ಕೇ ಸಂಚಕಾರವನ್ನು ತಂದಿತು. ದೈವಮಾಯೆಯನ್ನು ವರ್ಣಿಸಲಳವಲ್ಲ. ಜ್ಞಾನವು ಧನವನ್ನು ಮಿಂಚಿದುದು ! ನಿರ್ಮಲ ಜ್ಞಾನದಿಂದಲೇ ಮನುಷ್ಯನ ಇಹಪರ ಸಾಧನೆಗಳು!

ಪೀಟರನ ಅನಂತರ ಅವನ ನೆಲಮಾಳಿಗೆಯು ಗೋಧಿಯ ಕಣಜವಾಯಿತು. ಪ್ರತಿ ಕ್ರಿಸ್‌ಮಸ್ ಕಾಲದಲ್ಲಿಯೂ ಸ್ಯಾಮ್ಯುಯಲ್ಲನು ಬಡಬಗ್ಗರಿಗೆ ಗೋಧಿಯನ್ನು ಹಂಚಿದನು. ಅದರಿಂದ ಪೀಟರನ ಆತ್ಮಕ್ಕೆ ಶಾಂತಿಯುಂಟಾದೀತೆಂದೇ ನಂಬಬಹುದಲ್ಲವೇ ? ಬಂಗಲೆಯ ಬಳಿ ದೊಡ್ಡದೊಂದು ಗೋಶಾಲೆಯು ಸ್ಥಾಪನೆಗೊಂಡಿತು. ಈಗ ನೂರಾರು ಹಸುಗಳು ಕರೆಯುತ್ತಿವೆ. ಸಾವಿರಾರು ಅನಾಥ ಶಿಶುಗಳಿಗೆ ಉಚಿತವಾಗಿ ಹೊಟ್ಟೆತುಂಬ ಹಾಲು ಸಿಕ್ಕುತ್ತಿದೆ. ಬಂಗಲೆಯ ಬಳಿ ಪ್ರತಿ ದಿನವೂ ನೂರಾರು ಜನರು ಪಶು ಸಂರಕ್ಷಣೆಯಲ್ಲಿ, ಹಾಲಿನ ಹಂಚಿಕೆಯಲ್ಲಿ, ಬೆಣ್ಣೆಯನ್ನು ಕಡೆಯುವುದರಲ್ಲಿ, ಬೇಸಾಯ ನಡೆಸುವುದರಲ್ಲಿ ನಿರತರಾಗಿದ್ದಾರೆ. ಪೀಟರನ ಚೀಲದಲ್ಲಿನ ಒಂದೊಂದು ನಾಣ್ಯವೂ ಈಗ ಜನೋಪಕಾರಿಯಾದ ಯೋಜನೆಗಳನ್ನು ಬೆಳೆಸುವುದಕ್ಕೆ ವಿನಿಯೋಗವಾಗುತ್ತಿದೆ. ಧನದ ಪ್ರಾಶಸ್ತ್ಯ ಅದರ ಉಪಯೋಗದಲ್ಲಿ— ಮುಚ್ಚಿಡುವುದರಲ್ಲಲ್ಲ ಎಂದು ಸರಕಾರವೂ, ಸ್ಯಾಮ್ಯುಯಲ್ಲನೂ ಶ್ರೀಮಂತವರ್ಗಕ್ಕೆ ಅಚ್ಚುಮೆಚ್ಚಾಗಿ ನಿರೂಪಿಸುತ್ತಿದ್ದಾರೆ.

ಬೆಂಗಾಡಿನಂತಿದ್ದ ಬಂಗಲೆಯು ಈಗ ಜೀವಕಳೆಯಿಂದ ತುಂಬಿದೆ. ಆನಂದವು ಅಲ್ಲೆಲ್ಲ ಎತ್ತಿ ನಲಿಯುತ್ತಿದೆ. ಸ್ಯಾಮ್ಯುಯಲ್ಲನು ಫ್ರೆಡರಿಕನ

ಸಲಹೆಯಂತೆ ಆಚರಿಸಿದ ಜನೋಪಕಾರಿಯಾದ ವ್ಯವಸ್ಥೆಗಳು ಪ್ಯಾರಿಸ್ ನಗರಕ್ಕೇ ಮಾದರಿಯಾಗಿವೆ.

ಸರಕಾರದವರು ಕ್ರಾಂತಿಕಾಲದಲ್ಲಿ ನೊಂದು ಬೆಂದ ನಿರಾಶ್ರಿತರ—ಅನಾಥರ—ಮೇಲ್ಮೆಗಾಗಿ ಉತ್ತಮ, ಸುವ್ಯವಸ್ಥಿತ ಸಂಸ್ಥೆಯೊಂದನ್ನು ಪೀಟರನ ಅಂಕಿತದಲ್ಲೆ ತೆರೆದರು. ಅದು ಈಗ ಉಪಯುಕ್ತ ಸೇವೆಯನ್ನು ಸಲ್ಲಿಸುತ್ತಿದೆ.

ಪಟ್ಟಣದಲ್ಲಿ ಸ್ಯಾಮ್ಯುಯಲ್ಲನಿಗೆ ಸಾಲಕೊಡುತ್ತಿದ್ದ ಚಾರೆಲ್ಸ್ ಎಂಬ ವರ್ತಕನು ದುರಾಸೆಯ ದಾಸನಾಗಿ ವ್ಯಾಪಾರದಲ್ಲಿ ಅಪಾರ ನಷ್ಟಕ್ಕೆ ಗುರಿಯಾದನು. ಅವನು ತಾನು ಸ್ಯಾಮ್ಯುಯಲ್ಲನಿಂದ ಕೊಂಡುಕೊಂಡ ಅರ್ಧಭಾಗದ ನೆಲವನ್ನು ಮತ್ತೆ ಸ್ಯಾಮ್ಯುಯಲ್ಲನಿಗೇ ಮಾರಿಬಿಟ್ಟನು.

ಸ್ಯಾಮ್ಯುಯಲ್ಲನು ತೋಟದಲ್ಲಿ ಬೆಳೆದ ದ್ರಾಕ್ಷಿ ಸೇಬುಗಳಲ್ಲಿ—ತಾನು ಗುತ್ತಿಗೆಗಾರನಾಗಿದ್ದಾಗ ಯಾವ ಭಾಗವು ಪೀಟರನಿಗೆ ಸೇರುತ್ತಿದ್ದಿತೋ—ಆ ಭಾಗವನ್ನು ಅವನು ಆಸ್ಪತ್ರೆಯಲ್ಲಿ ಬಡರೋಗಿಗಳಿಗೆ ಉಚಿತವಾಗಿ ಹಂಚುತ್ತ ಬಂದನು.

ಸ್ಯಾಮ್ಯುಯಲ್ಲನ ಧರ್ಮಕಾರ್ಯಗಳು ಹೆಚ್ಚಿದಂತೆಲ್ಲ ಅವನ ನಿಧಿಯೂ ಹೆಚ್ಚುತ್ತ ಬಂದಿತು. ನಿಧಿಯು ಹೆಚ್ಚಿದಂತೆಲ್ಲ ಅವನು ಹೆಚ್ಚು ಹೆಚ್ಚಾಗಿ ಧರ್ಮಾಸಕ್ತನಾದನು. ಹೀಗೆ ಧನದ ಬೆಳವಣಿಗೆಗೆ ಧರ್ಮವೂ, ಧರ್ಮದ ಬೆಳವಣಿಗೆಗೆ ಧನವೂ ತಾಳಿದ್ದ ಪರಸ್ಪರವೂ, ಪವಿತ್ರವೂ ಆದ ಸಂಬಂಧವನ್ನು ಸ್ಯಾಮ್ಯುಯಲ್ಲನು ತನ್ನ ಸಾರ್ವಜನಿಕ ಹಿತಚಿಂತನೆಯಲ್ಲಿ, ತನ್ನ ನಿತ್ಯ ಜೀವನದಲ್ಲಿ ನಿರೂಪಿಸುತ್ತ ಬಂದನು.

ಸ್ಯಾಮ್ಯುಯಲ್ ಅನಕ್ಷರಸ್ಥನಾದರೂ, ವಿವೇಕಿ; ವಿಶಾಲಹೃದಯಿ; ಸತ್ಯವಂತ; ಸರಳ ಸ್ವಭಾವಿ; ಧರ್ಮದೃಷ್ಟಿಯುಳ್ಳವನು; ಧನಪ್ರಾಪ್ತಿಯಾದ ಮೇಲೂ ಅವನು ದೈನ್ಯತೆಯನ್ನು ಬಿಡಲಿಲ್ಲ; ಬದಲಾಗಿ ಸಾವಿರಾರು ದೀನ ಹೀನರಿಗೆ ಅವನು ಪ್ರಿಯನಾದ ಊರುಗೋಲಾದನು. ಪೀಟರನ

ಆತ್ಮಶಾಂತಿಗಾಗಿ ಅವನು '**ಪೀಟರ್ ಚಿಕಿತ್ಸಾಲಯ**' ಎಂಬ ದೊಡ್ಡದೊಂದು ವೈದ್ಯಶಾಲೆಯನ್ನು ಕಟ್ಟಿಸಿದನು. ತನಗೆ ದೊರೆತ ನಿಕ್ಷೇಪವನ್ನು ಜನಪ್ರಿಯವೂ, ದೇಶೋದ್ಧಾರಕವೂ, ಧರ್ಮಸಮ್ಮತವೂ, ಉಪಯುಕ್ತವೂ ಆದ ರೀತಿಯಲ್ಲಿ ಸ್ವಾಮ್ಯುಯಲ್ಲನು ವಿನಿಯೋಗಿಸುತ್ತಲೇ ಬಂದನು.

ಇಷ್ಟಾದರೂ ಅವನ ದ್ರವ್ಯವು ಕುಂದದೆ ಅದು ದಿನೇ ದಿನೇ ವೃದ್ಧಿಯಾಗುತ್ತಲೇ ಇತ್ತು! ದೈವನ್ಯಾಯಕ್ಕೆ ಮಿಂಚಿದ ನ್ಯಾಯವಿಲ್ಲ!

**ಓಂ ಶಾಂತಿಃ ಶಾಂತಿಃ ಶಾಂತಿಃ**

